|| ಸಿರಿಗನ್ನಡಂ ಗೆಲ್ಗೆ ||

ಶ್ರೀವಿದ್ಯಾರಣ್ಯ ಗ್ರಂಥಮಾಲೆ.

೧ನೆಯ ಗ್ರಂಥ.

ಚುರಮುರಿಕೃತ

# ಶಾಕುಂತಲ ನಾಟಕವು



( ನಾಲ್ಕನೆಯ ಸರತಿ. )

ಪರಿಚಯಕಾರರೂ ಪರಿಶೋಧಕರೂ

ಶ್ರೀ. ಮುದವೀಡು ಕೃಷ್ಣರಾಯರು.



೧೯೩೪.





ಬೆಲೆ ೧ ರೂಪಾಯಿ.

ಮುದ್ರಕರು:—ಶ್ರೀ. ಸಾತಪ್ಪಾ ಫಡೆಪ್ಪಾ ಚೌಗುಲೆಯುವರು.
ಮುದ್ರಣಸ್ಥಳ:—ಶ್ರೀಮಹಾವೀರ ಮುದ್ರಣಾಲಯ, ಮಠದೋಣಿ
ಮನೆನಂಬರ ೬೧೬ ಬೆಳಗಾವಿ.

ಶ್ರೀ. ನಗರ ವೆಂಕಣ್ಣಾಚಾರ್ಯರು.
ಶ್ರೀ. ಕುಲಕರ್ಣಿ ಯಲಗುರಪ್ಪನವರು.
ಶ್ರೀ. ಹುರಳಿಕುಪ್ಪಿ ಅನಂತಭಟ್ಟರು.
ಶ್ರೀ. ಬಿ. ಕಲ್ಯಾಣಶರ್ಮರು.
ಶ್ರೀ. ನಾರಾಯಣಶರ್ಮರು.

ಶ್ರೀ. ವೆಂಕಟೇಶ ರಾಮಚಂದ್ರ ನಗರ, ಆಡಳತೆಗಾರರು,
ಶ್ರೀವಿದ್ಯಾರಣ್ಯ ಗ್ರಂಥಪ್ರಕಾಶನ ಸಮಿತಿ ಇವರು
ಬೆಳಗಾವಿಯೊಳಗೆ ರಾಮಲಿಂಗಖಿಂಡಿ ಮನೆ ನಂಬರು ೧೩೦೨
ಇಲ್ಲಿ ಪ್ರಕಟಿಸಿದರು.

ಪರಿಚಯಕಾರರೂ ಪರಿಶೋಧಕರೂ



ಶ್ರೀ. ಮುದವೀಡು ಕೃಷ್ಣರಾಯರು.

ಕೃಷ್ಣ, ಮುದ್ರಣಾಲಯ ಬೆಳಗಾವಿ

ಶ್ರೀವಿದ್ಯಾರಣ್ಯ ಸಮಿತಿ ಬೆಳಗಾವಿ.

## ಅಧ್ಯಕ್ಷರು.



ಶ್ರೀ. ಬಿ. ಕಲ್ಯಾಣಶರ್ಮರು.

ಕೃಷ್ಣ. ಮುದ್ರಣಾಲಯ ಬೆಳಗಾವಿ.

## ಸ್ವ. ಚುರಮುರೀ ಶೇಷಗಿರಿರಾಯರ

ಹಾಗು ಅವರ

# ಕನ್ನಡ ಶಾಕುಂತಲ ನಾಟಕದ

## ಕಿಂಚಿತ್ ಪರಿಚಯ.

ಬೆಳಗಾವಿಯ ಶ್ರೀ ವಿದ್ಯಾರಣ್ಯ-ಗ್ರಂಥಪ್ರಕಾಶನ ಸಮಿತಿಯವರು ಈ ಪುಸ್ತಕವನ್ನು ತಮ್ಮ ಪ್ರಕಟನೆಯ ಮೊದಲನೆಯ ಪುಸ್ತಕವಾಗಿ ಆರಿಸಿ ಇದರ ಅಲ್ಪಪರಿಚಯವನ್ನು ಕನ್ನಡನಾಡಿನ ಈಗಿನ ಪೀಳಿಗೆಗೆ ನಾನು ಮಾಡಿಕೊಡ ಬೇಕೆಂದು ನನಗೆ ಅಪ್ಪಣೆ ಮಾಡಿದರು. ಸ್ವ. ಚುರಮುರೀ ಗುಂಡೇರಾಯರು (ಶೇಷಗಿರಿರಾಯರ ಕಕ್ಕನ ಮಕ್ಕಳು) ಇದೇ ಕೆಲಸವನ್ನು ಸುಮಾರು ೩೦ ವರ್ಷಗಳ ಹಿಂದೆ ನನಗೆ ಹೇಳಿದ್ದರು. ಆದರೆ "ಶ್ರೇಯಾಂಸಿ ಬಹುವಿಘ್ನಾನಿ" ಎಂಬ ವಚನದಂತೆ ನನ್ನ ಕೈಯಿಂದ ಈ ಕಾರ್ಯವಾಗುವ ಸುಯೋಗವು ಇಂದಿನವರೆಗೆ ಬರಲೇ ಇಲ್ಲ; ನಡುನಡುವೆಯಂತೂ ನನ್ನಿಂದ ಈ ಕೆಲಸವು ನೀಗದೆಂದೇ ತೋರುವಂಥ ಅನೇಕ ಅಡಚಣಿಗಳು ಬಂದು ಹೋದವು. ಆದರೂ ಅಚಿಂತ್ಯಾದ್ಭುತಮಹಿಮನೂ ಭಯಕೃದ್-ಭಯನಾಶನನೂ ಆದ ಪರಮಾತ್ಮನ ಅನುಗ್ರಹದಿಂದ ಆ ಎಲ್ಲ ಎಡರು-ತೊಡರುಗಳು ದೂರ ವಾಗಿ ನಾನು ಈ ಕಾರ್ಯವನ್ನು ಯಥಾಶಕ್ತಿ ಪೂರೈಸುವ ಯೋಗವು ಒದಗಿ ಬಂದುದಕ್ಕಾಗಿ ಆ ಕಾರುಣ್ಯನಿಧಿಯ ಕರುಣಾಪ್ರಭಾವವನ್ನು ಮೊದಲು ಕೊಂಡಾಡದಿರಲಾರೆನು.

ಹಿಂದುಸ್ಥಾನದೊಳಗಿನ ಪ್ರತಿಯೊಂದು ದೇಶಭಾಷೆಯಲ್ಲಿ ಮಾತ್ರವಲ್ಲದೆ ಪಶ್ಚಿಮದ ಯುರೋಪಖಂಡದ ಪ್ರತಿಯೊಂದು ದೇಶದ ಪ್ರತಿಯೊಂದು ಭಾಷೆ ಯಲ್ಲಿಯೂ ಅನೇಕ ಭಾಷಾಂತರಗಳನ್ನು ಹೊಂದಿ ಪ್ರಸಿದ್ಧವಾದ ಕಾಲಿದಾಸನ ಶಾಕುಂತಲವು ಕರ್ನಾಟಕದಲ್ಲಿ ಕನ್ನಡ ಭಾಷೆಯಲ್ಲಿಲ್ಲದಿರುವದು ಹುಟ್ಟುಗನ್ನ ಡಿಗರಾದ ಚುರಮುರೀ ಶೇಷಗಿರಿರಾಯರಿಗೆ ದೊಡ್ಡದೊಂದು ಕುಂದೆನಿಸಿ ತಮ್ಮ ನಾಡನುಡಿಯ ಈ ಕೊರತೆಯನ್ನು ಆದಷ್ಟು ಬೇಗ ದೂರ ಮಾಡ

ಬೇಕೆಂಬ ಬಲವಾದ ಬಯಕೆಯಿಂದ ಅವರು ಇದನ್ನು ಕನ್ನಡಕ್ಕೆ ಪರಿವರ್ತಿಸಿ ದರು. (ಸೂಚನೆಯ ಪದ್ಯಗಳೊಳಗಿನ ೨ನೆಯದನ್ನು ನೋಡಿರಿ.) ಶಾಲಿವಾಹನ ಶಕೆ ೧೭೭೧ನೇ (ಕ್ರಿ. ಶ. ೧೮೬೯-೭೦) ಶುಕ್ಲ ಸಂವತ್ಸರದ ಪುಷ್ಯ ಬಹುಳ ಚತುರ್ಥಿ ಶುಕ್ರವಾರಕ್ಕೆ "ಈ ಕೃತಿ ಪೂರ್ಣವಾಯ್ತು" ಎಂದು ಪುಸ್ತಕದ ಕೊನೆಯಲ್ಲಿ ಮುದ್ರಿತವಾಗಿರುವ "ನೂರಾನಾಲ್ಕವರಷ್ಟರಿಂ ಗುಣಿಸು" ಎಂಬ ಶ್ಲೋಕದಲ್ಲಿ ಶೇಷಗಿರಿರಾಯರೇ ಹೇಳಿದ್ದಾರೆ. ಬರೆಯುವದು ಮುಗಿದ ಒಂದೆರಡು ತಿಂಗಳುಗಳಲ್ಲಿಯೇ ಇದನ್ನು ಮುಂಬಯಿಯ ಎಜ್ಯುಕೇಶನ್ ಸೊಸಾಯಿಟೀ ಮುದ್ರಣಾಲಯದಲ್ಲಿ ಮುದ್ರಿಸಿ ಪ್ರಸಿದ್ಧಮಾಡಿಯೂ ಬಿಟ್ಟರು. ಈ ಮೊದಲನೆಯ ಆವೃತ್ತಿಯ ಒಂದು ಪ್ರತಿಯು ಕ್ರಿ. ಶ. ೧೮೮೪ರ ಸುಮಾರಕ್ಕೆ ನಾನು ಕಾರವಾರದ ಹಾಯಸ್ಕೂಲಿನಲ್ಲಿ ಓದುತ್ತಿದ್ದಾಗ್ಗೆ ನನಗೆ ದೊರೆತದ್ದೂ ಆಗಿನ ನನ್ನ ವಯೋಮಾನಕ್ಕನುಸರಿಸಿ ಇದರೊಳಗಿನ ಕೊತವಾಲ ಮೀನುಗಾರರ ಪ್ರವೇಶವನ್ನೇ ನಾನು ತಿರುತಿರುಗಿ ಓದಿದ್ದೂ ಇನ್ನೂ ನನಗೆ ಪೂರಾ ನೆನಪಿನಲ್ಲಿದೆ. ಧಾರವಾಡ ಟ್ರೇನಿಂಗ ಕಾಲೇಜಿನ ಗ್ರಂಥ ಸಂಗ್ರಹದಲ್ಲಿ ಈ ಆವೃತ್ತಿಯದೊಂದು ಪ್ರತಿಯು ಇಂದಿಗೂ ನೋಡಲು ದೊರೆಯುತ್ತಿರುವದು ಕನ್ನಡಿಗರ ಭಾಗ್ಯವೇ ಸರಿ.

ಮೊದಲನೆಯ ಆವೃತ್ತಿಯು ಪ್ರಸಿದ್ಧವಾದ ಹನ್ನೆರಡು ವರ್ಷಗಳ ತರ ವಾಯ ಕ್ರಿ. ಶ ೧೮೮೨ರಲ್ಲಿ ಇದರ ೨ನೆಯ ಆವೃತ್ತಿಯು ಇಲ್ಲಿಯ ಜ್ಞಾ ವರ್ಧಕ ಮುದ್ರಾಲಯದಲ್ಲಿ ಮುದ್ರಿತವಾಗಿ ಪ್ರಸಿದ್ಧಿಸಲ್ಪಟ್ಟಿತು. ಈ ಎರ ನೆಯ ಆವೃತ್ತಿಯಲ್ಲಿ ಅಲ್ಪಸ್ವಲ್ಪ ಬದಲಾವಣೆಗಳಾಗಿರುವದು ಕಂಡುಬ ತ್ತದೆ. ಇದರ ಮುದ್ರಣ ನಡೆದ ಕಾಲಕ್ಕೇ ಶೇಷಗಿರಿರಾಯರು ಆಕಸ್ಮಿಕವಾ ಮರಣಹೊಂದಿದ ಮೂಲಕ ಈ ಬದಲಾವಣೆಗಳನ್ನು ಅವರೇ ಮಾಡಿ ರಬಹ ದೆಂದು ಊಹಿಸಲು ಅಡ್ಡಿ ಇಲ್ಲ. ಮುಂದೆ ಮತ್ತೆ ಹನ್ನೆರಡು ವರ್ಷ ನಂತರ ಅಂದರೆ ೧೮೯೪ರಲ್ಲಿ ಇದರ ಮೂರನೆಯ ಆವೃತ್ತಿಯು ಇಲ್ಲಿ ಕರ್ನಾಟಕ ಬುಕ್ಕಡಿಪೋ ಪ್ರೆಸ್ಸಿನ ಯಜಮಾನರಾಗಿದ್ದ ಶ್ರೀ. ಅನಾ ಚನವೀರಪ್ಪನವರಿಂದ ಮುದ್ರಿತವಾಗಿ ಪ್ರಕಟಿಸಲ್ಪಟ್ಟಿತು. ಇದು ೨ನೇ ಆವೃತ್ತಿಯ ಪುನರ್ಮುದ್ರಣವೇ ಆಗಿರುವದೆಂದು ಹೇಳಬಹುದು. ಆ ಬ ನಾಲ್ವತ್ತು ವರ್ಷಗಳ ಸುದೀರ್ಘಕಾಲದ ನಂತರ ಈ ನಾಲ್ಕನೆಯ ಆವೃ

ಯನ್ನು ಪ್ರಕಟಿಸುವ ಸಾಹಸವನ್ನು ಕೈಕೊಂಡು ಹೊಸಗನ್ನಡನಾಡಿನ ಸರ್ವೋತ್ಕೃಷ್ಟ ಗ್ರಂಥಗಳೊಳಗಿನ ಹಳೆಯದೊಂದು ನಾಮಶೇಷವಾಗದಂತೆ ಅದನ್ನು ಉಳಿಸುವ ಮಹತ್ಕಾರ್ಯಕ್ಕೆ ಉದ್ಯುಕ್ತರಾದ ಬೆಳಗಾವಿಯ ಶ್ರೀವಿದ್ಯಾರಣ್ಯ ಗ್ರಂಥಪ್ರಕಾಶನ ಸಮಿತಿಯವರನ್ನು ನಾನು ಅಭಿನಂದಿಸ ದಿರಲಾರೆನು.

ಈ ಮೊದಲು ಪ್ರಸಿದ್ಧವಾಗಿರುವ ಮೂರೂ ಆವೃತ್ತಿಗಳಿಂದ ಸ್ವ. ಶೇಷಗಿರಿರಾಯರ ಕಾವ್ಯಪ್ರತಿಭೆಯ ಪರಿಚಯವು ಮಾತ್ರ ಇತ್ತಕಡೆಯ ಜನ ರಿಗೆ ತುಂಬಾ ಆಯಿತೆನ್ನಬಹುದಲ್ಲದೆ ಅವರ ಜೀವನಚರಿತ್ರೆಯ ಪರಿಚಯವು ಎಷ್ಟೂ ಆಗಿರುವದಿಲ್ಲ. ಅವರೇ ಬರೆದಿರುವ ಸೂಚನೆಯ ಪದ್ಯಗಳೊಳಗಿನ ಕೊನೆಯದರಲ್ಲಿ "ತುರಮುರೀತ್ಯುಪನಾಮಕ ರಾಮಚಂದ್ರಜಂ ಜಡಮತಿ ಕಬ್ಬಿ ಶೇಷಗಿರಿಯೆಂಬವಂ ಬಡವರ ವಿದ್ಯೆಕಾಗಿ ತನುವಿಂ ಮನದಿಂ ಧನದಿಂದೆ ಸಾಹಸಂ ಪಡುತಿಹ ಧೀರ ಚನ್ನಬಸವೇಶ್ವರ ದಿವ್ಯರ ಪಾದಭೂಷಣಂ ಕಡು ಗುರು ಭಕ್ತಿಯಿಂದೀ ಕೃತಿಗೈದು ಮಾಡಿದಂ" ಎಂಬುದನ್ನಿಷ್ಟೇ ಹೇಳಿದ್ದಾರೆ. ತಮ್ಮ ಗುರುಗಳ ನಾಮನಿರ್ದೇಶಪ್ರಸಂಗದಲ್ಲಿ ಅವರು ಉಪಯೋಗಿಸಿದ ವಿಶೇಷಣಗಳನ್ನು ನೋಡಿದರೆ ಇತ್ತಕಡೆಯ ಕನ್ನಡ ಜನಾಂಗಕ್ಕೆ ಒಂದು ಕಾಲಕ್ಕೆ ದುರ್ಲಭವಾಗಿದ್ದ ಕನ್ನಡ ವಿದ್ಯಾಧ್ಯಯನದ ಅನುಕೂಲತೆಯನ್ನು ಅತ್ಯಂತ ಸಾಹಸದಿಂದ ಒದಗಿಸುವದಕ್ಕೆ ಕಾರಣಪುರುಷರಾದವರಲ್ಲಿ ಒಬ್ಬ ರಾಗಿದ್ದ ಧಾರವಾಡದ ಡೆಪೂಟೀ ಚನ್ನಬಸಪ್ಪನವರೇ ಇವರ ಗುರುಗಳಾಗಿರ ಬೇಕೆಂದು ನಿಃಸಂದೇಹವಾಗಿ ಊಹಿಸಬಹುದು. ಶೇಷಗಿರಿರಾಯರು ಈ ಪದ್ಯ ದಲ್ಲಿ ಹೇಳಿದ ಅತ್ಯಲ್ಪ ಆತ್ಮವೃತ್ತವೂ "ಧೀರ ಚನ್ನಬಸವೇಶ್ವರ ದಿವ್ಯರ ಪಾದಭೂಷಣಂ" ಎಂಬುದಾಗಿ ತಮ್ಮ ಗುರುಗಳ ವಿಷಯವಾಗಿ ವ್ಯಕ್ತಪಡಿ ಸಿದ ವಿನಮ್ರಭಾವವೂ ಕರ್ನಾಟಕದ ಪ್ರಾಚೀನ ಕವಿಗಳ ಪರಂಪರೆಗೆ ಅನು ರೂಪವಾದದ್ದೇ ಇರುವದು. ಆದರೆ ಶೇಷಗಿರಿರಾಯರು ಕೀರ್ತಿಶೇಷರಾದ ನಂತರ ಪ್ರಸಿದ್ಧವಾದ ಎರಡು ಆವೃತ್ತಿಗಳ ಪ್ರಕಾಶಕರು ಅವರ ಜೀವನ ವೃತ್ತಾಂತದ ಪರಿಚಯವನ್ನು ಕನ್ನಡನಾಡಿಗೆ ಮಾಡಿಕೊಡುವ ಪ್ರಯತ್ನ ಮಾಡದಿದ್ದದ್ದು ವಿಷಾದದ ಮಾತೇ ಸರಿ. ಈ ಎರಡೂ ಆವೃತ್ತಿಗಳು ಪ್ರಸಿದ್ಧ ವಾದ ಕಾಲಕ್ಕೆ ಸ್ವ. ಶೇಷಗಿರಿರಾಯರನ್ನು ತುಂಬಾ ಬಲ್ಲವರೂ ಅವರ ಯೋಗ್ಯ

ತೆಯನ್ನು ಚನ್ನಾಗಿ ತಿಳಿದವರೂ ಆದ ಸ್ವ. ವೆಂಕಟ ರಂಗೋ ಕಟ್ಟಿಯವರೇ ಮೊದಲಾದ ಕನ್ನಡ ಸಾಹಿತ್ಯಸೇವಾಧುರೀಣರನೇಕರು ಜೀವಿಸಿದ್ದುದರಿಂದ ಅವರೊಳಗಿನ ಯಾರಿಂದಲಾದರೂ ಶೇಷಗಿರಿರಾಯರ ಹಾಗು ಅವರ ಶಾಕುಂತಲದ ಪರಿಚಯವನ್ನು ಮಾಡಿಸಿಕೊಡುವದು ಅತ್ಯಂತ ಶ್ರೇಯಸ್ಕರವಾಗಬಹುದಾಗಿತ್ತು. ಆದರೆ ಕನ್ನಡಿಗರ ದುರ್ದೈವದಿಂದ ಹಾಗೆ ಆಗದೆ ಇಷ್ಟ ಮೂಲಕ ಶೇಷಗಿರಿರಾಯರ ಸಮಕಾಲೀನರೆಲ್ಲರೂ ದಿವಂಗತರಾದ ನಂತರ ಈಗ ಉಳಿದಿರುವ ಅವರ ಆಪ್ತೇಷ್ಟರಿಂದ ಹಲಕೆಲವು ಸಂಗತಿಗಳನ್ನು ಕೇಳಿ ತಿಳಿದುಕೊಂಡ ಅಲ್ಪಜ್ಞನಾದ ನಾನು ಈ ಕೆಲಸವನ್ನು ಮಾಡಬೇಕಾಗಿದೆ.

ಶೇಷಗಿರಿರಾಯರ ಮೂಲ ಮನೆತನವು ರಾಮದುರ್ಗದ್ದು. ಅಲ್ಲಿ ಈ ಮನೆತನಕ್ಕೆ ಮುದಕವಿಯುವರೆಂದು ಕರೆಯುವರು. ಧಾರವಾಡ ಬೆಳಗಾವಿ ಜಿಲ್ಹೆಗಳಲ್ಲಿ ಒಳ್ಳೇ ನಿಸ್ಪೃಹ ಮಾಮಲೇದಾರರೆಂದು ಪ್ರಸಿದ್ಧರಾಗಿದ್ದ ಸ್ವ. ಮುದಕವೀ ಶೇಷಗಿರಿರಾಯರೆಂಬವರು ಇದೇ ಮನೆತನಕ್ಕೆ ಸೇರಿದವರು. ರಾಮದುರ್ಗವನ್ನು ಬಿಟ್ಟು ಧಾರವಾಡಕ್ಕೆ ಈ ಮನೆತನದವರು ಎಂದು ಯಾಕೆ ಬಂದರೆಂಬುವದು ತಿಳಿಯುವದಿಲ್ಲ. ಧಾರವಾಡಕ್ಕೆ ಬಂದನಂತರ ಚುರಮುರಿಯವರೆಂಬ ದೊಡ್ಡ ಲಿಂಗಾಯತ ವ್ಯಾಪಾರಸ್ಥರಲ್ಲಿ ಇವರ ಮೂಲ ಪುರುಷರು ಗುಮಾಸ್ತರಾಗಿ ನಿಂತು ಬಹುದಿವಸ ಅವರಲ್ಲಿ ಕೆಲಸಮಾಡಿದ್ದರಿಂದ ಇವರಿಗೂ ಚುರಮುರಿಯವರೆಂದೇ ಅಡ್ಡ ಹೆಸರು ಬಿತ್ತು. ಧಾರವಾಡದ ಪೂರ್ವಕ್ಕೆ ಎರಡು ಹರದಾರಿ ದೂರ ಇರುವ ಗೋವನಕೊಪ್ಪ ಎಂಬ ಹಳ್ಳಿಯ ವತನದಾರ ಗೌಡಕೀ ಹಕ್ಕು ಈ ಮನೆತನಕ್ಕೆ ದೊರೆತಿತ್ತು. ( ಹ್ಯಾಗೆಂಬುವದು ಗೊತ್ತಾಗುವದಿಲ್ಲ. ) ಶೇಷಗಿರಿರಾಯರ ತಂದೆಯವರಾದ ರಾಮಚಂದ್ರರಾಯರು ಪೋಲೀಸಖಾತೆಯಲ್ಲಿ ಕೆಲಸಕ್ಕೆ ಸೇರಿದ್ದರು. ಸ್ವತಃ ಬಂದು ಗೌಡಕೀ ಮಾ[illegible] ಬೇಕೆಂದು ವರಿಷ್ಠಾಧಿಕಾರಿಗಳು ಹೇಳಿದ್ದರಿಂದ ಅದಕ್ಕೊಪ್ಪಿಕೊಳ್ಳದೆ [illegible] ಹಕ್ಕನ್ನೇ ಬಿಟ್ಟುಕೊಟ್ಟರು. ಆಗಿನ ಕಲಾದಗೀ ಜಿಲ್ಹೆ ( ಈಗಿನ ವಿಜಾಪು[illegible] ಜಿಲ್ಹೆ) ಯ ಬಾಗಲಕೋಟೆಯಲ್ಲಿ ಫೌಜದಾರರಾಗಿದ್ದಾಗ ಪೋಲೀಸ ಸು[illegible] ರಿಂಟೆಂಡೆಂಟರಿಗೂ ಇವರಿಗೂ ಯಾವದೋ ಸಂದರ್ಭದಲ್ಲಿ ವಾಗ್ವಾದವಾಗ[illegible] ಇವರು ಸುಪರಿಂಟೆಂಡೆಂಟರನ್ನು ಹೊಡೆದೇಬಿಟ್ಟರು. ಈ ಬಗ್ಗೆ ಪ್ರಕರ[illegible] ನಡೆದು ರಾಮಚಂದ್ರರಾಯರಿಗೆ ಶಿಕ್ಷೆಯಾಯಿತು. ಆಗಿನ ನಿಯಮ[illegible]

ಪ್ರಕಾರ ಪ್ರತಿಷ್ಠಿತ ಮನೆತನದವರಾದ ಇವರನ್ನು ಕಲಾದಗಿಯ ಸಿವ್ಹಿಲ್ ಜೇಲಿನಲ್ಲಿಟ್ಟರು. ರಾಮಚಂದ್ರರಾಯರ ಅಣ್ಣಂದಿರಾದ ಕೃಷ್ಣರಾಯರು ಆಗಿನ ಪರಸಗಡ ತಾಲೂಕ ಸವದತ್ತಿಯಲ್ಲಿ ವಕೀಲರಾಗಿದ್ದರು. ಸಿವ್ಹಿಲ್ ಜೇಲಿನಲ್ಲಿದ್ದಾಗ ರಾಮಚಂದ್ರರಾಯರ ವೆಚ್ಚವನ್ನೆಲ್ಲ ಅವರೇ ಸಾಗಿಸುತ್ತಿದ್ದರು. ರಾಮಚಂದ್ರರಾಯರು ಜೇಲಿನೊಳಗಿನ ತಮ್ಮ ಸಂಗಡಿಗರಿಗೆಲ್ಲ ತಮ್ಮ ವೆಚ್ಚದಿಂದಲೇ ಪ್ರತಿನಿತ್ಯ ಮಿಷ್ಟಾನ್ನಭೋಜನ ಮಾಡಿಸಿ ಭಾಗವತ ಪುರಾಣ ಹೇಳುತ್ತಿದ್ದರು. ಕೆಲವು ದಿನಗಳ ತರುವಾಯ ಹಾಯಕೋರ್ಟಿನ ಅಪ್ಪಣೆಯ ಮೇರೆಗೆ ಬಿಡುಗಡೆ ಹೊಂದಿ ಬಂದು ರಾಮಚಂದ್ರರಾಯರು ತಮ್ಮ ಅಣ್ಣಂದಿರ ಮನೆಯಲ್ಲಿಯೇ ಸವದತ್ತಿಯಲ್ಲಿ ಇರಹತ್ತಿದರು. ಭಾಗವತಪುರಾಣ ಹೇಳಲು ಸಮರ್ಥರಾದ ಇವರು ಒಳ್ಳೇ ರಸಿಕರೂ ಕವಿಗಳೂ ಆಗಿದ್ದರು. ನವರಾತ್ರಿಯ ಪೂಜಾಸಮಾರಂಭದಲ್ಲಿ ಪ್ರತಿವರ್ಷ ಪ್ರತಿದಿವಸ ಬೇರೆ ಬೇರೆ ಆರತೀ ಪದಗಳನ್ನು ಆಗಿಂದಾಗ ಕಟ್ಟಿ ಹಾಡುತ್ತಿದ್ದರೆಂದು ಹೇಳುತ್ತಾರೆ. ಈ ಪದಗಳಾವವೂ ಉಪಲಬ್ಧವಿದ್ದಂತೆ ತೋರುವದಿಲ್ಲ. ಆದರೂ ರಾಮಚಂದ್ರರಾಯರು ಸ್ವಾನುಭವದಿಂದ ಮಾಡಿದ ಬೋರೊಂದು ಪದದ ಒಂದೇ ನುಡಿಯು ಗೊತ್ತಾಗಿದೆ. ಅಷ್ಟರಿಂದಲೂ ಇವರ ಕವಿತ್ವಸಾಮರ್ಥ್ಯದ-ಕಲ್ಪನೆಯು ಬರಬಹುದಾದ ಮೂಲಕ ಅದನ್ನು ಇಲ್ಲಿ ಕೊಟ್ಟಿದೆ.

|| ಪದ ||

ಗಣಿಕೆಯರ ನೆರೆಮೋಹ ನಿಜವೆಂ ।
ದೆಣಿಸಲಾಗದು ರಸಿಕರಾದವರ್ ।
ಹಣವನಿತ್ತರೆ ಹಗಲೆ ರಮಿಪರು ಗುಣವನೀಕ್ಷಿಸರೆಂದಿ
ಗಾದರು || ಪಲ್ಲ ||
ಮೊದಲಿಗೋರ್ವನೊಳ್ ರಮಿಸಿ ಕಳುಹಿಸಿ ।
ಸದನಕೆ ಮತ್ತೋರ್ವನು ಬರೆ ।
ಕದಲಿದಾ ನಿರಿಗೆಗಳನು ತಿದ್ದುತೆ ಸುದತಿ ಕುಂಕುಮ ಪಣೆಗೆ ರೇಖಿಸಿ.
ಹೃದಯದೊಲ್ಲಭ ತಡೆದೆಯಾತಕೊ ।
ಮದನ ನಂಬಿಗೆ ತಾಳಲಾರೆನು ।
ಮುದದಿ ರತಿಗೂಡೆನುತೆ ಸೊಪ್ಪಾದಧರ ಬಾಯೊಳಗಿಡುವ
ರಕಟಾ || ೧ ||

ರಾಮಚಂದ್ರರಾಯರ ಮಕ್ಕಳಾದ ಶೇಷಗಿರಿರಾಯರಲ್ಲಿ ಹಿರಿಯರ ನ್ಯಾಯನಿಷ್ಠುರನಿಸ್ಪೃಹಸ್ವಭಾವವೂ, ಸಾಹಸ ಪ್ರವೃತ್ತಿಯೂ, ಕವಿತ್ವ ಸ್ಫೂರ್ತಿಯೂ ಆನುವಂಶಿಕವಾಗಿಯೇ ಇಳಿದುಬಂದಿದ್ದವೆಂದು ಹೇಳಬಹುದು. ಚಿಕ್ಕಂದಿನ ವಿದ್ಯಾಭ್ಯಾಸವು ತಕ್ಕಮಟ್ಟಿಗೆ ಆದಕೂಡಲೆ ಇವರು ನೆಟ್ಟಗೆ ಪುಣೆಗೆ ಹೋಗಿ ಅಲ್ಲಿಯ ಎಂಜಿನಿಯರಿಂಗ ಕಾಲೇಜಿನಲ್ಲಿ ಶಿಕ್ಷಣಹೊಂದಿ ಪಬ್ಲಿಕ್‌ವರ್ಕ್ಸ ಡಿಪಾರ್ಟಮೆಂಟಿನಲ್ಲಿ ಕೆಲಸಕ್ಕೆ ಸೇರಿದರು. ಮುಂಬಯಿಯಲ್ಲಿ ಸಮುದ್ರವನ್ನು ಹುಗಿದು ರೇವು ಕಟ್ಟುವ ಕೆಲಸ ನಡೆದಾಗ್ಗೆ ಇವರು ಅಲ್ಲಿ ಓವ್ಹರಸೀಯರರಾಗಿ ಕೆಲಸ ಮಾಡುತ್ತಿದ್ದರು. ಮುಂಬಯಿಯಲ್ಲಿದ್ದಾಗಲೇ ಶಾಕುಂತಲದ ಭಾಷಾಂತರವನ್ನು ಮುಗಿಸಿ ಅದನ್ನು ಅಲ್ಲಿಯೇ ಎಜ್ಯುಕೇಶನ್ ಸೊಸಾಯಿಟೀ ಪ್ರೆಸ್ಸಿನಲ್ಲಿ ಮುದ್ರಿಸಿರಬೇಕೆಂದು ಊಹಿಸಲು ಅಡ್ಡಿಯಿಲ್ಲ.

ಶೇಷಗಿರಿರಾಯರ ಹೆಂಡತಿ ಭೀಮಾಬಾಯಿಯೆಂಬವರು ನರಗುಂದದ ಗಡಾದ ರಂಗಪ್ಪನವರ ಮಗಳು. ಇಬ್ಬರು ಹೆಣ್ಣುಮಕ್ಕಳನ್ನು ಹಡೆದು ಇವರು ಮುಂಬಯಿಯಲ್ಲಿಯೇ ತೀರಿಕೊಂಡರು. ಮುಂದೆ ಶೇಷಗಿರಿರಾಯರಿಗೆ ಸಿಂಧ ಪ್ರಾಂತಕ್ಕೆ ವರ್ಗವಾದದ್ದರಿಂದ ತಮ್ಮ ಹೆಣ್ಣುಮಕ್ಕಳನ್ನು ಕಕ್ಕಂದಿರಾದ ಕೃಷ್ಣರಾಯರ ಬಳಿಗೆ ಧಾರವಾಡಕ್ಕೆ ಕಳುಹಿಸಿ ತಾವು ಒಬ್ಬರೇ ಸಿಂಧಕ್ಕೆ ಹೋದರು. ಅಲ್ಲಿ ಕೆಲವು ವರ್ಷ ಇದ್ದನಂತರ ಧಾರವಾಡಕ್ಕೆ ವರ್ಗವಾಗಿ ಬಂದರು. ಕೋಡ ತಾಲೂಕಿನಲ್ಲಿ ಮದಗಮಾಸೂರಿನ ಕೆರೆಯ ಜೀರ್ಣೋದ್ಧಾರದ ಕೆಲಸ ನಡೆದಾಗ್ಗೆ ಇವರು ಅಲ್ಲಿ ಓವ್ಹರಸೀಯರರಾಗಿ ಹೋದಂತೆ ತಿಳಿಯುತ್ತದೆ.

ಧಾರವಾಡಕ್ಕೆ ಬಂದನಂತರ ದೇಸಾಯರ ಓಣಿಯ ಮನೆಯಲ್ಲಿ ಒಂದು ಸ್ವತಂತ್ರ ಕೋಣೆಯೊಳಗೆ ಅಡಿಗೆಯವನನ್ನಿಟ್ಟುಕೊಂಡು ಇವರು ಇರುತ್ತಿದ್ದರು. ಮನೆಯೊಳಗೆ ಮಿಕ್ಕವರೊಡನೆ ಕೂಡಿ ಬಳಿಕೆ ಮಾಡುತ್ತಿರಲಿಲ್ಲ. ಸಿಂಧದಲ್ಲಿದ್ದಾಗ್ಗೆ ಯಾವದೋ ಬೇನೆಯಿಂದ ಅಸ್ವಸ್ಥರಾಗಿ ಮಲಗಿರಲು ಅನ್ಯ ಜಾತಿಯವರು ತಮಗೆ ಅನ್ನನೀರು ಹಾಕಿ ಬದುಕಿಸಿದ ಮೂಲಕ ತಾವು ಜಾತಿ ಭ್ರಷ್ಟರಾದೆವೆಂಬ ತಿಳುವಳಿಕೆಯಿಂದ ಅವರು ಈ ಕ್ರಮವನ್ನಿಟ್ಟಿದ್ದರು. ಮದಗದ ಕೆರೆಯ ಕೆಲಸಕ್ಕೆ ಇವರು ಹೋದಾಗ್ಗೆ ಇತ್ತ ಮನೆಯವರು ಒಂದು ಹೆಣ್ಣುನೋಡಿ ಶೇಷಗಿರಿರಾಯರಿಗೆ ಮತ್ತೆ ಲಗ್ನ ಮಾಡುವ ಸಮಾರಂಭವನ್ನು

ಹೂಡಿಕೊಂಡು ಕೂತಿದ್ದರು. ಮದಗದಿಂದ ತಿರಿಗಿ ಬಂದ ಇವರು ಮನೆಯ ಮುಂದೆ ಮದುವೆಯ ಹಂದರವನ್ನು ಕಂಡು ಇದೇನೆಂದು ಕೇಳಲು ನಿಮ್ಮದೇ ಮದುವೆ ಗೊತ್ತುಮಾಡಿಟ್ಟಿದೆ ಎಂದು ಮನೆಯವರು ಹೇಳಿದರು. ಆಗ ಕುಲಗೆಟ್ಟು ಭ್ರಷ್ಟರಾದ ತಮಗೆ ಮದುವೆಯೇಕೆಂದು ಹೇಳಿದವರೇ ಬಂಡಿಯನ್ನು ತಿರುಗಿಸಿಕೊಂಡು ಊರಹೊರಗೆ ಕೋರ್ಟಿನ ಹತ್ತಿರ ಇದ್ದ ಬಂಗ್ಲೆಗಳೊಳಗಿನ ಒಂದನ್ನು ಆಗಿಂದಾಗ ಬಾಡಿಗೆಗೆ ತೆಗೆದುಕೊಂಡು ಅಲ್ಲಿಯೇ ಇದ್ದುಬಿಟ್ಟರು. ಪ್ರಾಯಶ್ಚಿತ್ತ ಕೊಡಿಸಿ ಶುದ್ಧಮಾಡಿಸಿ ಮದುವೆ ಮಾಡುವೆವೆಂದು ಮನೆಯ ಹಿರಿಯರಾದವರು ಗತಿಗಾಲಬಟ್ಟು ಹೇಳಿದರೂ ಒಡಂಬಡಲಿಲ್ಲ. ಅಂದಿನಿಂದ ಕೊನೆಯವರೆಗೆ ಅವರು ಪುನಃ ತಮ್ಮ ಮನೆಗೆ ಬರಲೇ ಇಲ್ಲ.

ಶೇಷಗಿರಿರಾಯರ ಇಬ್ಬರೂ ಹೆಣ್ಣು ಮಕ್ಕಳ ಮದುವೆಯನ್ನು ಅವರ ಕಕ್ಕಂದಿರಾದ ಕೃಷ್ಣರಾಯರೇ ಮಾಡಿದರು. ಹಿರಿಯ ಮಗಳ ಮಕ್ಕಳಾದ ಕೊಣ್ಣೂರ ವೆಂಕಟರಾಯರು ಈಗ ಬೆಳಗಾವಿಯಲ್ಲಿ ಡಿಸ್ಟ್ರಿಕ್ಟ ಇನ್ಸ್‌ಪೆಕ್ಟರ ಆಫ್ ಲ್ಯಾಂಡ ರೆಕಾರ್ಡ್ಸ್ ಆಗಿದ್ದಾರೆ. ಧಾರವಾಡದಲ್ಲಿರುವ ಅವಧಾನೀ ಗುರುರಾಜಾಚಾರ್ಯರು ಎರಡನೆಯ ಮಗಳ ಮಕ್ಕಳು.

ಶೇಷಗಿರಿರಾಯರಿಗೆ ಗಂಡು ಸಂತತಿಯಾಗಲಿಲ್ಲ. ಇಬ್ಬರು ಹೆಣ್ಣು ಮಕ್ಕಳಿದ್ದರೂ ಯಾವುದೋ ಕಾರಣದಿಂದ ಇಬ್ಬರ ವಿಷಯವಾಗಿಯೂ ಉದಾಸೀನ ಭಾವವುಳ್ಳವರಾಗಿ ಅವರು ತಮ್ಮ ಗಳಿಕೆಯನ್ನೆಲ್ಲ ಮೆಡಿಕಲ್ ಕಾಲೇಜಿನಲ್ಲಿ ವಿದ್ಯಾಭ್ಯಾಸಕ್ಕೆ ಹೋಗುವ ಬ್ರಾಹ್ಮಣ ವಿದ್ಯಾರ್ಥಿಗೆ ಸ್ಕಾಲರಶಿಪ್ಪು ಕೊಡುವದಕ್ಕಾಗಿ ವಿನಿಯೋಗಿಸಬೇಕೆಂದು ಮೃತ್ಯುಪತ್ರಮಾಡಿ ಅದನ್ನು ಕಲೆಕ್ಟರರ ವಶಕ್ಕೆ ಕೊಟ್ಟುಬಿಟ್ಟರು. "ಚುರಮುರೀ ಸ್ಕಾಲರಶಿಪ್" ಎಂಬ ಹೆಸರಿನಿಂದ ಇದು ಇನ್ನೂ ನಡೆದಿದೆ.

ಧಾರವಾಡದಲ್ಲಿ ಕೆಲವು ದಿವಸ ಕೆಲಸ ಮಾಡಿದ ನಂತರ ಶೇಷಗಿರಿರಾಯರು ಪೆನಶನ್ ಪಡೆದು ಸರಕಾರೀ ಸೇವೆಯಿಂದ ನಿವೃತ್ತರಾದರು. ಅಲ್ಲಿಂದ ಮುಂದೆ ಕೂಡ ಇವರ ವಾಙ್ಮಯಸೇವಾವ್ಯಾಸಂಗವು ತಕ್ಕಮಟ್ಟಿಗೆ ನಡೆದೇ ಇತ್ತೆಂದು ತೋರುತ್ತದೆ. ಕಾಲಿದಾಸನ ಶಾಕುಂತಲದಂತೆಯೇ ಶೂದ್ರಕನ ಮೃಚ್ಛಕಟಿಕ ನಾಟಕವನ್ನೂ ಇವರು ಸಂಪೂರ್ಣಗದ್ಯದಲ್ಲಿ ಭಾಷಾಂತರಿಸಿದ್ದಾರೆ. ಬೆಳಗಾವಿಯ ಬೆಳಗಾವ ಸಮಾಚಾರ ಮುದ್ರಣಾಲಯದಲ್ಲಿ ಇದು

ಸಂಪೂರ್ಣವಾಗಿ ಮುದ್ರಿತವಾಗಿದೆ. ೧೯೩೯ನೇ ಇಸ್ವಿಯಲ್ಲಿ ಬೆಳಗಾವಿಯಲ್ಲಾದ ಕರ್ನಾಟಕಸಾಹಿತ್ಯ ಸಮ್ಮೇಲನದ ಕಾಲಕ್ಕಾದ ಕನ್ನಡ ಗ್ರಂಥಗಳ ಪ್ರದರ್ಶನದಲ್ಲಿ ಕೋರೀ ಕಾಗದದ ವೇಷ್ಟನೆಯಿಂದ ಕೂಡಿಸಿ ಹೊಲಿದ ಇವರದೊಂದು ಸಮಗ್ರ ಪ್ರತಿಯು ನೋಡಲಿಕ್ಕೆ ದೊರೆಯಿತು. ಮುಖಪೃಷ್ಠದ ಮುದ್ರಣವಾಗುವ ಮೊದಲೇ ಶೇಷಗಿರಿರಾಯರು ಆಕಸ್ಮಿಕವಾಗಿ ಸ್ವರ್ಗಸ್ಥರಾದ ಮೂಲಕ ಅದು ಅಷ್ಟಕ್ಕೇ ಉಳಿದಿರಬೇಕೆಂದು ತೋರುತ್ತದೆ. ಇವರು ಬರೆದ ಇನ್ನೊಂದು ಚಿಕ್ಕ ಪುಸ್ತಕವನ್ನು ನಾನು ಓದಿದ್ದೂ ನನಗೆ ನೆನಪಿನಲ್ಲಿದೆ. ಧಾರವಾಡದ ಆಗಿನ ಕಾಲದ ಸಾಮಾಜಿಕ ಪರಿಸ್ಥಿತಿಯನ್ನನುಲಕ್ಷಿಸಿ ಬರೆದ "ಸುಂದರಾ ನಾಟಕ" ವೆಂಬದೊಂದು ಒಂದೇ "ಅಂಕಿನ" ನಾಟಕವು ಇವರ ಪರಮ ಮಿತ್ರರಾದ ಸ್ವ. ಕೃಷ್ಣರಾವ ಪೀತಾಂಬರರಾವ ಜೋಶಿಯವರ ಹೆಸರಿನಿಂದ ಮುದ್ರಿತವಾಗಿ ಪ್ರಸಿದ್ಧವಾಗಿತ್ತು. ಈ ನಾಟಕವೂ ಗದ್ಯಪದ್ಯಾತ್ಮಕವಾಗಿತ್ತು. ಇದರೊಳಗಿನ ನನಗೆ ನೆನಪಿರುವ ಕೆಲವು ಪದಗಳ ಚುಟಿಕೆಗಳನ್ನು ಇಲ್ಲಿ ಕೊಟ್ಟರೆ ಆ ಪುಸ್ತಕಸಂಶೋಧನಕ್ಕಾಗಲಿ, ಪದಗಳ ಸಂಗ್ರಹಕ್ಕಾಗಲಿ ಬಲ್ಲವರು ಪ್ರಯತ್ನಮಾಡಲು ಅನುಕೂಲವಾಗುವದರಿಂದ ಹಾಗೆ ಮಾಡಿದ್ದೇನೆ.

**೧. ಇನ್ನೇನು ಗತಿಯೆ ಬಾಲೆ || ಗಾಯನಲೋಲೆ || ಪಲ್ಲ ||**
**ಕನ್ನೆಗರತಿಯರು | ಹೊನ್ನು ಬೇಡದಲೆ ಪ್ರ- |**
**ಸನ್ನರಾಗುತೆ ವಿಟ | ರನ್ನು ಮೋಹಿಸಿದ ಮ್ಯಾಲಿನ್ನೇನು**
**|| ಅನುಪಲ್ಲ ||**

**೨. ಸಖಿ ಬಾಬಾ ಮಾರನ ಕಿರಿಬೆರಳರಗಿಳಿಯೇ ||**
**ಮದನ ಮನೋಹರಳೆ || ಪಲ್ಲ ||**

**೩. ಸಾಕವ್ವಾ ಶಹರದ ಸೊಗಸು ಶೃಂಗಾರಾ ||**
**ಬೇಕವ್ವಾ ನಮಗ ಹಳ್ಳ್ಯಾರ ವಿಚಾರಾ ||**

**೪. ಮೇಘಾವಳಿಯನ್ನಾಗಸದೊಳು ಕಂ| ಡಾಗೇ ನವಿಲ್**
**ನಲಿನಲಿದು ಕೂಗುವದು ||**

ಈ ಚುಟಿಕೆಗಳಲ್ಲಿಯೂ ಸ್ವ. ಶೇಷಗಿರಿರಾಯರ ಕಾವ್ಯಪ್ರತಿಭೆಯು ಸೂಸಿ ಹರಿಯುತ್ತಿರುವದು ಮರ್ಮಜ್ಞರಾದ ವಾಚಕರಿಗೆ ಹೊಳೆಯದಿರಲಾರದು.

ಕನ್ನಡ ನುಡಿಯಲ್ಲಿ ಹೇಗೆಯೋ ಹಾಗೆಯೇ ಮರಾಠಿಯಲ್ಲಿಯೂ ಶೇಷಗಿರಿ ರಾಯರು ಪ್ರವೀಣರಾಗಿದ್ದರೆಂದು ಕೀರ್ತಿಯುಂಟು. ಅಂತೇ ತಮ್ಮ ಶಾಕುಂತಲದ ಸೂಚನೆಯ ಪದ್ಯಗಳಲ್ಲಿ "ಕನ್ನಡ ಕಾಲಿದಾಸ" ನೆಂದು ಯಥಾರ್ಥವಾಗಿ ವರ್ಣಿಸಿದ (೭ನೆಯ ಪದ್ಯವನ್ನು ನೋಡಿರಿ) ಲಕ್ಷ್ಮೀಶ ಕವಿಯು ಜಯಮಿನಿ ಭಾರತದ ಪೀಠಿಕಾ ಸಂಧಿಯನ್ನು ಮರಾಠೀ ಭಾಷೆಯಲ್ಲಿ ಪದ್ಯರೂಪವಾಗಿ ಪರಿವರ್ತಿಸಿದ್ದು ಆಗಿನ ಕಾಲದಿಂದಲೂ ಮರಾಠೀ ಸಾಹಿತ್ಯದ ಶ್ರೇಷ್ಠ ಮಾಸಪತ್ರಿಕೆಯೆಂದು ಹೆಸರಾಗಿರುವ "ವಿವಿಧಜ್ಞಾನವಿಸ್ತಾರ" ವೆಂಬ ಮುಂಬಯಿಯ ಮಾಸಪತ್ರದಲ್ಲಿ ಪ್ರಸಿದ್ಧವಾದದ್ದುಂಟು. ಹುಟ್ಟಾ ರಸಿಕರೂ ಮಾರ್ಮಿಕ ವಾಙ್ಮಯಪ್ರೇಮಿಗಳೂ ಕಾವ್ಯಕಲಾವಿಚಕ್ಷಣರೂ ಆದ ಶೇಷಗಿರಿರಾಯರು ಪುಣೆಯ ಎಂಜಿನಿಯರಿಂಗ ಕಾಲೇಜಿನಲ್ಲಿ ಶಿಕ್ಷಣ ಹೊಂದುತ್ತಿದ್ದಾಗಲೇ ಮರಾಠೀ ಭಾಷೆಯಲ್ಲಿ ಇಷ್ಟೊಂದು ಪ್ರಾವೀಣ್ಯವನ್ನು ಸಂಪಾದಿಸಿದ್ದರೆಂಬುದು ಆಶ್ಚರ್ಯದ ಮಾತಲ್ಲ. ಹುಟ್ಟಗನ್ನಡಿಗರಾಗಿದ್ದ ಸ್ವ. ವೆಂಕಟರಂಗೋ ಕಟ್ಟಿಯವರು ಮೊದಲು ಪುಣೆಯ ಮರಾಠೀ ಟ್ರೇನಿಂಗ ಕಾಲೇಜಿನಲ್ಲಿಯೇ ಶಿಕ್ಷಕರಾಗಿದ್ದರು. ಬೆಳಗಾವಿಯಲ್ಲಿ ಕನ್ನಡ ನಾರ್ಮಲ್ ಸ್ಕೂಲು ಸ್ಥಾಪಿತವಾದೊಡನೆಯೇ ಅಲ್ಲಿಗೆ ಅಸಿಸ್ಟಂಟ ಮಾಸ್ತರರಾಗಿ ಬಂದರು. ಅದೇ ನಾರ್ಮಲ್‌ಸ್ಕೂಲು ಧಾರವಾಡದ ಟ್ರೇನಿಂಗ ಕಾಲೇಜ ಆಗಲು ಮೊದಲು ಕನ್ನಡ ಟ್ರಾನ್ಸಲೇಟರರಾಗಿ, ನಂತರ ವ್ಹಾಯಿಸ ಪ್ರಿನ್ಸಿಪಾಲರಾಗಿ, ಕೊನೆಗೆ ಪ್ರಿನ್ಸಿಪಾಲರೂ ಆಗಿ ನಿವೃತ್ತರಾದರು. ಸ್ವ. ರಾ. ಸಾ. ವೆಂಕಟರಂಗೋ ಕಟ್ಟಿಯವರು ಕನ್ನಡ ಭಾಷಾಕೋವಿದರೂ ಸಾಹಿತ್ಯಸೇವಾಧುರೀಣರೂ ಇದ್ದಂತೆಯೇ ಮರಾಠೀ ಭಾಷೆಯಲ್ಲಿಯೂ ಚನ್ನಾಗಿಯೇ ಪ್ರಭುತ್ವ ಪಡೆದವರಾಗಿದ್ದರೆಂಬುದು ಅವರ ಅನೇಕ ಕೃತಿಗಳ ಮೇಲಿಂದ ವ್ಯಕ್ತವಾಗುತ್ತದೆ. ಹೀಗೆ ಆಗಿನ ಕಾಲದ ಕನ್ನಡಿಗರು ಮರಾಠಿಯಲ್ಲಿಯೂ ಪ್ರಾವೀಣ್ಯವನ್ನು ಸಂಪಾದಿಸಿದವರಾಗಿರುತ್ತಿದ್ದರೂ ಅವರು ಮರಾಠಿಯ ಮೋಹದಿಂದ ಕನ್ನಡವನ್ನು ಕಾಲುಕಸ ಮಾಡಲಿಲ್ಲ; ಮರಾಠಿಯ ಪಾಂಡಿತ್ಯಪ್ರದರ್ಶನಕ್ಕಾಗಿ ಕನ್ನಡವನ್ನು ಮೂಲೆಗೊತ್ತಲಿಲ್ಲ; ಮರಾಠಿಯ ಪ್ರಾಬಲ್ಯವನ್ನು ಬೆಳಿಸಿ ಕನ್ನಡವನ್ನು ಹಿಂದೂಡಲಿಲ್ಲ. ಆದರೆ ಇದಕ್ಕೆ ವಿಪರೀತವಾಗಿ ಕನ್ನಡ ಗ್ರಂಥಗಳ ಸವಿಯನ್ನೂ ಕನ್ನಡಿಗರ ಸ್ವತಂತ್ರ ವಿಚಾರಸ್ಫೂರ್ತಿಯನ್ನೂ ಮರಾಠಿಗರಿಗೆ

ಅವರ ಭಾಷೆಯಲ್ಲಿಯೇ ತಿಳಿಸುವ ಉಪಕ್ರಮ ಮಾಡಿ ಕನ್ನಡದ ಹಾಗು ಕರ್ನಾಟಕದ ವರ್ಚಸ್ವವನ್ನೂ ಪ್ರತಿಷ್ಠೆಯನ್ನೂ ಬೆಳಿಸುವದಕ್ಕೆ ಕಾರಣರಾಗುತ್ತಿದ್ದರೆಂಬುದು ನಿಃಸಂದೇಹವಾಗಿದೆ. ಹೀಗೆ ಕನ್ನಡದ ಉತ್ತಮೋತ್ತಮ ಗ್ರಂಥಗಳು ಮರಾಠಿಗೆ ಪರಿವರ್ತಿತವಾಗುವ ಸುದಿವಸಗಳು ಇನ್ನು ಮುಂದೆ ಎಂದಾದರೂ ಬರಬಹುದೆ?

ಶೇಷಗಿರಿರಾಯರು ಅತ್ಯಂತ ಉದ್ಯೋಗಶೀಲ ಸ್ವಭಾವದವರಾಗಿದ್ದರು. ಸುಮ್ಮನೆ ಕುಳಿತಾಗಲಿ, ಆಟನೋಟದ ವಿನೋದದಲ್ಲಾಗಲಿ, ಅವರು ಕಾಲ ಹರಣ ಮಾಡಿದ್ದನ್ನು ಯಾರೂ ಕಂಡು ಅರಿಯರು. ಸ್ಕಾಲರಶಿಪ್ಪಿಗೆ ವಿನಿಯೋಗಿಸಲ್ಪಟ್ಟ ಅವರ ಆಸ್ತಿಯಲ್ಲಿ ಅವರ ಪುಸ್ತಕಭಾಂಡಾರದ ಅಗ್ಗದ ಬೆಲೆಯೇ ಮೂರು ಸಾವಿರ ರೂಪಾಯಿ ಬಂದಂತೆ ತಿಳಿಯುತ್ತದೆ. ಇದರ ಮೇಲಿಂದ ಅವರ ಗ್ರಂಥಸಂಗ್ರಹವು ಎಷ್ಟು ದೊಡ್ಡದಾಗಿತ್ತೆಂಬುದು ಕಂಡು ಬರುವದು. ವಾಙ್ಮಯಪ್ರಪಂಚದಲ್ಲಿ ಮಾತ್ರವಲ್ಲದೆ ಶೇಷಗಿರಿರಾಯರ ಕುಶಾಗ್ರಬುದ್ಧಿಯು ಅನೇಕ ಮುಖವಾಗಿ ಪ್ರವಹಿಸುತ್ತಿತ್ತೆಂಬುದಕ್ಕೆ ಆಧಾರಗಳಿವೆ. ಪಬ್ಲಿಕ್‌ವರ್ಕ್ಸ್ ಡಿಪಾರ್ಟಮೆಂಟಿನಂಥ ರುಕ್ಷಖಾತೆಯ ನೀರಸ ಕೆಲಸದಲ್ಲಿ ತೊಡಗಿಕೊಂಡಿದ್ದಾಗ್ಯೂ ಅರ್ವಾಚೀನ ಕನ್ನಡ ವಾಙ್ಮಯದಲ್ಲಿ ಶ್ರೇಷ್ಠತರವಾದ ನಾಟಕವನ್ನು ಬರೆದರು. ತಮ್ಮ ಗ್ರಂಥಸಮಾಪ್ತಿಯ ಮಿತಿಯನ್ನು ಗಣಿತಶಾಸ್ತ್ರದ ಗೂಢವಾದ ಒಗಟುಮಾಡಿ ಹೇಳಿದ್ದಾರೆ. ಕರ್ನಾಟಕ ಸಂಗೀತ ಶಾಸ್ತ್ರದಲ್ಲಿಯೂ ಕಲೆಯಲ್ಲಿಯೂ ಅವರಿಗಿದ್ದ ನಿಪುಣತೆಯು ಶಾಕುಂತಲದೊಳಗಿನ ಪದಗಳಿಗೆ ಅವರು ಕೊಟ್ಟಿರುವ ಸ್ವರಯೋಜನೆಗಳಿಂದಲೂ ಧಾಟಿಗಳಿಂದಲೂ ಚನ್ನಾಗಿ ವ್ಯಕ್ತವಾಗುತ್ತದೆ. ಬಡಿಗತನ ಕಮ್ಮಾರಿಕೆಗಳ ಸೂಕ್ಷ್ಮ ಕೆಲಸಗಳೂ ಅವರ ಕೈಯಿಂದ ಆದದ್ದನ್ನು ಕಂಡವರು ಒಬ್ಬಿಬ್ಬರು ಇನ್ನೂ ಬದುಕಿದ್ದಾರೆ. ಅರ್ವಾಚೀನ ರಸಾಯನಶಾಸ್ತ್ರದಲ್ಲಿಯೂ ಆ ಕಾಲಮಾನಕ್ಕನುಸರಿಸಿ ಒಳ್ಳೇ ನುರಿತವರಾಗಿ ಅನೇಕಾನೇಕ ಪ್ರಯೋಗಗಳನ್ನು ಮಾಡಿ ಎಷ್ಟೋ ಸಂದರ್ಭಗಳಲ್ಲಿ ಶ್ರೇಯಸ್ಸನ್ನು ಪಡೆದದ್ದೂ ಉಂಟೆಂದು ಹೇಳುತ್ತಾರೆ. ಇದೇ ಮಾದರಿಯ ಪ್ರಯೋಗದಲ್ಲಿ ತೊಡಗಿದಾಗ್ಗೆ ಅಂದರೆ ಕಾಜು ಕರಗಿಸಿ ಮುಸಿ ಕುಡಿಕೆಯನ್ನು ಮಾಡುವುದಕ್ಕೆ ಎರಕಹೊಯ್ಯುವ ಕೆಲಸ ನಡಿಸಿದಾಗ್ಗೆ ಮುಸಿಯೊಳಗಿಂದ ಹೊರಟ ರಾಸಾಯನಿಕ ಹೊಗೆಯು ಹೊಟ್ಟೆ

ಯೊಳಗೆ ಹೊಕ್ಕು ಅಕಸ್ಮಾತ್ತಾಗಿ ಅವರ ದೇಹಾವಸಾನವಾಯಿತು. ೧೮೮೨ರ ಸುಮಾರಕ್ಕೆ ಶೇಷಗಿರಿರಾಯರು ಹೀಗೆ ಅಕಲ್ಪಿತವಾಗಿ ಅಕಾಲದಲ್ಲಿ ಕಾಲನ ಬಾಯಿಗೆ ತುತ್ತಾಗಿ ಬಿದ್ದದ್ದರಿಂದ ಕನ್ನಡ ನಾಡಿಗಾದ ಅನೇಕ ಬಗೆಯ ಹಾನಿಗಳನ್ನು ಬಣ್ಣಿಸುವದೇ ಸಾಧ್ಯವಿಲ್ಲ. ಈ ಬಗೆಯ ವಿಧದ ಚಟುವಟಿಕೆಗಳಿಂದ ಆದರ್ಶಪ್ರಾಯವಾಗಿದ್ದ ಶೇಷಗಿರಿರಾಯರ ಚರಿತ್ರೆಯನ್ನು ನಾವು ಕನ್ನಡಿಗರು ಎಂದಾದರೂ ಮರೆಯಬಹುದೇ ?

ಹೀಗೆ ಸ್ವ. ಶೇಷಗಿರಿರಾಯರ ವೈಯ್ಯಕ್ತಿಕ ಪರಿಚಯವನ್ನು ನಾವು ಮಾಡಿಕೊಂಡ ನಂತರ ಅವರ ಆದರ್ಶಕೃತಿಯಾದ ಶಾಕುಂತಲದ ಬಗ್ಗೆ ನಾಲ್ಕು ಮಾತುಗಳನ್ನು ತಿಳಿದುಕೊಳ್ಳುವ ಪ್ರಯತ್ನಮಾಡೋಣ.

“ ಕಾವ್ಯಸೃಷ್ಟಿಯಲ್ಲಿ ನಾಟಕವು ರಮ್ಯವಾದದ್ದು, ಅದರೊಳಗೆ ಶಾಕುಂತಲವು ಮೇಲು ” ಎಂಬ ಉಕ್ತಿಯು ಸುಪ್ರಸಿದ್ಧವಾಗಿದೆ. ರಸಜ್ಞತೆಯಲ್ಲಿ ಪ್ರವೀಣರಾದ ಅನೇಕಜನ ಪಾಶ್ಚಿಮಾತ್ಯ ಪಂಡಿತರೂ ಶಾಕುಂತಲವನ್ನೋದಿ ಭಾವನಾಸಮುದ್ರದಲ್ಲಿ ಬೆರೆತು ಕಣ್ಣೀರು ಸುರಿಸಿ ಹುಚ್ಚೆದ್ದು ಕುಣಿಕುಣಿದಾಡಿದ ದೃಷ್ಟಾಂತಗಳೂ ಉಂಟು. ಇಂಥ ಶಾಕುಂತಲದ ಸವಿಯನ್ನು ಕನ್ನಡಿಗರಿಗೆ ಉಣಿಸದಿರಬಾರದೆಂಬ ಕುತೂಹಲದಿಂದ ಶೇಷಗಿರಿರಾಯರು ಇದನ್ನು ಕನ್ನಡಕ್ಕೆ ಪರಿವರ್ತಿಸಿದರು. ಕಾಲಿದಾಸನ ಮೂಲಭಾವಗಳನ್ನೆಲ್ಲ ಅಚ್ಚುಕಟ್ಟಾಗಿ ಆರಿಸಿಕೊಂಡು “ ಕವಿತೆಯ ಗಂಡುಮೆಟ್ಟು ” ಎಂದು ಕೀರ್ತಿವೆತ್ತ ಕನ್ನಡನಾಡಿನ ಶ್ರೇಯಸ್ಸಿಗೆ ಅನುರೂಪವಾಗುವಂತೆ ಅವುಗಳನ್ನು ತಮ್ಮ “ ಸರಸೋಕ್ತಿ ” ಗಳಿಂದ ಸಜ್ಜುಗೊಳಿಸಿ ರಸಿಕರಾದ ಕನ್ನಡಿಗರ ಮುಂದೆ ಮಂಡಿಸಿದರು. ಕಾವ್ಯನಾಟಕಗಳ ಜೀವಾಳವಾದ ರಸಭಾವಗಳ ಸವಿಕಟ್ಟಿನಲ್ಲಿ ತಮ್ಮ ಕೃತಿಯು ಶ್ರೇಷ್ಠವಾದದ್ದೆಂಬ ಅಂತಃಸ್ಫೂರ್ತಿಯ ಸಾತ್ವಿಕ ಪ್ರೇರಣೆಯಿಂದ “ ಸವಿಯೊಳು ಹೆಚ್ಚಿ ನೋಡಲೊರೆ ಕನ್ನಡಿನೆನ್ನದು ಪೆಚ್ಚದಿರ್ದೊಡೆ ಕವಿತೆಯ ಗಂಡುಮೆಟ್ಟು ಕರನಾಟಕ ಬಿಟ್ಟು ತೆರಳ್ದು ಪೋಗುವೆಂ” ಎಂದು ಒಂದು ಬಗೆಯ ಕಠೋರವಾದ ಪ್ರತಿಜ್ಞೆಯನ್ನೇ ಸಾರಿದರು. ಈ ಅವರ ಆತ್ಮಪ್ರತ್ಯಯೋಕ್ತಿಯಲ್ಲಿ ಅವಿಹಿತವಾದದ್ದಾಗಲಿ ಅತಿಶಯೋಕ್ತಿಯಾಗಲಿ ಎಷ್ಟೂ ಇರುವದಿಲ್ಲವೆಂಬದನ್ನು ಆ ಕಾಲದ ರಸಿಕವಿದ್ವಾಂಸರು ಓದಿಕೇಳಿ ಮನಗಂಡಿದ್ದರು. ಅಂತೇ ಆಗ ಸುಸಂಸ್ಕೃತರ ಮನೆಮನೆಗೂ ಚುರಮುರಿಯರುವ

ಶಾಕುಂತಲದ ಪುಸ್ತಕಗಳು ನೋಡಲಿಕ್ಕೆ ದೊರೆಯುತ್ತಿದ್ದವು. ಗೌರಿಗಂಗೆಗಳ ಆರತಿಯ ಪದಗಳಂತೆ "ಪತಿಯ ಮಂದಿರಕೆ ನೀ ಪೋದವ್ಯಾಲಿನಿತು ಪದ್ಧತಿಯಿಂದೆ ನಡೆಯಬೇಕಮ್ಮ ಕೇಳು" ಎಂಬುದಾಗಿ ಕಣ್ವಋಷಿಗಳು ಶಕುಂತಲೆಗೆ ಮಾಡಿದ ಉಪದೇಶದ ಪದ್ಯವು ಸುಶಿಕ್ಷಿತ ಪ್ರೌಢ ಗೃಹಿಣಿಯರ ಬಾಯಿಯಿಂದ ಕೇಳಲು ದೊರೆಯುತ್ತಿತ್ತು. ಸಿರಿವಂತರ ಉಲ್ಹಾಸಕೂಟಗಳಲ್ಲಿ, ಸಂಗೀತ ಸಮಾರಂಭಗಳಲ್ಲಿ ಶಾಕುಂತಲದ ಪದಗಳನ್ನು ಗಾಯಕರಿಂದ ಹೇಳಿಸಿಕೇಳಿ ಸಂತೋಷಬಟ್ಟು ತಲೆದೂಗುವ ತರುಣ ಸವಿಗಾರರ ತಂಡಗಳು ಈ ಭಾಗದಲ್ಲೆಲ್ಲ ಕಡೆಗೆ ಕಣ್ಣಿಗೆ ಬೀಳುತ್ತಿದ್ದವು. ಮುಂಜಿಮದುವೆಗಳ ಮಂಗಲ ಪ್ರಸಂಗದಲ್ಲಾಗಲಿ ವಸಂತೋತ್ಸವದ ಹಂದರಗಳಲ್ಲಾಗಲಿ ನಡೆಯುತ್ತಿದ್ದ ಗಾಯನ ನರ್ತನ ಪ್ರಸಂಗಗಳಲ್ಲಿ "ಬಾ ಬಿಡಿಸೋ ಮೋಹನ್ನ" "ಆಯಾಸವನು ಪಡಬ್ಯಾಡೆ" "ಚುಂಬಿಸಲಿಲ್ಲ ಚೆಲ್ವಸಂಧಿಯೊಳು" ಮೊದಲಾದ ಪದಗಳನ್ನು ಸುಸ್ವರವಾಗಿ ಸಾಭಿನಯವಾಗಿ ಸರಸಾಗಿ "ಪಾಡುವ ಸರಸಿಜಾಕ್ಷಿಯರ"ನ್ನು ನೋಡಿ ರಸಭಾವಗಳನ್ನು ಕುಶಲತೆಯಿಂದ ವಿಶದಪಡಿಸುವ ಅವರ ಹಾಡುಗಾರಿಕೆಯನ್ನು ಕೇಳಿ ಬೆರಗಾಗಿ ಮೈಮರೆತು ಕುಳಿತಂಥ ಅನೇಕ ಪ್ರಸಂಗಗಳು ನನ್ನ ಸ್ವಂತ ಅನುಭವಕ್ಕೆ ಬಂದುಹೋಗಿವೆ. ಜಯದೇವಕವಿಯ "ಗೀತಗೋವಿಂದ"ದ ಒಂದೆರಡು ಅಷ್ಟಪದಿಗಳನ್ನೂ ಶಾಕುಂತಲದೊಳಗಿನ ಒಂದೆರಡು ಪದಗಳನ್ನೂ ಗಾಯಕ ಗಾಯಕಿಯರಿಂದ ಹೇಳಿಸಿ ಕೇಳದೆ ಯಾವ ಸಂಗೀತ ಸಮ್ಮೇಳನವೂ ಬಹುಶಃ ಕೊನೆಗಾಣುತ್ತಿದ್ದಿಲ್ಲ. ಹೀಗೆ ಉತ್ತರ ಕರ್ನಾಟಕದಲ್ಲೆಲ್ಲ ಕಡೆಯಲ್ಲಿಯೂ ಶೇಷಗಿರಿರಾಯರ ಶಾಕುಂತಲದ ಕೀರ್ತಿ ಸೌರಭವು ಹರಡಿಕೊಂಡದ್ದರಿಂದಲೇ ಹುಟ್ಟಗನ್ನಡಿಗರಾದ ಕೈ. ವಾ. ಅಣ್ಣಾ ಕಿರ್ಲೋಸ್ಕರರಂಥ ರಸಾಭಿಜ್ಞ ಮಧುಕರವು ಇದಕ್ಕೆ ಮನಸೋತು, ಇದರಲ್ಲಿ ಲುಬ್ಧವಾಗಿ, ಇದರೊಳಗಿನ ಮಧುವನ್ನೇ ಅತ್ಯಂತ ಕುಶಲತೆಯಿಂದ ಸಂಗ್ರಹಿಸಿ ಕಟ್ಟಿಟ್ಟ ಹುಟ್ಟಿನೊಳಗಿನ ಜೇನನ್ನು ಮಹಾರಾಷ್ಟ್ರ ಪ್ರಾಂತದ ರಸಿಕರು ಕಳೆದ ೫೦ ವರ್ಷಗಳಿಂದ ಸವಿಯುತ್ತ ಬಂದಿದ್ದರೂ ತೃಪ್ತರಾಗದೆ ಇಂದಿಗೂ ಅದರ ರುಚಿಗೆ ಮರುಳಾಗಿ ಮುಕುರುತ್ತಿದ್ದಾರೆ. ಆದರೆ ನಿರ್ಭಾಗ್ಯರಾದ ನಾವು ಕನ್ನಡಿಗರು ನಮ್ಮೀ ನಂದನವನದೊಳಗಿನ ಮಂದಾರಪಾರಿಜಾತಗಳ ಮಕರಂದಕ್ಕೆ ಮೂಗು ಮುರಿದು, ಮದ್ದುಗುಣಿಕೆ ಮರೌಡಲು ಕಣಗಿಲು

ತುಂಬಿ ಎಕ್ಕೆ ಲಕ್ಕಿ ಮೊದಲಾದ ನಿರ್ಗಂಧ ಕುಸುಮಗಳಿಗೆ ಮುಗಿಬೀಳುತ್ತಿ
ದ್ದೇವೆ; ಅಥವಾ ಹೆರವರ ಬಾಯ್ದಂಬುಲಕ್ಕೆ ಕೈನೀಡಿ ಅದನ್ನೇ ಮಹಾ ಪ್ರಸಾ
ದವೆಂದು ಮನ್ನಿಸುವ ಹೆಡ್ಡರಂತೆ ಮತಿಮಂದವಾಗಿ ಮಂದಿಯ ಮೂರು
ಕಾಸಿನ ಕೃತಿಗಳಿಗೆ ಮರುಳಾಗಿ ಬಾಯಿ ಬಿಡುತ್ತಿದ್ದೇವೆ. ಇದೇನು ಕಾಲ
ಮಹಿಮೆಯೆಂದು ಸುಮ್ಮನೇ ಕೈಮುಚ್ಚಿಕೊಂಡು ಕೂಡೋಣವೆ ಅಥವಾ
ಸಾತ್ವಿಕಾಭಿಮಾನದ ಸ್ಫೂರ್ತಿಯಿಂದ ಸೊಂಟಕಟ್ಟಿ ಎದ್ದು, ವಿಪರೀತ ಪರಿಸ್ಥಿತಿ
ಯೊಡನೆ ಪೌರುಷದಿಂದ ಹೋರಾಡಿ, ನಮ್ಮ ಹಿರಿಯರು ನಮಗಾಗಿ ಕಾದಿಟ್ಟ
ನಿಧಾನವನ್ನು ಪರಿಶೋಧಿಸಿ ತೆಗೆದು ಅದರ ಯೋಗ್ಯ ಉಪಭೋಗಕ್ಕೆ ಬಾಧ್ಯ
ರಾಗುವ ಭಾಗ್ಯವಂತರಾಗೋಣವೆ?

ಕಾಲಿದಾಸನ "ಶಾಕುಂತಲ" ವೆಂಬ ಕೋಹಿನೂರ ರತ್ನವನ್ನು
ಕನ್ನಡದ ಚಿನ್ನವಲ್ಲಿ ಕೆತ್ತಿ ಕೂಡಿಸಿದ ಕೆಲಸದಲ್ಲಿ ಕಂಡುಬರುವ ಶೇಷಗಿರಿ
ರಾಯರ ಕಾರ್ಯಕೌಶಲ್ಯವು ಸರ್ವಸಾಧಾರಣವಾದುದಲ್ಲ. ನೃಪತುಂಗನು
ವರ್ಣಿಸಿದಂತೆ ಈ ಕನ್ನಡನಾಡಿನ ಹುಲ್ಲು ಮಾರುವ ಹೆಣ್ಣು ಮಕ್ಕಳಲ್ಲಿ ಕೂಡ
ಕಾವ್ಯಗಳಲ್ಲಿಯ ಕವಿಕಲ್ಪನಾಚಮತ್ಕೃತಿಯನ್ನು ಕ್ಷಣಾರ್ಧದಲ್ಲಿ ಕಂಡು
ಹಿಡಿಯುವ ಪ್ರೌಢಿಮೆಯೂ ಪ್ರಗಲ್ಭತೆಯೂ ಪ್ರಬುದ್ಧತೆಯೂ ಕಾವ್ಯಪಠಣ-
ಶ್ರವಣ-ಸಂಸ್ಕಾರಪರಂಪರೆಯಿಂದ ಪ್ರಸಾರಗೊಂಡು ಕನ್ನಡ ಜನಾಂಗದ
ಜೀವನವೇ ಕಾವ್ಯಮಯವಾಗಿದ್ದ ಕಾಲದ ಮಾತು ಹಾಗಿರಲಿ. ಸುಮಾರು
ಅರ್ಧ ಶತಮಾನದ ಹಿಂದೆ ಅಂದರೆ ನನ್ನ ಜೀವಮಾನದ ೨ನೇ ೩ನೇ ದಶಕಗಳಲ್ಲಿ
ಕನ್ನಡ ಸಂಸ್ಕೃತಿಯ ಲವಮಾತ್ರ ಅವಶೇಷವು ನಮ್ಮಿತ್ತಕಡೆಯ ಪ್ರದೇಶದಲ್ಲಿ
ಉಳಿದ ಕಾಲದಲ್ಲಿಯೂ ಶೇಷಗಿರಿರಾಯರ ಕಲಾಕೌಶಲ್ಯವನ್ನು ನಿರುಕಿಸಿ ಪರಿ
ಕಿಸಿ ಹರುಷಬಡುವ ಪಾತ್ರತೆಯೂ ಪ್ರವೀಣತೆಯೂ ನಮ್ಮ ಜನಾಂಗದಲ್ಲಿ
ದ್ದವು. ಅಂತೇ ಈ ಶಾಕುಂತಲದಂಥ ಕೃತಿಗಳು ಬಹುಜನಾದರಣೀಯವಾಗಿ
ದ್ದವಲ್ಲದೆ ರಸಿಕರಾದ ವಿದ್ವಾಂಸರೂ ಇವುಗಳಿಗೆ ಮೆಚ್ಚಿ ಹೆಚ್ಚಿನ ಮಮತ್ವ
ದಿಂದ ಇವುಗಳನ್ನು ಎತ್ತಿ ಹಿಡಿದು ಜನರೊಳಗೆ ಇವುಗಳ ಪ್ರಸಾರವಾಗಿ ರಸಾ
ಭಿಜ್ಞತೆಯೂ ಕಲಾಪ್ರೇಮವೂ ಸರ್ವಸಾಮಾನ್ಯವಾಗುವಂತೆ ವಿವಿಧಮಾರ್ಗ
ಗಳಿಂದ ಪ್ರಯತ್ನ ಮಾಡುತ್ತಿದ್ದರು. ಅಂತೇ ಆ ಕಾಲಕ್ಕೆ ಶೇಷಗಿರಿರಾಯರ
ಈ ಶಾಕುಂತಲವು ಈ ಉತ್ತರ ಕರ್ನಾಟಕದಲ್ಲಂತೂ ಅತ್ಯಂತ ಲೋಕಪ್ರಿಯ

ವಾಗಿತ್ತು. ಈ ಪ್ರದೇಶವು ಕನ್ನಡನಾಡಿನ ಭಾಗವೆಂಬ ಅರಿವು ಕೂಡ ಇಲ್ಲಿಯ ಸಾಮಾನ್ಯ ಜನತೆಯಲ್ಲಿಲ್ಲದಾಗುವಂಥ ಪರಿಸ್ಥಿತಿಯು ಇತ್ತಕಡೆಗೆಲ್ಲ ಹಬ್ಬಿ "ದಕ್ಷಿಣ ಮಹಾರಾಷ್ಟ್ರ" ವೆಂಬ ಅಸಂಬದ್ಧ ಹೆಸರಿನ ಹಣೆಪಟ್ಟಿಯು ಇದರ ಪಾಲಿಗೆ ಬಂದ ಹೀನಾವಸ್ಥೆಯಲ್ಲಿಯೂ ಹನ್ನೆರಡು ವರ್ಷಕ್ಕೊಂದಾವರ್ತಿ ಯಾದರೂ ಈ ಪುಸ್ತಕದ ಪುನರ್ಮುದ್ರಣಕ್ಕೆ ಅವಕಾಶ ದೊರೆಯುತ್ತ ಬಂದಿತ್ತು. ಆಗಿನ ಕಾಲದ ಕನ್ನಡಿಗರಲ್ಲಿ ಕನ್ನಡತನದ ಜೀವಾಳವು ಕಮರಿದ್ದಿಲ್ಲ. ಪರಭಾಷೆ ಪರಸಂಸ್ಕೃತಿಗಳ ಮೋಹಕ್ಕೆ ಅವರು ಬಲಿಬಿದ್ದು ಪರವಶರಾಗಿದ್ದಿಲ್ಲ. ನಡುವಿನ ಈ ೨೫-೩೦ ವರ್ಷಗಳ ಅಂದರೆ ಸಾಧಾರಣವಾಗಿ ೧೮೮೫ ರಿಂದ ೧೯೧೫ರ ವರೆಗಿನ ಕಾಲಾವಧಿಯಲ್ಲಿ ಇಲ್ಲಿಯ ಪರಿಸ್ಥಿತಿಯು ಬಹಳವಾಗಿ ಕೆಡುವದಕ್ಕೆ ಅವಕಾಶವುಂಟಾಯಿತು. ಉಗಿಬಂಡಿಯ ಪ್ರವಾಸದ ಅನುಕೂಲತೆಯೊದಗಿದ ಮೂಲಕ ಮುಂಬಯಿಇಲಾಖೆಯ ಅಧಿಕಾರದ ಕೇಂದ್ರವಾಗಿದ್ದ ಮಹಾರಾಷ್ಟ್ರದ ಕಡೆಯಿಂದ ಮರಾಠೀಭಾಷೆಯ ಅಧಿಕಾರಿಗಳೇ ಹೆಚ್ಚಾಗಿ ಬರಹತ್ತಿದರು. ಶಿಕ್ಷಣವಿಭಾಗವಂತೂ ಒಂದು ಬಗೆಯಾಗಿ ಅವರ ಪಾಲಿಗೇ ಗುತ್ತಿಗೆಯಾಗಿ ಹೋಯಿತು. ವಕೀಲಿಯೇ ಮೊದಲಾದ ಹೊಸ ವರ್ಚಸ್ವದ ಧನೋತ್ಪಾದಕ ವ್ಯವಸಾಯಗಳಿಗೆ ಇತ್ತಕಡೆಯ ಹೊಸ ಪ್ರದೇಶವು ಮರಾಟಿಗರಿಗೆ ತೆರೆದಿಟ್ಟಂತಾಯಿತು. ರೇಲ್ವೆಯ ಹೆಡ್‌ಆಫೀಸುಗಳು ಇಲ್ಲಿಯೇ ಸ್ಥಿರಗೊಂಡದ್ದರಿಂದ ಸಾವಿರಾರು ಮರಾಠೀ ಕುಟುಂಬಗಳು ಚರಿತಾರ್ಥಕ್ಕಾಗಿ ಇಲ್ಲಿಗೆ ಬಂದು ಇಲ್ಲಿಯೇ ನೆಲೆಗೊಂಡವು. ವ್ಯಾಪಾರೋದ್ಯೋಗದ ಬೆನ್ನುಹತ್ತಿದ ಅನೇಕ ಜನ ಮರಾಟರು ಇಲ್ಲಿ ಬಂದು ನೆಲಿಸಿದರು. ಮಹಾರಾಷ್ಟ್ರದಲ್ಲಿ ಒಳ್ಳೇ ಹೆಸರು ಹೊಂದಿದ ನಾಟಕಕಂಪನಿಗಳಿಗೆ ಇದೊಂದು ಹೊಸ ಕ್ಷೇತ್ರವೇ ಉಪಲಬ್ಧವಾಗಿ ಅವುಗಳ ಅಭಿಯೋಗಗಳು ತೆರಪಿಲ್ಲದೆ ಆಗಹತ್ತಿದವು. ಮಹಾರಾಷ್ಟ್ರದ ವ್ಯಾಖ್ಯಾನಕಾರರು, ಪುರಾಣಿಕರು, ಕೀರ್ತನಕಾರರು, ಗಾಯಕರು ನರ್ತಕಿಯರು ಇವರೇ ಮೊದಲಾದ "ಕಲಾವಂತ"ರು ಇಲ್ಲಿ ಬಂದು ಮುಗಿಬೀಳಹತ್ತಿದರು. ಇಂಥವರಿಗೆಲ್ಲ ಇಲ್ಲಿದ್ದ ಮರಾಠೀ ಅಧಿಕಾರಿಗಳಿಂದಲೂ ಇಲ್ಲಿ ನೆಲೆಗೊಂಡಿದ್ದ ಮರಾಠಿಗರಿಂದಲೂ ಚೆನ್ನಾಗಿ ಆಶ್ರಯ ದೊರೆತು ಮತ್ತೂ ಹೊಸಬರಿಗೆ ಇತ್ತ ಕಡೆಗೆ ದುಡ್ಡು ಗಳಿಸಲು ಬರುವದಕ್ಕೆ ಪ್ರೋತ್ಸಾಹನ ದೊರೆಯಹತ್ತಿತು. ಇವೆಲ್ಲ ಕಾರಣಗಳ ಮೂಲಕ ಪಂಪ ರನ್ನ ಕುಮಾರವ್ಯಾಸ ವಾಲ್ಮೀಕಿಗಳ ತಿರುಳನ್ನಡನಾಡಾದ ಈ ಸೀಮೆಯಲ್ಲಿ ಕನ್ನಡ ನುಡಿಯು

ಹಿಂದೆ ಬಿದ್ದು ಮರಾಠೀ ಭಾಷೆಯು ಬೆಳೆಯಹತ್ತಿತು. ಸ್ವಾಭಿಮಾನದಲ್ಲಿ ಅತ್ಯಂತ ಮುಂದರಿದ ಮರಾಠಿಗರು ಇಲ್ಲಿಗೆ ಬಂದ ಮರಾಠೀ ಅಧಿಕಾರಗಳ ವರ್ಚಸ್ವದ ಉಪಯೋಗಮಾಡಿಕೊಂಡು ತಮ್ಮ ಮಕ್ಕಳುಮರಿಗಳ ಶಿಕ್ಷಣಕ್ಕೆ ಅನುಕೂಲವಾಗುವಂತೆ ಮುನಸಿಪಾಲಿಟಿಗಳ ಮುಖಾಂತರ ಮರಾಠೀ ಶಾಲೆ ಗಳನ್ನು ಸ್ಥಾಪಿಸಿಕೊಂಡರು. ಮೇಲ್ತರಗತಿಯ ಶಿಕ್ಷಣಕ್ಕೆ ಪುಣೆ ಮುಂಬಯಿ ಕಡೆಗೆ ಹೋದಾಗ್ಗೆ ತಮ್ಮ ಮಕ್ಕಳಿಗೆ ಸಾಮಾನ್ಯ ವ್ಯವಹಾರಕ್ಕೆ ಅಡಚಣೆ ಯಾಗಬಾರದೆಂಬ ವಿಚಾರದಿಂದ, ಅತ್ತಕಡೆಯ ಹೆಣ್ಣುಗಂಡಿನ ಸಂಬಂಧ ಬಂದಾಗ "ಆರೇ" ಅರಿಯದವರೆಂಬ ಅಪಮಾನಕ್ಕೆ ತಾವು ಗುರಿಯಾಗ ಬಾರದೆಂಬ ವಿವೇಕಶೂನ್ಯ ಹಂಬಲದಿಂದ ತಮ್ಮ ಮಕ್ಕಳನ್ನು ಎಷ್ಟೋ ಜನ ಸುಸಂಸ್ಕೃತ ಕನ್ನಡಿಗರು ಮರಾಠೀ ಶಾಲೆಗಳಿಗೇ ಕಳಿಸಹತ್ತಿದರು. ಹೀಗೆ ಪುಣೆ ಮುಂಬಯಿ ಕಡೆಗೆ ಹೋಗಿ ಬಂದ "ಸುಶಿಕ್ಷಿತ" ಕನ್ನಡಿಗರು ತಮ್ಮ ತಾಯಿನುಡಿಯಾದ ಕನ್ನಡವನ್ನೇ ಮರೆತು ಮರಾಠಿಯನ್ನೇ ಮನೆಯ ಮಾತಾಗಿ ಮಾಡುವ ಮಹತ್ವಾಕಾಂಕ್ಷೆಯನ್ನು ಮುಂದೂಡಹತ್ತಿದರು. ಮೈಸೂರಿನತ್ತಕಡೆಯಿಂದ ಮನೆಗೆ ಬಂದ ಅಚ್ಚಗನ್ನಡ ಗೃಹಿಣಿಯರನ್ನು ಬಲುಮೆಯಿಂದ "ಮರಾಠೀ" ಕಲಿಯಹಚ್ಚಿ ಅವರ ಅಬದ್ಧ ಸುಬದ್ಧ "ಆರೇ"ದಿಂದಲಾದರೂ ಮನೆತನವನ್ನೇ ಮರಾಠೀಮಯ ಮಾಡುವ ಮೋಹ ಕ್ಕೊಳಗಾದ ಮಹಾಮಹಿಮರನೇಕರು ಅಹಮಹಮಿಕೆಯಿಂದ ಮುಂದೆ ಬಂದರು. ಹೀಗೆ ಒಂದೆರಡಲ್ಲದ ಅನೇಕ ಬಗೆಯ ಕಾರಣಪರಂಪರೆಗಳಿಂದ ಇತ್ತಕಡೆಯ ಕನ್ನಡಿಗರ ಸ್ವಾಭಿಮಾನ ಸ್ವಭಾಷಾಭಿಮಾನವು ಕುಗ್ಗುತ್ತ ನಡೆದು ಕನ್ನಡವು ಮುಗ್ಗರಿಸಿ ಬಿದ್ದು ಮರಾಠಿಯ ಪ್ರಾಬಲ್ಯವೇ ಹೆಚ್ಚಾಗಿ ಹಬ್ಬಿ ಅದರ ವರ್ಚಸ್ವವೇ ಬೆಳೆಯಲಾರಂಭಿಸಿತು. "ಓದಿದರೆ ಮರಾಠೀ ಪುಸ್ತಕಗಳನ್ನೇ ಓದಬೇಕು; ತರಿಸಿದರೆ ಮರಾಠೀ ವರ್ತಮಾನಪತ್ರ ಮಾಸಪತ್ರಿಕೆಗಳನ್ನೇ ತರಿಸಬೇಕು; ನೋಡಿದರೆ ಮರಾಠೀ ನಾಟಕಗಳನ್ನೇ ನೋಡಬೇಕು; ಕೇಳಿದರೆ ಮರಾಠೀ ಹಿಂದುಸ್ಥಾನೀ ಸಂಗೀತವನ್ನೇ ಕೇಳ ಬೇಕು" ಎಂಬ ಸೊಲ್ಲೇ ಎಲ್ಲೆಲ್ಲಿಯೂ ಹರಡಿಕೊಂಡ ವಿಪರೀತ ಪರಿಸ್ಥಿತಿಯಿಂದ ಈ ಕನ್ನಡನಾಡು ಜರ್ಜರಿತವಾಗಿ ಹೋಯಿತು. ಇಂಥ ಅವಸ್ಥೆಯಲ್ಲಿ ಶಾಲೋಪಯೋಗೀ ಪುಸ್ತಕಗಳ ಹೊರತು ಯಾವ ಗ್ರಂಥವಾದರೂ

ಪುನರ್ಮುದ್ರಣವನ್ನು ಕಾಣದೇ ಕೊಳೆಯುತ್ತಬಿದ್ದಲ್ಲಿ ಯಾರಿಗೂ ಆಶ್ಚರ್ಯವಾಗುವ ಕಾರಣವಿಲ್ಲವಷ್ಟೆ? ಅಂತೇ ಈ ಸೀಮೆಯಲ್ಲಿ ಮುದ್ರಣಕಲೆಯು ಪ್ರವೇಶವಾಗುವ ಮೊದಲೇ ಮುಂಬಯಿಯಂಥ ಪರಪ್ರಾಂತದ ರಾಜಧಾನಿ ಪಟ್ಟಣದಲ್ಲಿ ಮೊದಲನೆಯಾವೃತ್ತಿಯು ಮುದ್ರಿತವಾಗಿ ಮುಂದೆ ೨೫ ವರ್ಷಗಳಲ್ಲಿ ೨ನೇ ೩ನೇ ಆವೃತ್ತಿಗಳನ್ನು ಕಂಡ ಈ ಶಾಕುಂತಲವು ನಡುವಿನ ಈ ೪೦ ವರ್ಷಗಳಲ್ಲಿ ಪುನಃ ಮುದ್ರಿತವಾಗದೆ ಮೂಲೆಗುಂಪಾಗಿ ಬೀಳುವ ಪ್ರಸಂಗ ಬಂದದ್ದೇನು ಸೋಜಿಗಬಡತಕ್ಕ ಸಂಗತಿಯಾಗಲಾರದು. ಈಗೀಗ ಸುದೈವದಿಂದ ಕನ್ನಡ ಜನಾಂಗದಲ್ಲೆಲ್ಲ ಆತ್ಮೀಯ ಜ್ಞಾನಜ್ಯೋತಿಯು ಬೆಳಗಿ ನವಜೀವನದ ಸಂಚಾರವಾಗುತ್ತ ನಡೆದಿದೆ. ಈ ನವಯುಗದಲ್ಲಿ ನಮ್ಮ ಪ್ರಾಚೀನ ಅರ್ವಾಚೀನ ಕಾವ್ಯಕುಸುಮದ ಮಕರಂದದ ಗುಟ್ಟಿಯನ್ನು ಹಾಕಿ ಕನ್ನಡ ಸಂಸ್ಕೃತಿಯ ಪುನರುದ್ಧಾರಕ್ಕೆ ಅವಶ್ಯಕವಾದ ಚೈತನ್ಯವನ್ನು ಹುಟ್ಟಿಸುವ ಕಾರ್ಯಕ್ಕೆ ಈಗ ಆರಂಭವಾಗಿ ಹೋಗಿದೆ. ಕುಮಾರವ್ಯಾಸನಿಂದಾರಂಭ ಮಾಡಿಕೊಂಡು ಅಂಬಿಕಾತನಯದತ್ತ, ಪುಟ್ಟಪ್ಪ, ಶ್ರೀರಂಗ ಮೊದಲಾದ ಕವಿಗಳ ಕಾವ್ಯಸೃಷ್ಟಿಯ ಪರಿಚಯವನ್ನು ಎಲ್ಲಕಡೆಯ ಕನ್ನಡಿಗರು ಯಥಾವತ್ತಾಗಿ ಯಥಾವಕಾಶವಾಗಿ ಹೊಂದುತ್ತ ನಡೆದಿದ್ದಾರೆ. ಅತ್ತ ನಿಜಾಮ ಕರ್ನಾಟಕದಿಂದ ದಕ್ಷಿಣ ಕನ್ನಡ ಜಿಲ್ಹೆಯ ತುದಿಯ ವರೆಗೆ ಇತ್ತ ಬೆಳಗಾವಿ ಜಿಲ್ಹೆಯಿಂದ ಅನಂತಪುರ ಸೇಲಂ ಕೊಯಿಮುತ್ತೂರು ಜಿಲ್ಹೆಯವರೆಗೆ ವಿವಿಧ ರಾಜಕೀಯ ಆಡಳತೆಗಳಿಗೆ ಒಳಗಾಗಿದ್ದ ಕನ್ನಡಿಗರೆಲ್ಲರೂ ಒಂದೇ ವಿಶಿಷ್ಟ ಸಂಸ್ಕೃತಿಯಿಂದ ಬೆಳೆದುಬಂದವರೆಂಬ ವಿಚಾರವು ಎಲ್ಲೆಡೆಯಲ್ಲಿಯೂ ಬೇರು ಬಿಡುತ್ತನಡೆದು ಕನ್ನಡ ಕವಿಗಳೆಲ್ಲಿ ಹುಟ್ಟಿದರೂ ತಮ್ಮವರೇ ಎಂಬ ಆತ್ಮೀಯ ಭಾವನೆಯು ಎಲ್ಲರಲ್ಲಿಯೂ ಒಡಮೂಡಹತ್ತಿದೆ. ಇಂಥ ಹದಗಾಲದಲ್ಲಿ ಸ್ವ. ಚುರಮುರಿ ಶೇಷಗಿರಿರಾಯರ ಶಾಕುಂತಲದ ಈ ಹೊಸ ಆವೃತ್ತಿಯು ಕನ್ನಡ ಜನಾಂಗಕ್ಕೆ ಉಪಲಬ್ಧವಾಗುತ್ತಿರುವ ಮೂಲಕ ನನ್ನ ಅಲ್ಪ ಬುದ್ಧಿಗೆ ಹೊಳೆದಮಟ್ಟಿಗೆ ಅದರ ಅಲ್ಪ ಪರಿಚಯವನ್ನು ಓದುಗರಿಗೆ ಮಾಡಿಕೊಡುವ ಮಹತ್ಕಾರ್ಯಭಾರವನ್ನು ಹೊರಲು ನಾನು ಒಡಂಬಟ್ಟಿದ್ದೇನೆ.

ಮೊದಲು ಕನ್ನಡದಲ್ಲಿ ನಾಟಕರೂಪವಾಗಿ ಪರಿವರ್ತಿಸಲ್ಪಟ್ಟ ಶಾಕುಂತಲ ನಾಟಕವೆಂದರೆ ಸ್ವ. ಚುರಮುರಿ ಶೇಷಗಿರಿರಾಯರದೇ ಎಂಬುದಕ್ಕೆ ವಾದವೇ

ಇಲ್ಲ. ತರುವಾಯದಲ್ಲಿ ಹುಟ್ಟಿದ್ದು ಮೈಸೂರಿನ ಆಸ್ಥಾನವಿದ್ವಾನ್‌ರಾಗಿದ್ದ ಸ್ವ. ಬಸವಪ್ಪ ಶಾಸ್ತ್ರಿಗಳದು. ಮೈಸೂರಿನ ಮಹಾರಾಜರಾದ ಗತಿಸಿದ ಶ್ರೀ. ಚಾಮರಾಜೇಂದ್ರ ಒಡೆಯರವರ ಪ್ರೇರಣೆಯಿಂದ ಶಾಸ್ತ್ರಿಗಳು ಇದನ್ನು ಬರೆದರೆಂದು ಪ್ರಸಿದ್ಧಿಯುಂಟು. ಶಾಸ್ತ್ರಿಗಳವರಾದರೋ ನಾಟಕದ ಕೊನೆಯಲ್ಲಿ "ನುತಗುಣಯುತ ಚಾಮಕ್ಷಿತಿಪತಿಸನ್ನಿಧಿಸಚಿವವರ ನೃಸಿಂಹಾರ್ಯೋತ್ಸಾಹಿತ ಬಸವಶಾಸ್ತ್ರಿ ತಾಂ ಸಂಸ್ಕೃತ ಶಾಕುಂತಳಮನಿಂತು ಕನ್ನಡಿಸಿರ್ಪಂ" ಎಂದು ಹೇಳಿದ್ದಾರೆ. ರಾಜಾಶ್ರಯವಾಗಲಿ ರಾಜಪುರುಷಾಶ್ರಯವಾಗಲಿ ಯಾವುದಿದ್ದರೂ ಕೃತಿಯ ಹೆಚ್ಚಳದ ಸಂಬಂಧವಾಗಿ ಇವುಗಳೊಳಗೆ ವ್ಯತ್ಯಾಸವೆಣಿಸುವ ಕಾರಣವಿಲ್ಲ. ಇವರ ಭಾಷಾಂತರವು ಹೊಸಗನ್ನಡ ಗದ್ಯದಿಂದೊಡಗೂಡಿ ಪದ್ಯಗಳಲ್ಲಿ ಶಾಸ್ತ್ರಿಗಳವರ ಅಗಾಧ ಪಾಂಡಿತ್ಯಕ್ಕೆ ಅನುರೂಪವಾಗುವಂತೆ "ಪಳಗನ್ನಡ ನುಡಿದಾರಿಯನೊಳಗೊಂಡತಿ ಪಂಡಿತ ಪ್ರಬುದ್ಧ ಪ್ರಿಯು" ವಾಗಿ ಮೂಲದ ಪ್ರತ್ಯಕ್ಷ ಪ್ರತಿಬಿಂಬವೇ ಆಗಿರುವದೆನ್ನಲು ಅಡ್ಡಿ ಇಲ್ಲ. ಸ್ವ. ಬಸಪ್ಪ ಶಾಸ್ತ್ರಿಗಳು ಶಾಕುಂತಲವನ್ನು ಬರೆದನಂತರ ಸ್ಥಲಕಾಲ ಭೇದದಿಂದ ಇನ್ನೂ ಎರಡು ಮೂರು ಗದ್ಯಪದ್ಯಾತ್ಮಕ ಭಾಷಾಂತರಗಳಾದದ್ದೂ ಉಂಟೆಂದು ತಿಳಿಯುತ್ತದೆ. ಆದರೆ ಇವಾವವೂ ನನಗೆ ನೋಡಲು ದೊರೆತಿಲ್ಲ. ಮೈಸೂರಿನ ಮಹಾರಾಜಾ ಕಾಲೇಜಿನಲ್ಲಿ ಪ್ರೊಫೆಸರರಾಗಿದ್ದ ಸ್ವ. ಬಿ. ಕೃಷ್ಣಪ್ಪ ಎಂ. ಎ. ಇವರು ಸಂಪೂರ್ಣ ಹೊಸಗನ್ನಡ ಗದ್ಯದಲ್ಲಿ ಶಾಕುಂತಲವನ್ನು ಭಾಷಾಂತರಿಸಿ ಕಾಲಿದಾಸಕೃತಿಯ ಯಥಾರ್ಥ ಭಾವವನ್ನು ಕನ್ನಡಿಗರಿಗೆ ಸುಲಭವಾಗಿ ತಿಳಿಸಿಕೊಡುವ ಅನುಗ್ರಹ ಮಾಡಿರುತ್ತಾರೆ. ಸ್ವ. ಬಸವಪ್ಪ ಶಾಸ್ತ್ರಿಗಳ ಹಾಗು ಸ್ವ. ಬಿ. ಕೃಷ್ಣಪ್ಪನವರ ಭಾಷಾಂತರಗಳಲ್ಲಿ ಮೂಲವನ್ನು ಪ್ರತಿಕೃತಿಯಲ್ಲಿ ಇದ್ದಕ್ಕಿದ್ದಂತೆಯೇ ಆದರೂ ಸೊಗಸಾಗಿ ಸುಂದರವಾಗಿ ಸುಮನೋಹರವಾಗಿ ಒಡಮೂಡಿಸಿ ಕೊಡಬಲ್ಲ ಛಾಯಾಚಿತ್ರಕಾರನ (Photographer) ಕಲಾಭಿಜ್ಞತೆಯೂ ನೈಪುಣ್ಯಾವಿಶೇಷವೂ ಕಂಡುಬರುತ್ತವೆ. ಸ್ವ. ಚುರಮುರಿಯವರ ಭಾಷಾಂತರದ ಕ್ರಮವು ಇವುಗಳಿಂದ ಭಿನ್ನವಾಗಿದೆ. ಮೂಲ ಶಾಕುಂತಲದಲ್ಲಿರುವ ಅಗಾಧವಾದ ಕಲ್ಪನಾ ಚಮತ್ಕೃತಿ, ಅಸದೃಶವಾದ ವರ್ಣನ ಚಾತುರ್ಯ, ಅನನ್ಯ ಸಾಧಾರಣವಾದ ಅಲಂಕಾರ ನಿಯೋಜನೆ ಮೊದಲಾದ ಕಾಲಿದಾಸನ ಕಲಾವೈಶಿಷ್ಟ್ಯಗಳನ್ನು ಅಚ್ಚಗನ್ನಡತನದ ಮುಸಿಯಲ್ಲಿ ಎರಕಹೊಯ್ಯುವಾಗ ಸ್ವ. ಶೇಷಗಿರಿ

ರಾಯರು ತಮಗೆ ನಿಸರ್ಗಸಿದ್ಧವಾದ ಕವಿತ್ವ ಪ್ರತಿಭೆಯ ಪ್ರಭಾವದಿಂದ ಚೆನ್ನಾಗಿ ವಿಕಾಸಗೊಳಿಸಿ ಮೂಲಕೃತಿಯ ಅಂದಚಂದಗಳಿಗೆ ಹೆಚ್ಚಿನ ಸಿಂಗರ ವನ್ನು ತಂದುಕೊಟ್ಟಿದ್ದಾರೆ. ಕಾಲಿದಾಸನ ಸೂತ್ರರೂಪವಾದ ಒಂದೆರಡು ಮಾತುಗಳನ್ನು ವಿಸ್ತಾರಗೊಳಿಸಿ ವಿಶದಪಡಿಸುವಾಗ ಕನ್ನಡ ಕವಿಕುಲದ ಕಲಾಭಿಸಂಧಾನಕ್ಕೆ ಒಪ್ಪುವ ತೆರನಾಗಿ ಭಾಷ್ಯಕಾರನ ಜಾಣ್ಮೆಯನ್ನು ಅಭಿ ವ್ಯಕ್ತಗೊಳಿಸಿದ್ದಾರೆ. ಇದು ಹೇಗೆಂಬುದನ್ನು ತೋರಿಸಿಕೊಡುವದಕ್ಕಾಗಿ ಒಂದೆರಡು ಮಾದರಿಗಳನ್ನು ಇಲ್ಲಿ ಕೊಡುವದು ಅಪ್ರಸ್ತುತವಾಗಲಾರದು.

೧ ಮೊದಲನೆಯ ಅಂಕಿನ ಕೊನೆಗೆ ಪ್ರಥಮದರ್ಶನ ಪ್ರಸಂಗದಿಂದ ಶಕುಂತಲೆಯನ್ನು ಅಗಲುವಾಗ ಕಾಲಿದಾಸನ ದುಷ್ಯಂತನು ಹೀಗೆ ಹೇಳು ತ್ತಾನೆ:—

**ಗಚ್ಛತಿ ಪುರಃ ಶರೀರಂ ಧಾವತಿ ಪಶ್ಚಾತ್ ಅಸಂಸ್ತುತಂ ಚೇತಃ**
**ಚೀನಾಂಶುಕಮಿವ ಕೇತೋಃ ಪ್ರತಿವಾತಂ ನೀಯಮಾನಸ್ಯ ||**

ಇದನ್ನು ಸ್ವ. ಬಸಪ್ಪಶಾಸ್ತ್ರಿಗಳು

**ಮುಂದಕೆ ಪೋಪುದು ತನುವಿದು |**
**ಹಿಂದೆಸೆಗೋಡುವದು ಬಳಕೆಗೈಯ್ಯದ ಮನವೇ ||**
**ನೆಂದೆಸೆನೊ ಪವನನಿದಿರೊಳ್ |**
**ತಂದಪತಾಕಿಕೆಯ ಚೀನವಸನಮಿದೆಂಬೊಲ್ ||**

ಎಂಬುದಾಗಿ ಕನ್ನಡ ಕಂದಪದ್ಯದಲ್ಲಿ ಹೇಳಿದ್ದಾರೆ. ಸ್ವ. ಬಿ. ಕೃಷ್ಣಪ್ಪನವರು ಇದನ್ನೇ "ಗಾಳಿಗೆ ಇದಿರಾಗಿ ಚಲಿಸುತ್ತಿರುವ ಧ್ವಜಸ್ತಂಭದ ಹಾಗೆಯೇ ನನ್ನ ಶರೀರವು ಮುಂದೆ ಮುಂದಕ್ಕೆ ಚಲಿಸುತ್ತಿರುವುದು; (ಧ್ವಜಸ್ಥವಾದ) ಚೀನಾಂಶುಕದಂತೆಯೇ (ನನ್ನ) ಮನಸ್ಸು ಅಸಂಸ್ಥುತವಾಗಿ ಹಿಂದು ಹಿಂದಕ್ಕೇ ಓಡುತ್ತಿದೆ" ಎಂದು ಗದ್ಯದಲ್ಲಿ ಹೇಳಿದ್ದಾರೆ. ಸ್ವ. ಶೇಷಗಿರಿರಾಯರು ಇದೇ ಮಾತನ್ನು ಹೇಗೆ ಹೇಳಿದ್ದಾರೋ ನೋಡಬಹುದು.

|| ಪದ ||

**ಬರಲಾರದೆನ್ನಮನ || ಎನ್ನೊಡನೆ || ಪಲ್ಲ ||**
**ಜನುಮದ ಸ್ನೇಹದ । ತನುವಿನೊಳಿರೆ ಪರ ||**
**ತನುವಿಯ ಕೋಮಲ | ತನುವ ಬಯಿಸಿ ತಾ || ೧ ||**

ಶರೀರ ಮುಂದಕೆ ಪೋಗು । ತಿರಲು ರಥದಕೇತು ||
ವಿರದೆ ಹಿಂದಕ್ಕೆ ಜಗ್ಗು | ತಿರುವಾ ತೆರದೊಳು || ೨ ||
ಲಲಿತ ರೂಪದ ಸರ | ದೊಳು ನೇತ್ರನಳಿನ ||
ದಳದ ಮೋಹದ ಲತಾ । ವಲಯದಿ ಸಿಲುಕಿ || ೩ ||

೨. ಎರಡನೆಯ ಅಂಕಿನಲ್ಲಿ ದುಷ್ಯಂತನು ಶಕುಂತಲೆಯ ಲಾವಣ್ಯ ಸರ್ವಸ್ವವನ್ನು ತನ್ನ ಮಿತ್ರನ ಮುಂದೆ ವರ್ಣಿಸಿದ್ದು ಕಾಲಿದಾಸನ ಕೃತಿಯಲ್ಲಿ ಹೀಗಿದೆ:—

ಚಿತ್ರೇ ನಿವೇಶ್ಯ ಪರಿಕಲ್ಪಿತಸತ್ವಯೋಗಾ ।
ರೂಪೋಚ್ಚಯೇನ ಮನಸಾ ವಿಧಿನಾ ಕೃತಾ ನು ||
ಸ್ತ್ರೀರತ್ನಸೃಷ್ಟಿರಪರಾ ಪ್ರತಿಭಾತಿ ಸಾ ಮೆ |
ಧಾತುರ್ವಿಭುತ್ವಮನುಚಿಂತ್ಯ ವಪುಶ್ಚ ತಸ್ಯಾः ||

ಸ್ವ. ಬಸಪ್ಪ ಶಾಸ್ತ್ರಿಗಳು ಇದನ್ನು ಈ ಬಗೆಯಾಗಿ ಹೇಳಿದ್ದಾರೆ:—

ಪ್ರಾಣಂ ಬೊಯ್ದನೊ ಚಿತ್ರಿಸುತ್ತಮವಳಂ ಸೌಂದಾರ್ಯ
ಸಾರಂಗಳಿಂ ||
ವಾಣೀವಲ್ಲಭನೋವೊ ನಿರ್ಮಿಸಿದನೋ ಮೇಣ್ ಚಿತ್ತದಿಂ
ಗೆಯ್ದನೊ ||
ಜಾಣಿಂ ಬ್ರಹ್ಮನ ಮತ್ತುಮಾಕೆಯೊಡಲಂ ನೋಡಲ್ಕದೇ
ನೆಂದೆಪೆಂ ||
ಶ್ರೋಣೀ ಭಾಗದೆ ಬೇರೆತೋರ್ಕುಮೆನಗಾಸ್ತ್ರೀ ರತ್ನ
ಸೃಷ್ಟಿಕ್ರಮಂ ||

ಸ್ವ. ಬಿ. ಕೃಷ್ಣಪ್ಪನವರು ಇದನ್ನು ಹೀಗೆ ಪರಿವರ್ತಿಸಿದ್ದಾರೆ:—
"ಬ್ರಹ್ಮನ ನಿರ್ಮಾಣ ಸಾಮರ್ಥ್ಯವನ್ನೂ ಆಕೆಯ (ಅನುಪಮ) ಶರೀರ ವನ್ನೂ ಪರಶೀಲಿಸಲು, ಬ್ರಹ್ಮನು ಮೊದಲು ಮನಸ್ಸಿನಲ್ಲೇ ಸೌಂದರ್ಯಸಾರ ಗಳಿಂದ ಒಂದು ಚಿತ್ರವನ್ನು ವಿರಚಿಸಿ ಅದಕ್ಕೆ ಪ್ರಾಣಸಾರವನ್ನು ಏನಾದರೂ ಹೊಯ್ದನೋ ಏನೋ! ನನಗಂತೂ ಆ ಸ್ತ್ರೀರತ್ನದ ಸೃಷ್ಟಿಕ್ರಮವು ಬೇರೆ ಯೆಂದೇ ತೋರುವುದು."

ಸ್ವ. ಶೇಷಗಿರಿರಾಯರ ಕೃತಿಯಲ್ಲಿ ಇಲ್ಲಿ ಈ ಪದವಿದೆ:—

॥ ಪದ ॥

**ಬಣ್ಣಿಸಲ್ಹ್ಯಾಂಗಿನ್ನು ॥ ನುಡಿಯಲಿ ಲಾ-**
**ವಣ್ಯದ ಖಣಿಯನ್ನು ॥ ಪಲ್ಲ ॥**
**ಕಣ್ಣೊಳು ಕಟ್ಟಿದಾ ಹೆಣ್ಣಿನ ರೂಪವು ।**
**ಎನ್ನೊಳನಂಗನ ಸನ್ನಿಧಿಯಂತಿರೆ ॥ ಅನುಪಲ್ಲ ॥**
**ಮೊದಲು ಮನಸುಗೊಟ್ಟು ॥ ವಿಧಿಯು ಚಿತ್ರ ।**
**ಮುದದಿಂದೆ ಬರೆದಿಟ್ಟು ॥**
**ಅದರ ಮೈಯೊಳು ಜೀವದ ಕಳೆಯನು ತುಂ- ।**
**ಬಿದ ಮ್ಯಾಲಿಳೆಯೊಳಗುದುಭವಿಸಿದಳೇನೋ ॥ ೧ ॥**
**ಕೈ ನಡಗುವದೆಂದು ॥ ವಿಧಾತನು ।**
**ಧ್ಯಾನದೊಳಗೆ ತಂದು ॥**
**ಮೌನದಿಂದತಿಶಯ ಮೋಹದ ರೂಪವ ।**
**ಧೇನಿಸಿ ಪಡೆದಿಹ ಮಾನಸ ಪುತ್ರಿಯೊ ॥ ೨ ॥**
**ಎಂದಿಗೆ ಬರಬೇಕೈ ॥ ಬ್ರಹ್ಮನಿಗಿಂಥ ।**
**ಸುಂದರ ಕೃತಿ ಸಾಕೈ ॥**
**ಇಂದಿರಾ ರೂಪವ ಚೆಂದದಿ ಕಲಿತವ- ।**
**ಳಂದದೊಳಿಳಿಸಿಹನಿಂದೀವರಾಕ್ಷಿಯ ॥ ೩ ॥**

೩. ಮೂರನೆಯ ಅಂಕಿನಲ್ಲಿ ಶಕುಂತಲೆಯು ಪ್ರೇಮಪತ್ರವನ್ನು ಬರೆಯುವದಕ್ಕಾಗಿ ಪದ್ಯವನ್ನು ರಚಿಸುತ್ತಿರಲು ಅವಳ ಭಾವಭಂಗಿಗಳನ್ನು ಕಾಲಿದಾಸನ ದುಷ್ಯಂತನು ಹೀಗೆ ವರ್ಣಿಸಿದ್ದಾನೆ:—

**ಉನ್ನಮಿತೈಕಭ್ರೂಲತಮಾನನಮಸ್ಯಾಃ ಪದಾನಿ ರಚಯಂತ್ಯಾಃ ॥**
**ಕಂಟಕಿತೇನ ಪ್ರಥಯತಿ ಮಯ್ಯನುರಾಗಂ ಕಪೋಲೇನ ॥**

ಸ್ವ. ಬಸಪ್ಪ ಶಾಸ್ತ್ರಿಗಳ ಶಾಕುಂತಲದಲ್ಲಿ ಇಲ್ಲಿ ಈ ಕಂದ ಪದ್ಯವಿದೆ:—

**ಮೃದುಪದ ಬಂಧವನೆಸಗುವ ।**
**ಸುದತಿಯ ನಿಮಿರ್ದೆತ್ತಿದೊಂದು ಪುರ್ವಿಂ ಮೆರೆವೀ ॥**
**ವದನಂ ಪುಲಕಂಗೂಡಿದ ।**
**ಕದಪಿಂ ಕನ್ನಡಿಪುದೆನ್ನೊಳಿರ್ಪಭಿರತಿಯಂ ॥**

ಸ್ವ. ಬಿ. ಕೃಷ್ಟಪ್ಪನವರು ಇದನ್ನು ಹೀಗೆ ಕನ್ನಡಿಸಿದ್ದಾರೆ:—

''ಪದ್ಯವನ್ನು ರಚಿಸುತ್ತಿರುವ ಈಕೆಯ ಎತ್ತಿದ ಒಂದು ಭ್ರೂಲತೆಯುಳ್ಳ ಮುಖವು ಪುಲಕಿತವಾದ ಕಪೋಲಗಳ ಮೂಲಕ ನನ್ನಲ್ಲಿ(ನೆಲಿಸಿ)ರುವ ಅನುರಾಗವನ್ನು ಪ್ರಕಟಗೊಳಿಸುವದು.''

ಸ್ವ. ಶೇಷಗಿರಿರಾಯರು ಈ ಸಂದರ್ಭವನ್ನು ಹೀಗೆ ಬಣ್ಣಿಸಿದ್ದಾರೆ.

( ಪದ )

**ಪದವ ರಚಿಸುತಿಹಳು ಚಂದಿರವದನೆ ಮನದೊಳು || ಪಲ್ಲ ||**
**ಹೃದಯದಾಸೆದೋರಲು ಬಲು । ಹೆದರಿ । ಬೆದರಿ । ಚದುರಿ ।**
**ಮಧುರಿ || ಅನುಪಲ್ಲ ||**

**ಕರದಿ ಗಲ್ಲನಿರಿಸಿ ಒಂದೇ ಕಡೆಗೆ ನೋಡುತಾ ।**
**ಬೆರಳಿನಿಂದೆ ಮೆಲ್ಲನೆ ಮೃದು ತಾಳ ಮೆಟ್ಟುತಾ ||**
**ಸಿರಿವನೊಲಿಯೆಪಣೆಯೊಳು ಕರಿ- ।**
**ಸುರುಳು ಗುರುಳು ಉರುಳುತಿರಲು || ೧ ||**

**ತವಕದಿಂದಲುಚಿತ ಸೂಚಿಸಿರಲು ಹಿಗ್ಗುತಾ ।**
**ಕವನರಸದಿ ಕೆನ್ನೆಯೊಳು ಮುಳ್ಳು ಸಾಂಟುತಾ ||**
**ಕವಿಯೆ ಬಾಷ್ಪ ಕಣ್ಣೊಳುಕ್ಕು- ।**
**ತಿವೆ ತನುವತಿ ನವತ ಯುವತಿ || ೨ ||**

**ಒಂದೆ ಭ್ರೂಲತೆಯ ಬಾಲೆ ಮ್ಯಾಲಕೆತ್ತುತಾ ।**
**ಹೊಂದಿಬರಲು ರಚನೆ ಸಣ್ಣ ಸ್ವರದಿ ನುಡಿಯುತಾ ||**
**ಬಂಧನ ಸೌಂದರಿಯುದಾ- ।**
**ನಂದದಿಂದೆ ಮಿಂದು ಒಂದು || ೩ ||**

ಇನ್ನು ಹೆಚ್ಚಾಗಿ ವಿಸ್ತಾರಗೊಳಿಸದೆ ಶಾಕುಂತಲದೊಳಗೂ ಶ್ರೇಷ್ಠತಮವೆಂದು ಜಗತ್ತೇ ಹೊಗಳುತ್ತಿರುವ ನಾಲ್ಕನೇ ಅಂಕಿನೊಳಗಿನ ನಾಲ್ಕು ಶ್ಲೋಕಗಳೊಳಗಿನ ಒಂದನ್ನು ಇಲ್ಲಿ ಉದಾಹರಿಸಿ ಮಿಕ್ಕದ್ದನ್ನೆಲ್ಲ ಸೂಜ್ಞವಾಚಕರ ಸೂಕ್ಷ್ಮಾವಲೋಕನಕ್ಕೆ ಬಿಟ್ಟು ಬಿಡುವದೇ ಲೇಸು.

೪. ಪತಿಯಾಲಕ್ಕೆ ಪೋಗಲು ಅತ್ಯಂತ ಉತ್ಕಂಠಿತೆಯಾದರೂ ತನ್ನನ್ನು ಬಹು ಕಾಲದ ವರೆಗೆ ಪಿತೃವಾತ್ಸಲ್ಯದಿಂದ ಲಾಲನ ಪಾಲನ ಮಾಡಿದ ಕಣ್ವತಾ

ತನನ್ನಗಲಿ ದೇಶಾಂತರದಲ್ಲಿ ತಾನು ಹೇಗೆ ಜೀವಧಾರಣ ಮಾಡಿಕೊಂಡು ಬಾಳುವೆನೆಂಬ ಉದ್ವೇಗದಿಂದ ದುಃಖಿಸುವ ಶಕುಂತಲೆಯನ್ನು ಕಾಲಿದಾಸನ ಕಾಸ್ಯಪನು ಹೀಗೆ ಸಮಾಧಾನ ಪಡಿಸುತ್ತಾನೆ:—

**ಅಭಿಜನವತೋ ಭರ್ತುಃಶ್ಲಾಘ್ಯೇ ಸ್ಥಿತಾ ಗೃಹಿಣೀಪದೇ ||**
**ವಿಭವಗುರುಭಿಃ ಕೃತ್ಯೈಸ್ತಸ್ಯ ಪ್ರತಿಕ್ಷಣಮಾಕುಲಾ ||**
**ತನಯಮಚಿರಾತ್ಪ್ರಾಚೀವಾರ್ಕಂ ಪ್ರಸೂಯ ಚ ಪಾವನಂ |**
**ಮಮವಿರಹಜಾಂ ನತ್ವಂ ವತ್ಸೇ ಶುಚಂ ಗಣಯಿಷ್ಯಸಿ ||**

ಸ್ವ. ಬಸಪ್ಪ ಶಾಸ್ತ್ರಿಗಳ ಅನುವಾದವು ಹೀಗಿದೆ:—

**ಕುವರಿ ಕುಲೀನನಾದ ಪತಿಗೊಪ್ಪುವ ಪಟ್ಟದ ರಾಣಿಯಾಗಿ ವೈ ||**
**ಭವಗಳಿನೇಳ್ಗೆವೆತ್ತಿನನ ಕೃತ್ಯದೊಳಾಕುಲೆಯಾಗುತಾವಗಂ ||**
**ರವಿಯನಮರ್ತ್ಯನಾಥದಿಶೆ ತಾಂ ಪಡೆವಂತೆ ಸಗಾತ್ರ ಪುತ್ರನಂ |**
**ತವಕದೆ ಪೆತ್ತು ನೀನೆಣಿಸದಿರ್ಪೆ ಮದೀಯ ವಿಯೋಗದುಃಖವಂ ||**

ಸ್ವ. ಬಿ. ಕೃಷ್ಣಪ್ಪನವರು ಇದನ್ನೇ ಹೀಗೆ ಭಾಷಾಂತರಿಸಿದ್ದಾರೆ :—

" ಕುಲೀನನಾದ ಪತಿಯಿಂದ ಶ್ಲಾಘ್ಯವಾದ ಗೃಹಿಣೀ ಪದವನ್ನು ಪಡೆದವಳಾಗಿ ಆತನ ವಿಭವೋಪೇತವಾದ ಮಹಾಕಾರ್ಯಗಳಲ್ಲಿ ಪ್ರತಿಕ್ಷಣವೂ ನಿರತಳಾಗಿರುತ್ತಾ ಪ್ರಾಚೀವನಿತೆಯು ಆದಿತ್ಯನನ್ನು ಪ್ರಸವಿಸುವಂತೆ ನೀನು ಸ್ವಲ್ಪ ಕಾಲದಲ್ಲಿಯೇ ತನಯನನ್ನು ಪಡೆಯುವದರಿಂದ ನನ್ನ ವಿಯೋಗ ದುಃಖವನ್ನು ನೀನು ಅನುಭವಿಸದಂತಾಗುವದು. "

ಸ್ವ. ಶೇಷಗಿರಿರಾಯರು ಇದೇ ಮಾತನ್ನು ಹೀಗೆ ಹೇಳಿಸಿದ್ದಾರೆ:—

**(ಪದ)**

**ಅಗಲಿ ಪೋಗುವುದಕ್ಕೆ ದುಃಖವ್ಯಾಕೆ** || ಪಲ್ಲ ||
**ಮಗುವೆ ನಿನ್ನಯ ಪತಿಯು ಜಗದೊಡೆಯನಮ್ಮಾ** ||ಅನಪಲ್ಲ||
**ಅತಿಕುಲೀನನೆ ನಿನ್ನ ಪತಿಯವನ ಮನೆಯೊಳಗೆ**
**ಸತಿಯಾಗಿ ಬಾಳ್ವುದೆ ಶ್ಲಾಘ್ಯ ನಿನಗೆ ||**
**ಮತಿಯೆಲ್ಲ ಮುಳುಗಿ ಸಂತತ ನಿನ್ನ ಮನೆಯ ಬಹು** |
**ಕೃತಿಗಳೊಳು ತವರ್ಮನೆಯ ಸ್ಮೃತಿಯಾಗದಮ್ಮಾ** ||೧||

ಇನನು ಪ್ರಾಚಿಯೊಳುದಯುವನೆ ಗೈದ ತೆರೆನಂತೆ ।  
ತನಯು ನಿನ್ನೊಳು ಪುಟ್ಟಲಂಕದೊಳು ॥  
ಅನುದಿನದೊಳಿಟ್ಟು ನೋಹದಿ ಮುದ್ದಿಸಲು ಬಂಧು- ।  
ಜನವಿರಹದಿಂದಾದ ಕಷ್ಟವೆಲ್ಲಿಹುದು ॥ ೨ ॥  
ಪರಿಪರಿಯು ವಿಭವದೊಳು ಪತಿಯೊಡನೆ ಹರುಷದೊಳು ।  
ಸರಸ ಸವಿಮಾತುಗಳ ಸೌಖ್ಯ ಬಹಳು ॥  
ಮರಿಸಿಬಿಡುವದು ನಮ್ಮನರಗಳಿಗೆಯೊಳು ನೀ ತ- ।  
ವರ ಮನೆಯ ನೆನಿಸುವದು ಬಹು ದಿನದ ಕನಸು ॥ ೩ ॥

ಹೀಗೆ ನಾಂದಿಯಿಂದಾರಂಭ ಮಾಡಿಕೊಂಡು ಭರತವಾಕ್ಯದ ವರೆಗಿನ ಒಂದೊಂದು ಮೂಲ ಪದ್ಯವನ್ನು ವಿಮರ್ಶಿಸಿ ನೋಡಿದರೆ ಬಹುಶಃ ಎಲ್ಲವುಗಳಲ್ಲಿ ಸ್ವ. ಶೇಷಗಿರಿರಾಯರ ಪ್ರತಿಭೆಯು ಮೂಲಕೃತಿಯನ್ನು ಹೆಚ್ಚಾಗಿ ಅಂದಗೊಳಿಸಿ ಕನ್ನಡಿಗರ ಮುಂದೆ ಮಂಡಿಸುವ ಕಾರ್ಯದಲ್ಲಿ ಕಾಲಿದಾಸನ ಕೀರ್ತಿಯನ್ನು ಮತ್ತಿಷ್ಟು ಉಜ್ವಲವಾಗಿ ಬೆಳಗಿಸುವದಕ್ಕೆ ಕಾರಣವಾಗಿರುವದೆಂದು ಯಾರಿಗಾದರೂ ತೋರದಿರದು. ಮೂಲ ಪದ್ಯಾನುವಾದದಲ್ಲಿ ಅಖಂಡವಾಗಿ ಪ್ರಸ್ಫುರಿತವಾಗಿ ಪ್ರವಾಹಗೊಂಡ ಸ್ವ. ಶೇಷಗಿರಿರಾಯರ ಕವಿತ್ವಸ್ಫೂರ್ತಿಯು ಮೂಲದಲ್ಲಿದ್ದ ಎಷ್ಟೋ ಗದ್ಯಗಳನ್ನೂ ಪದ್ಯರೂಪವಾಗಿ ಮಾರ್ಪಡಿಸಿರುವದು ನಿದರ್ಶನಕ್ಕೆ ಬರುತ್ತದೆ. ಈ ಬಗ್ಗೆ ಈ ಕೆಳಗೆ ಕಾಣಿಸಿರುವ ಪದ್ಯಗಳನ್ನು ನೋಡಬಹುದು.

| ಅಂಕು. | ಪದ | ಪುಟ. |
|---|---|---|
| ೧ | ನೀರು ಚಿಮ್ಮಡಿಸುವ ಬನ್ನಿರೆ ಬನದೊಳು. | ೧೦ |
| ೩ | ಹೆಣ್ಣಿನ ಗುಣಗಳಿವೆ. | ೭೧ |
| ೪ | ನೋಡೆ ಚಿಂತೆಯೊಳಾರಗೂಡ ಮಾತನಾಡದವಳ. | ೮೪ |
| ೪ | ಉದಯ ಕಾಲವಾಯಿತು ಜಗವೆಲ್ಲ ಸಮ್ಮುದವಾಗಲು ಮೆಲ್ಲನೆ. | ೮೬ |
| ೪ | ಮೋಸಮಾಡಿಪೋದನಮ್ಮ. | ೮೭ |
| ೪ | ಹೇಳಿ ಕಳುಹಿಸಯ್ಯ ತಾತಯ್ಯಾ ಸುದ್ದಿಯಾ. | ೯೯ |
| ೪ | ಕಂಡಾ ಇನ್ನ್ಯಾತಕೆ ಬರುವೀ ಬಳಿಯಲ್ಲಿ. | ೧೦೦ |
| ೪ | ಕಮಲದಳಮೊರೆಯಾಗಲಿನಯನ. | ೧೦೧ |

ಇವೇ ಮೊದಲಾದ ಸ್ವತಂತ್ರ ಪದ್ಯಗಳಲ್ಲಿ ಕೂಡ ಸ್ವ. ಶೇಷಗಿರಿರಾಯರ ಪ್ರತಿಭೆಯು ಅವಿಚ್ಛಿನ್ನವಾಗಿ ಪ್ರಕಟವಾಗಿರುವದು ವಾಚಕರ ನಿದರ್ಶನಕ್ಕೆ ಬಾರದಿರದು.

ಸ್ವ. ಶೇಷಗಿರಿರಾಯರ ಪರಿವರ್ತನ ಕ್ರಮದ ನಿರೀಕ್ಷಣವನ್ನು ಇಷ್ಟರ ಮಟ್ಟಿಗೆ ಮಾಡಿದಬಳಿಕ ಅವರಿಂದ ಉಪಯೋಗಿಸಲ್ಪಟ್ಟಿರುವ ಭಾಷೆಯ ವಿಷಯವಾಗಿಯೂ ಒಂದೆರಡು ಮಾತುಗಳನ್ನು ಹೇಳುವದು ಕ್ರಮ ಪ್ರಾಪ್ತ ವಾಗಿದೆ.

ನಾಟಕವು ''ದೃಶ್ಯಕಾವ್ಯ" ವಷ್ಟೆ? ಬೇರೆ ಬೇರೆ ಪಾತ್ರಗಳು ಅದನ್ನು ರಂಗಭೂಮಿಯ ಮೇಲೆ ಅಭಿನಯಿಸುವದನ್ನು ಸಾಮಾನ್ಯವಾದ ಪ್ರೇಕ್ಷಕ ಗಣವು ಕೂಡ ನೋಡಿ, ಮಾತುಗಳನ್ನು ಕೇಳಿ, ಭಾವಗಳನ್ನು ಗ್ರಹಿಸಿ, ಮನ ರಂಜನೆಯನ್ನು ಹೊಂದಿ, ಸಂತೋಷದಿಂದ ತಲೆದೂಗಿ, ಅದರೊಳಗಿನ ಬೋಧ ದಿಂದ ಬುದ್ಧಿಗಲಿಯ ಬೇಕೆಂಬದು ನಾಟ್ಯ ಸೃಷ್ಟಿಯ ಮೂಲ ಉದ್ದೇಶವಾಗಿದೆ. ಆದದರಿಂದ ನಾಟಕದ ಭಾಷೆಯು ಎಷ್ಟು ಮಟ್ಟಿಗೂ ಕ್ಲಿಷ್ಟವಾಗಿರದೆ ಸಾಮಾ ನ್ಯವಾಗಿ ದೇಶದಲ್ಲಿ ಬಳಿಕೆಯಲ್ಲಿದ್ದ ಭಾಷೆಯೇ ಅದರಲ್ಲಿ ಉಪಯೋಗಿಸಲ್ಪಟ್ಟಿರ ಬೇಕೆಂಬುದು ಸ್ಪಷ್ಟವಾಗಿದೆ. ಈಗೀಗ ಹೊದಾಸಗಿ ಹುಟ್ಟುತ್ತಿರುವ ನಾಟಕ ಗಳಲ್ಲಂತೂ ಈ ಮಾರ್ಗವೇ ಗ್ರಂಥಕಾರರಿಂದ ಅನುಸರಿಸಲ್ಪಡುತ್ತಿರುವದು ಕಂಡುಬರುತ್ತಿದೆ. ಸ್ವ. ಶೇಷಗಿರಿರಾಯರು ಇದೇ ತತ್ವವನ್ನು ಕಂಡು ಹಿಡಿದು ತಮ್ಮ ಕಾಲಕ್ಕೆ ಈ ಸೀಮೆಯಲ್ಲಿ ಪ್ರಚಾರದಲ್ಲಿದ್ದ ಸರಳವಾದ ಸುಲಭವಾದ ಆದರೂ ಪರಿಶುದ್ಧವಾದ ಭಾಷಾಶೈಲಿಯನ್ನೇ ಅನುಸರಿಸಿರುವದು ಕಂಡು ಬರುತ್ತದೆ. ವಿದೂಷಕ ಹಾಗು ಮೀನಗಾರ ಇವೆರಡು ಪಾತ್ರಗಳನ್ನು ಬಿಟ್ಟು ಎಲ್ಲ ಪಾತ್ರಗಳ ಮಾತುಗಳು ಸುಸಂಸ್ಕೃತ ಸಮಾಜದಲ್ಲಿ ವಾಡಿಕೆಯಾಗಿ ಬಳಕೆಯಲ್ಲಿರುವ ಭಾಷಾಸರಣಿಯಲ್ಲಿಯೇ ಬರೆಯಲ್ಪಟ್ಟಿವೆ. ವಿದೂಷಕ ಮತ್ತು ಮೀನುಗಾರ ಇವರ ಬಾಯಿಯಲ್ಲಿ ಮಾತ್ರ ಇತ್ತ ಕಡೆಯ ಗ್ರಾಮ್ಯಭಾಷೆಯು

ನಿಯೋಜಿತವಾಗಿದೆ. ಪದಗಳು ಕರ್ನಾಟಕ ದೇಶದಲ್ಲಿ ಪುರಾತನ ಕಾಲ ದಿಂದಲೂ ಜ್ಞಾನಭಕ್ತಿವೈರಾಗ್ಯಗಳ ಜೊತೆಯಲ್ಲಿಯೇ ನಯನೀತಿ ನಡಾವಳಿ ಗಳನ್ನು ಸಾಮಾನ್ಯವಾಗಿ ಜನಾಂಗಕ್ಕೆಲ್ಲ ಬೋಧಿಸುತ್ತ ಮನುಷ್ಯ ಪ್ರಪಂಚ ವನ್ನೇ ಪರಮಾರ್ಥಮಯವಾಗಿ ಮಾಡಿದ ಭಗವದ್ಭಕ್ತರ ದಿವ್ಯವಾಣಿಯ ಸಮುಚ್ಚಯವಾಗಿರುವ " ದಾಸಕೂಟ ವಾಙ್ಮಯ " ದ ಲಲಿತ ಬಂಧ ಸರಣಿ ಯನ್ನನುಸರಿಸಿರುತ್ತವೆ. ಕಂದ ವೃತ್ತಾದಿ ಪದ್ಯಗಳು ಕೂಡ ಬಹಳಮಟ್ಟಿಗೆ ಸುಲಭವೂ ಸರಳವೂ ಆದ ಶೈಲಿಯಲ್ಲಿಯೇ ಬರೆಯಲ್ಪಟ್ಟಿರುವವಾದರೂ ಹಲ ಕೆಲವು ಕಡೆಗೆ ಹಳೆಗನ್ನಡ ಪ್ರತ್ಯಯಗಳಿಂದ, ಅಲ್ಪಸ್ವಲ್ಪ ಹಳೆಗನ್ನಡ ಪ್ರಯೋ ಗಗಳಿಂದ ಕೊಂಚಮಟ್ಟಿಗೆ ಕಠಿಣವಾಗಿ ತೋರಬಹುದು. ಆದರೆ ಇಂಥ ಸಂದರ್ಭಗಳು ತೀರ ಕಡಿಮೆಯಾಗಿರುವವೆಂದು ಓದುಗರಿಗೆ ಮನದಟ್ಟಾಗ ದಿರದು. ಹೀಗೆ ಇಡೀ ನಾಟಕವು ಕರ್ನಾಟಕದ ಈ ಭಾಗದಲ್ಲಿ ಪ್ರಚಾರದಲ್ಲಿದ್ದ " ನಾಡನುಡಿ " ( Popular Language ) ಅಂದರೆ ಎಲ್ಲರಿಗೂ ತಿಳಿ ಯುವ ಭಾಷೆಯಲ್ಲಿಯೇ ಬರೆಯಲ್ಪಟ್ಟಿರುವದೆಂಬುದು ಸ್ಪಷ್ಟವಾಗಿದೆ. ಅರವ ತ್ತೈದು ವರ್ಷಗಳಾಚೆಗೆ ಅಂದರೆ ಅಖಂಡ ಕರ್ನಾಟಕದ ಕನವರಿಕೆಯು ಕೂಡ ಕನಸು ಮನಸಿನಲ್ಲಿ ಹೊಳೆಯದೆ, ಒಂದು ಭಾಗದ ಕನ್ನಡಿಗರ ಪರಿಚಯವು ಬೇರೊಂದು ಭಾಗದವರಿಗಿಲ್ಲದೆ, ಎಲ್ಲರೂ ತಮ್ಮಷ್ಟಕ್ಕೆ ತಾವೇ ಎಂಬ ತಿಳವಳಿಕೆ ಯಲ್ಲಿ ಮುಳುಗಿದಾಗ್ಗೆ ಈ ನಾಟಕವು ಬರೆಯಲ್ಪಟ್ಟಿರುವುದನ್ನು ಲಕ್ಷಕ್ಕೆ ತಂದು ನೋಡಿದರೆ ಇದರ ಭಾಷೆಯೊಳಗಿನ " ಪ್ರಾದೇಶಿಕ ವೈಲಕ್ಷಣ್ಯ " ವೆಂಬುದು ಅಪರಿಹಾರ್ಯವೆಂದು ಯಾರಿಗಾದರೂ ತೋರದಿರದು. ಇಂಥ "ವೈಲಕ್ಷಣ್ಯ" ಗಳು ಯಾವ ಭಾಷೆಯಲ್ಲಾದರೂ ಯಾವ ಕಾಲದಲ್ಲಾದರೂ ಯಾವ ದೇಶದ ಲ್ಲಾದರೂ ಇರತಕ್ಕವೇ. "ಇಡೀ ಕನ್ನಡನಾಡು ಒಂದೇ ಪುರಾತನ ಸಂಸ್ಕೃತಿ ಯಿಂದ ನಿಬದ್ಧವಾದದ್ದು; ಇಡೀ ಕನ್ನಡ ಜನಾಂಗದ ಭಾಷೆಯು ಒಂದೇ; ಪುರಾತನ ಕನ್ನಡ ಗ್ರಂಥಕಾರರೆಲ್ಲರೂ ಕನ್ನಡಿಗರಾದ ನಮಗೆಲ್ಲರಿಗೂ ಪೂಜ್ಯ ರಾದ ಪೂರ್ವಜರು; ಅವರ ಗ್ರಂಥಗಳೆಲ್ಲ ಎಲ್ಲ ಭಾಗಗಳ ಕನ್ನಡಿಗರಿಗೆ ಅವರು ಕಾದಿಟ್ಟ ಬೆಲೆಯುಳ್ಳ ನಿಧಿ " ಎಂಬಿವೇ ಮೊದಲಾದ ಏಕತ್ವದ ವಿಚಾರಗಳು ಈಗ ೨೦ ವರ್ಷಗಳಿಂದಲೂ ಅಖಂಡವಾಗಿ ಅವಿರತವಾಗಿ ನಾಡಿನಲ್ಲೆಲ್ಲ ಪ್ರಸಾರ ಹೊಂದುತ್ತ ನಡೆದಿದ್ದರೂ ನಮ್ಮ ಉಡಿಗೆ ತೊಡಿಗೆ ನಡೆನುಡಿಗಳೊಳ ಗಿನ ಪ್ರಾದೇಶಿಕ ವೈಲಕ್ಷಣ್ಯಗಳು ಕಡಿಮೆಯಾಗಿರುವದಿಲ್ಲ; ನೂರಾರು ವರ್ಷ

ಗಳಾದರೂ ಕಡಿಮೆಯಾಗಲಾರವು. ವೈಯಕ್ತಿಕ ಹಾಗು ಪ್ರಾದೇಶಿಕ ವೈಲಕ್ಷಣ್ಯಗಳು ಎಲ್ಲಿಯಾದರೂ, ಎಲ್ಲಿ ನೋಡಿದರೂ ನಿಸರ್ಗಸಿದ್ಧವಾಗಿವೆ. ಪರಸ್ಪರ ಬಳಿಕೆಯು ಬೆಳೆದಂತೆ ಈ ವೈಲಕ್ಷಣ್ಯಗಳು ಎಲ್ಲಕಡೆಗೆ ಮೈಯ್ಯುಂಡು ಹೋಗುವದರಿಂದ ಮೊದಲು ಅವುಗಳಲ್ಲಿ ಕಂಡುಬರುತ್ತಿದ್ದ "ವೈಚಿತ್ರ್ಯ ದೋಷ" ವೆಂಬ ತಿರಸ್ಕಾರವು ಕಡಿಮೆಯಾಗಿ ಒಂದು ಬಗೆಯ ಆತ್ಮೀಯ ಭಾವನೆಯ ಸೌಹಾರ್ದವೂ ಸಹಾನುಭೂತಿಯೂ ಪರಸ್ಪರರಲ್ಲಿ ಬೆಳೆಯುತ್ತ ಹೋಗುವವು. ಅಂದರೆ ಈ ಪ್ರಾದೇಶಿಕ ವೈಲಕ್ಷಣ್ಯಗಳಲ್ಲಿ ಮೊದಮೊದಲು ಗೋಚರವಾಗುತ್ತಿದ್ದ "ತೀವ್ರ" ತೆಯು ಮಾತ್ರ ಲೋಪವಾಗುವದಲ್ಲದೆ "ವೈಲಕ್ಷಣ್ಯಗಳು" ಇಲ್ಲದಂತಾಗುವದೇ ಇಲ್ಲ. ಮುಂದೆ ಈ "ವೈಲಕ್ಷಣ್ಯ" ಗಳ 'ಪೃಥಕ್‌ಭಾವ' ಗಳೆಲ್ಲವೂ ನಮ್ಮ 'ನಾಡನುಡಿ' ಯಲ್ಲಿಯೇ "ಏಕಸ್ಥ" ವಾಗಿರುವವೆಂಬ ಭಾವನೆಯ ಪ್ರಾದುರ್ಭಾವವಾದೊಡನೆಯೇ ಈ ವೈಲಕ್ಷಣ್ಯಗಳ ವಿಚಾರವೇ ಹಾರಿಹೋಗುತ್ತದೆ. "ಭೂತಗಳ ಪೃಥಕ್ ಭಾವದಲ್ಲಿ ಏಕತ್ವದ ನಿದರ್ಶನವಾದೊಡನೆಯೇ ಬ್ರಹ್ಮ ಪ್ರಾಪ್ತಿಯಾಗುವದು" ಎಂದು ಶ್ರೀಮದ್ಭಗವದ್ಗೀತೆಯ ೧೩ನೇ ಅಧ್ಯಾಯದ ೩೦ನೇ ಶ್ಲೋಕದಲ್ಲಿ ಹೇಳಿರುವ ವೇದಾಂತ ತತ್ವದ ರಹಸ್ಯವು ಇಲ್ಲಿಯೂ ಯಥಾರ್ಥವಾಗಿ ಅನ್ವಯಿಸುತ್ತದೆ. ಅನೇಕ ಬಗೆಯ ವಿವಿಧತ್ವಗಳಿಂದ ತುಂಬಿದ ಜನಾಂಗದಲ್ಲಿ ಅಥವಾ ರಾಷ್ಟ್ರದಲ್ಲಿ ಆ ಜನಾಂಗದ ಅಥವಾ ರಾಷ್ಟ್ರದ "ಏಕತ್ವ" ಭಾವನೆಯ ಪ್ರಾದುರ್ಭಾವವಾದೊಡನೆಯೇ ಆ ವಿವಿಧತ್ವಗಳಿಂದುಟಾಗುವ "ಪೃಥಕ್ತ್ವ" ದ ಕಲ್ಪನೆಯೇ ಅಳಿದು ಹೋಗುವಂತೆ ಏಕಭಾಷೆಯ ಏಕತ್ವದ ಮುಂದೆ ಈ ವೈಲಕ್ಷಣ್ಯಗಳ ವಿಚಾರವೇ ಇದ್ದೂ ಇಲ್ಲದಂತಾಗುತ್ತದೆಂಬುದು ಸಿದ್ಧಾಂತವಾದ ಮಾತು. ಆದದರಿಂದ ಈ ಪ್ರಾದೇಶಿಕ ವೈಲಕ್ಷಣ್ಯಗಳ ವಿಚಾರಕ್ಕೆ ವಿಶೇಷ ಗಮನ ಕೊಡತಕ್ಕ ಕಾರಣವೇ ಇಲ್ಲ.

ಇದೆಲ್ಲ ತಾತ್ವಿಕ ವಿವೇಚನೆಯ ಮಟ್ಟಿಗೆ ಚಂದಕಾಣಿಸುವ ಮಾತು; ವ್ಯವಹಾರದಲ್ಲಿ ಇದು ಪ್ರಯೋಜನಕಾರಿಯಾಗಲಾರದೆಂದೂ ಆಕ್ಷೇಪಿಸುವಂತಿಲ್ಲ. ಪ್ರತ್ಯಕ್ಷ ಅನುಭವದಿಂದಲೂ ಈ ಮಾತು ಸಿದ್ಧವಾಗಿ ಹೋಗಿದೆ. ಮೈಸೂರಿನತ್ತಕಡೆಯವರೆಲ್ಲ ಧಾರವಾಡದ ಕಡೆಯ ಭಾಷೆಗೆ "ಏನೋ, ಸಾರ್, ನಮಗೆ ನಿಮ್ಮ ಸೀಮೆ ಭಾಷೇನೇ ತೀಳೀದು" ಎಂದು ಸಾಮಾನ್ಯವಾಗಿ

ಥಕ್ಕನೇ ಹೇಳಿಬಿಡುವದೂ ಉಂಟು; ಅದಕ್ಕೆ ನಾವು "ಸರಿ" ಎಂದು ತಲೆ ದೂಗುವದೂ ಉಂಟು. ಆದರೆ ಈ ಸಾಮಾನ್ಯ ತಿಳುವಳಿಕೆಗೆ ವಿರುದ್ಧವಾದ ಪ್ರತ್ಯಕ್ಷ ಅನುಭವವೇ ನನಗೆ ಬಂದಿದೆ. ೧೯೨೫ ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಪ್ರಶ್ನೆಯನ್ನು ಮೈಸೂರಿನ ಮಹಾಜನರೊಡನೆ ಚರ್ಚಿಸುವ ಉದ್ದೇಶದಿಂದ ವಿಜಾಪುರದ ಶ್ರೀ. ಕೌಜಲಗಿ ಶ್ರೀನಿವಾಸರಾಯರೂ ಧಾರವಾಡದ ಶ್ರೀ. ಆಲೂರ ವೆಂಕಟರಾಯರೂ ಮೈಸೂರಿಗೆ ಹೋದಾಗ ನನಗೂ ಅವರ ಜೊತೆಗೆ ಹೋಗುವ ಸಂದರ್ಭ ಒದಗಿತು. ನಾವು ಹೋದಾಗ್ಗೆ ಮೈಸೂರಿನ ಪ್ರಜಾಪ್ರತಿನಿಧಿ ಸಭೆಯ ಅಧಿವೇಶನಗಳು ನಡೆದಿದ್ದವು. ಈ ಸಭೆಯ ಪ್ರಮುಖರನೇಕರು ಕೂಡಿ ಮೈಸೂರಿನ ರಾಜ್ಯಾಂಗದ ದೊಡ್ಡ ದೊಡ್ಡ ಅಧಿಕಾರಿಗಳಿಗೂ ಬೇರೆ ಪ್ರತಿಷ್ಠಿತ ಜನರಿಗೂ ಒಂದು ಸಂತೋಷಕೂಟವನ್ನೇರ್ಪಡಿಸಿದ್ದರು. ಅದಕ್ಕೆ ನಮ್ಮನ್ನೂ ಕರೆದಿದ್ದರು. ಸಂತೋಷಕೂಟದ ಮುಖ್ಯಾಂಗಗಳಾದ ಗಾನಪಾನ, ಗಂಧಾನುಲೇಪನ, ಕಾಫೀ ಪಾನಾದಿಗಳಾದ ಬಳಿಕ ತಾಂಬೂಲ ಸೇವನೆ ನಡೆದಾಗ್ಗೆ ನಮ್ಮ ಧಾರವಾಡದ ಕಡೆಯ ಒಂದೆರಡು ವಿನೋದ ನುಡಿಗಳನ್ನು ಕೇಳಿ ಉಲ್ಲಸಿತರಾಗಬೇಕೆಂದು ಅಲ್ಲಿ ಕೂಡಿದ ಕೆಲವರಿಗೆ ಅಂತಃಸ್ಫೂರ್ತಿಯಾಯಿತು. ಅವರು ಶ್ರೀ. ಆಲೂರ ವೆಂಕಟರಾಯರಿಗೆ ಗಂಟು ಬಿದ್ದರು; ಅವರು ನನ್ನನ್ನು ಮುಂದೆ ಚಾಚಿ ತಾವು ಓರೆಗಾದರು. ಆ ಮಹಾಜನರಿಗೆಲ್ಲ ನಮ್ಮಿತ್ತ ಕಡೆಯ ವಿನೋದವನ್ನುಣಿಸಿ ತಣಿಸುವ ಭಾರವು ನನ್ನ ಮೇಲೆ ಬಿತ್ತು. ನಾನಾದರೂ ಪ್ರಸಂಗಕ್ಕೆ ತಕ್ಕ ನಾಲ್ಕು ಮಾತುಗಳನ್ನು ಮೊದಲು ಹೇಳಿ, ಇದೇ ಶಾಕುಂತಲದೊಳಗಿನ "ಪದವ ರಚಿಸುತಿಹಳು" "ಎಲ್ಲಿ ಪೋಗಲಿ ನಾನಿನ್ನಾ" ಮತ್ತು "ಆ ಮ್ಯಾಲೆ ಬಿಡುವೆ ಮನೋಹರ" ಈ ಮೂರು ಪದಗಳನ್ನು ಹ್ಯಾಗೋ ಅಂದು ತೋರಿಸಿ ಅವುಗಳೊಳಗಿನ ಭಾವಗಳನ್ನು ನನಗೆ ತಿಳಿದ ಮಟ್ಟಿಗೆ ವಿವರಿಸಿ, ಮೈಸೂರಿನ ಕನ್ನಡಕ್ಕೂ ಧಾರವಾಡದ ಕನ್ನಡಕ್ಕೂ ಇರುವ ವ್ಯತ್ಯಾಸವನ್ನು ತಾವೆಲ್ಲರೂ ಮನ್ನಿಸಬೇಕೆಂದು ಬಿನ್ನಯಿಸಿದೆನು. ಈ ಮೂರೂ ಪದಗಳಲ್ಲಿ ಕಂಡುಬರುವ ಕವಿತ್ವ ಪ್ರತಿಭೆಯಿಂದ, ಭಾವ ಪ್ರದರ್ಶನದಿಂದ, ಪದಲಾಲಿತ್ಯದಿಂದ, ಭಾಷಾಸೌಷ್ಟವದಿಂದ ಅವರೆಲ್ಲರೂ ಬೆರಗಾಗಿ ಬೊಟ್ಟು ಕಚ್ಚಿದರು. ನಮ್ಮ "ಬಡಕವಿ" ಯನ್ನು ಬಹಳ ಪರಿಯಾಗಿ ಕೊಂಡಾಡಿದರು. ತುಂಗಭದ್ರೆಯ ಉತ್ತರಕ್ಕೆ ಕನ್ನಡ ಬಲ್ಲವರಿದ್ದಾರೆಯೋ ಎಂಬ ತಮ್ಮ ಸಂಶಯವು ನಿರರ್ಥಕವಾದದ್ದೂ ಅಹಂಭಾವ

ದ್ಯೋತಕವಾದದ್ದೂ ಆಗಿರುವದೆಂದು ಒಡನುಡಿದರು. ಒಂದೇ ಭಾಷೆಯೊಳ
ಗಿನ ಪ್ರಾಂತಿಕವೈಲಕ್ಷಣ್ಯಗಳೆಂಬ ಮಾತು ತಕ್ಕ ತಿಳುವಳಿಕೆಯುಂಟಾಗದ
ಮೂಲಕ ಹುಟ್ಟಿದ ಬದನೇಕಾಯಿಯ ಭೂತವೆಂಬದು ಇದರಿಂದ ಒಡೆದು
ಕಾಣುವದಿಲ್ಲವೇ?

ಸ್ವ. ಶೇಷಗಿರಿರಾಯರ ಪದ್ಯಗಳಲ್ಲಿ ಛಂದಃಶಾಸ್ತ್ರದ ದೋಷಗಳಿರಬಹುದು.
ಶಬ್ದಮಣಿದರ್ಪಣ ಶಬ್ದಾನುಶಾಸನ ಸೂತ್ರಗಳ ಒರೆಗಲ್ಲಿಗೆ ಹಚ್ಚಿದಲ್ಲಿ ವ್ಯಾಕ
ರಣ ದೋಷಗಳೂ ಹಲ ಕೆಲವು ಹೊರಟರೂ ಹೊರಡಬಹುದು. ಸಾಹಿತಿಗ
ಳೆಂಬ ಶಾಸ್ತ್ರಾಭ್ಯಾಸ ನಿಪುಣರಿಗೆ ಇಂಥವು ಸರಿ ಬರಲಾರವೆಂಬುದು ಕಟ್ಟಿಟ್ಟ
ಮಾತೇ ಸರಿ. ಆದರೆ ಸ್ವ. ಶೇಷಗಿರಿರಾಯರು ಇದನ್ನು ಬರೆದ ಕಾಲ, ಅವರು
ಬೆಳೆದ ಪರಿಸ್ಥಿತಿ, ಅವರು ಸಂಪಾದಿಸಿದ ಶಿಕ್ಷಣ, ಮೊದಲಾದ ಆನುಷಂಗಿಕ
ಸಂಗತಿಗಳನ್ನೆಲ್ಲ ಮನಸ್ಸಿಗೆ ತಂದು ನೋಡಿದರೆ ಇಂಥ ದೋಷಗಳನ್ನೆಲ್ಲ
"ಆರ್ಷಪ್ರಯೋಗ" ವೆಂಬ ಕಾವ್ಯ ಲಕ್ಷಣದಲ್ಲಿ ಸೇರಿಸುವದೇ ಯೋಗ್ಯವಾಗು
ವದು. ಶೇಷಗಿರಿರಾಯರು ಪಂಡಿತರಿದ್ದಿದ್ದಿಲ್ಲ; ಪದವೀಧರರಿದ್ದಿದ್ದಿಲ್ಲ; ಭಾಷಾ
ಶಾಸ್ತ್ರದಲ್ಲಿ ಪ್ರಾವೀಣ್ಯ ಪಡೆದವರಿದ್ದಿದ್ದಿಲ್ಲ. ಲಕ್ಷಣ ಗ್ರಂಥಗಳನ್ನು ಮುಂದಿಟ್ಟು
ಕೊಂಡು ಅವುಗಳ ಅನುಸಂಧಾನದಿಂದ ನಾಟಕವನ್ನು ಬರೆಯಬೇಕೆಂಬ
ಹವ್ಯಾಸಕ್ಕೆ ಬಿದ್ದವರಲ್ಲ. ಹುಟ್ಟುಕವಿಗಳು; ಕಾವ್ಯದ ಮರ್ಮವನ್ನರಿತವರು,
ರಸಿಕರು. ರಸಪರಿಪುಷ್ಟವಾದ ಕಾವ್ಯವು ಹೇಗಿರಬೇಕೆಂಬದನ್ನು ಮನದಂದು
ನಾಟಕ ಬರೆದವರು. ಈ ಬಗ್ಗೆ ಅವರ ಸ್ಪಷ್ಟ ಅಭಿಪ್ರಾಯಗಳು ಸೂಚನೆಯ
ಪದ್ಯಗಳೊಳಗಿನ ೪ನೇ ೫ನೇ ಶ್ಲೋಕಗಳಿಂದ ಸ್ಪಷ್ಟವಾಗಿ ತಿಳಿಯುವಂತಿವೆ.
ವಿದ್ವಾಂಸನಾದ ಕವಿಯ ಕೃತಿಗೂ ಸಾಮಾನ್ಯ ಕವಿ ( Born Poet ) ಯು
ಕಟ್ಟಿದ ಕವನಕ್ಕೂ ಇರುವ ವ್ಯತ್ಯಾಸವನ್ನು ೮ನೇ ಪದ್ಯದಲ್ಲಿ ಸಲಕ್ಷಣವಾಗಿ
ಹೇಳಿ ಮುಂದೆ ೯ನೇ ಪದ್ಯದಲ್ಲಿಯೇ "ಬಡಕವಿಗೆ ಈ ಕುರೂಪ ಕೃತಿಗನ್ನಿಕೆ
ಪುಟ್ಟಿದಳ್ ಜಾಣರೊಳ್ ಅಡಿಗಳ ದಾಸಿಯಾಗಿ ಬದುಕಲ್ ಕಳುಹಿರ್ಪೆನು"
ಎಂದು ಅತೀವ ವಿನಯದಿಂದ ಬೇಡಿಕೊಂಡಿರುವದಂತೂ ತಾವು ಪಾಂಡಿತ್ಯ
ಪ್ರಭಾವದಿಂದ ಕವಿತ್ವಕ್ಕೆ ಒಗ್ಗಿದ್ದವರಲ್ಲವೆಂಬುದನ್ನು ಸ್ಪಷ್ಟವಾಗಿ ಹೇಳಿ
ದಂತೆಯೇ ಇದೆ. ೩ನೆಯ ಪದ್ಯದಲ್ಲಿಯೂ ಇದೇ ಭಾವವನ್ನು "ಗೂಢವಾಗಿ"
ಹೇಳುವ ತೆರದಿಂದ "**ಕವಿಜನರೆಲ್ಲ ಎನ್ನಯ ಕೃತ್ಯವನು ವಿವಿಧ ಜನರ್ಕಳಿಂ**

ವಿವಿಧ ಭಾಷೆಯೊಳಂತರಿಸಿರ್ಪವಂಗಳಂ **ಸವಿಯೊಳು** ಒರೆಹಚ್ಚಿ ನೋಡ ಬಹುದು" ಎಂದು ಹೇಳಿದ್ದಾರೆ. ಈ ಸೂಚನೆಯನ್ನನುಲಕ್ಷಿಸಿ ಈ ಕೃತಿ ಯನ್ನು ಪರೀಕ್ಷಿಸಿದರೆ ಸರಸ್ವತಿಯ ಸಂಸ್ಕೃತ ವಿಹಾರೋದ್ಯಾನದಲ್ಲಿ ನಿಸರ್ಗ ಮನೋಹರವಾಗಿ ಬೆಳೆದ ಕಾಲಿದಾಸನ ಶಾಕುಂತಲವೆಂಬ "ಉಗು ರೆಳೆ ಗೆಂಪುವಣ್ಣೊಡೆದ ದ್ರಾಕ್ಷದ ಗೊಂಚಲು" ಗಳಿಂದ ಪರಿಶುದ್ಧವಾದ ಅಭಿನವರಸವನ್ನು ತೆಗೆದು ಅದರೊಳಗೆ ತಮ್ಮ ಸವಿನುಡಿಯ ಸಕ್ಕರೆಯ ಮಸಾಲೆಯನ್ನು ಬೆರಿಸಿ ಅತ್ಯಂತ ಜಾಣ್ಮೆಯಿಂದ ಒಳ್ಳೇ ರುಚಿಕಟ್ಟಾದ ಪಾಕ ವನ್ನು ಮಾಡಿ ಕನ್ನಡ ಜನಾಂಗಕ್ಕೆ ಸ್ವ. ಶೇಷಗಿರಿರಾಯರು ಬಡಿಸಿರುವರೆಂದು ಹೇಳಲು ಯಾವ ಅಭ್ಯಂತರವೂ ಕಂಡುಬರುವದಿಲ್ಲ.

ಸ್ವ. ಶೇಷಗಿರಿರಾಯರು ನಾಟಕವನ್ನು ಬರೆದರು; ಮುದ್ರಿಸಿದರು; ಕರ್ನಾ ಟಕದ ಕಾವ್ಯಕಲಾಭಿಜ್ಞ ಜನತೆಯಲ್ಲಿ ಅದಕ್ಕೆ ಗೌರವ ದೊರೆಯಿತು; ಅದನ್ನು ಅವರು ಓದಿ ಸಂತೋಷಬಟ್ಟರು. ಹತ್ತೆಂಟು ವರ್ಷಗಳ ನಂತರ ಕೈ. ಅಣ್ಣಾ ಕಿರ್ಲೋಸ್ಕರರು ಅದನ್ನೇ ಮುಂದಿಟ್ಟುಕೊಂಡು ಅದೇ ಪದ್ಧತಿ ಯಿಂದ ಮರಾಠಿಯಲ್ಲಿ ನಾಟಕವನ್ನು ಬರೆದು ಅದಕ್ಕೆ "ಸಂಗೀತ ಶಾಕುಂತಲ"ವೆಂದು ಹೆಸರಿಟ್ಟರು. ವರ್ಷಾರು ತಿಂಗಳುಗಳಲ್ಲಿಯೇ ಮಹಾರಾ ಷ್ಟ್ರದ ಸುಶಿಕ್ಷಿತರು ಅದರ ಪ್ರಯೋಗಮಾಡಿ ತೋರಿಸಿದರು. ಅದರ ಕೀರ್ತಿಯು ಹೆಚ್ಚಾಗಿ ಪ್ರಸಾರಗೊಂಡಿತು. "ಕಿರ್ಲೋಸ್ಕರ ಸಂಗೀತನಾಟಕ ಮಂಡಳಿ"ಯು ಉದಯವಾಗಿ ಮಹಾರಾಷ್ಟ್ರದಲ್ಲಿ ಸಂಗಿತನಾಟಕಗಳ ಕೋಲಾ ಹಲವನ್ನೆಬ್ಬಿಸಿತು. ಪ್ರತಿವೊಂದು ನಾಟಕ ಕಂಪನಿಯೂ ಶಾಕುಂತಲದ ಪ್ರಯೋಗಮಾಡಿ ತೋರಿಸಹತ್ತಿದ್ದರಿಂದ ಅದು ಮಹಾರಾಷ್ಟ್ರದಲ್ಲಿ ಅತ್ಯಂತ ಲೋಕಪ್ರಿಯವಾಗಿ ಹತ್ತಿಪ್ಪತ್ತು ಆವೃತ್ತಿಗಳು ಮುದ್ರಿತವಾಗಿ ಹೋದವು. ಇಂದಿಗೂ ಮಹಾರಾಷ್ಟ್ರದ ಪ್ರಸಿದ್ಧ ಕಂಪನಿಗಳು ನಡುನಡುವೆ ಶಾಕುಂತಲದ ಪ್ರಯೋಗವನ್ನು ಮಾಡೇ ಮಾಡುತ್ತವೆ; ಜನರು ನೋಡೇನೋಡುತ್ತಾರೆ. ಆದರೆ ಚುರಮುರಿಯವರ ಶಾಕುಂತಲವು ಹುಟ್ಟಿದ ೩೫ ವರ್ಷಗಳಲ್ಲಿ ಅದರ ಪ್ರಯೋಗವಾಗುವದಕ್ಕೆ ಅನುಕೂಲವಾಗಲಿಲ್ಲ. ಆಗಿನ ಕಾಲಕ್ಕೆ ನಾಟಕ ಮಾಡುವದೆಂದರೆ ಅತ್ಯಂತ ಹೀನತರದ ಕೆಲಸವೆಂಬ ತಿಳಿವಳಿಕೆಯು ಎಲ್ಲ ಕಡೆಗೂ ಹಬ್ಬಿಕೊಂಡಿದ್ದದ್ದೇ ಇದಕ್ಕೆ ಕಾರಣವಾಗಿರಬಹುದು. ೩೫ ವರ್ಷಗಳ

ನಂತರ ಧಾರವಾಡದ ಕೆಲವು ಜನ ನಾಟ್ಯಕಲಾಪ್ರಿಯ ಕನ್ನಡ ಸುಶಿಕ್ಷಿತರು ಇಲ್ಲಿ ನಡೆದ ಮಹಾರಾಷ್ಟ್ರ ನಾಟಕಗಳ ಉತ್ಕರ್ಷವನ್ನೂ ಕನ್ನಡ ನಾಟಕಗಳ ಅಪಕರ್ಷವನ್ನೂ ಕಂಡು ಮನನೊಂದು ಮರಾಠೀ ಶಾಕುಂತಲಕ್ಕೆ ಮೂಲಭೂತವಾದ ಕನ್ನಡ ಶಾಕುಂತಲವು ಪ್ರಯೋಗ ಭಾಗ್ಯವನ್ನು ಕಾಣದಲ್ಲಾ ಎಂದು ಕನಿಕರಬಟ್ಟು "ಭರತಕಲೋತ್ತೇಜಕ ಸಂಗೀತ ಸಮಾಜ" ವೆಂಬ ಅಮೇಚೂರ ನಾಟಕಸಂಘವನ್ನು ಸ್ಥಾಪಿಸಿಕೊಂಡು ಚುರಮುರಿಯವರ ಶಾಕುಂತಲವನ್ನೇ ಮೊದಲನೆಯ ಪ್ರಯೋಗವಾಗಿ ಆರಿಸಿ, ಅದನ್ನು ಅಭ್ಯಾಸಮಾಡಹತ್ತಿದರು. ಕೆಲವು ದಿವಸಗಳ ನಂತರ ಮೊದಲಿನ ನಾಲ್ಕು ಅಂಕುಗಳ ಅಭ್ಯಾಸವಾದ ಬಳಿಕ ಸ್ವ. ಶೇಷಗೀರಿರಾಯರ ಕಕ್ಕನ ಮಕ್ಕಳಾದ ಸ್ವ. ಚುರಮುರಿ ಗುಂಡೇರಾಯರು ಸಮಾಜದವರ ತಾಲೀಮು ನೋಡಲಿಕ್ಕೆ ಬಂದು ಬಹಳ ಸಂತೋಷಬಟ್ಟು, ಸ್ವ. ಶೇಷಗಿರಿರಾಯರ ಅಭಿಮಾನಿಗಳಾಗಿದ್ದ ಶ್ರೀ. ರೊದ್ದ ಶ್ರೀನಿವಾಸರಾಯರೇ ಮೊದಲಾದ ಮಹನೀಯರನ್ನು ಮತ್ತೊಮ್ಮೆ ತಾಲೀಮು ನೋಡಲಿಕ್ಕೆ ಕರಕೊಂಡು ಬಂದರು. ಧಾರವಾಡದ ಈ ಪ್ರಮುಖ ಜನರ ಅನುಮತಿಯಿಂದ ೧೯೦೫ನೇ ಇಸ್ವಿಯ ಫೆಬರವರೀತಿಂಗಳಲ್ಲಿ ಈ ಶಾಕುಂತಲದ ಮೊದಲಿನ ನಾಲ್ಕು ಅಂಕುಗಳ ಪ್ರಯೋಗವನ್ನು ಇಲ್ಲಿಯ ವಿಕ್ಟೋರಿಯಾ ಥಿಯೇಟರಿನಲ್ಲಿ ಮಾಡಿ ತೋರಿಸಿದರು. ಧಾರವಾಡದ ಕನ್ನಡ ಪ್ರಮುಖರೊಳಗಿನ ಸ್ವ. ವೆಂಕಟ ರಂಗೋ ಕಟ್ಟಿಯವರೇ ಮೊದಲಾದ ಅನೇಕ ಜನ ಮಹನೀಯರು ಬಂದು ನಾಟಕವನ್ನುನೋಡಿ ಸಂತೋಷಬಟ್ಟು ಸಮಾಜವನ್ನು ಹಾಡಿಹರಿಸಿದರು. ಗುಂಡೇರಾಯರಂತೂ ೨೦ ವರ್ಷಗಳ ಹಿಂದೆ ಸ್ವರ್ಗಸ್ಥರಾದ ತಮ್ಮ ಅಣ್ಣಂದಿರ ಕೃತಿಯನ್ನು ರಂಗಭೂಮಿಯ ಮೇಲೆ ತಂದು, ಭರತಕಲೋತ್ತೇಜಕ ಸಂಗೀತ ಸಮಾಜದವರು ತಮಗೆ ಅವರ ಪ್ರತ್ಯಕ್ಷ ದರ್ಶನವನ್ನೇ ಮಾಡಿಸಿದ ಹಾಗಾಯಿತೆಂದು ಸಾರ್ವಜನಿಕರೀತಿಯಿಂದ ಸಮಾಜವನ್ನಭಿನಂದಿಸಿ ಬಹುಮಾನವನ್ನೂ ಕೊಟ್ಟರು. ಇದೇ ಸಂದರ್ಭದಲ್ಲಿ ಶಾಕುಂತಲದ ಪುನರ್ಮುದ್ರಣದ ಮಾತು ಹೊರಟಾಗಲೇ ನನಗೆ ಈ "ಪರಿಚಯ" ದ ಕೆಲಸವನ್ನು ಅವರು ಒಪ್ಪಿಸಿದ್ದು, ಮುಂದೆ ನಾಲ್ಕಾರು ತಿಂಗಳುಗಳಲ್ಲಿ ಮುಂದಿನ ಮೂರೂ ಅಂಕುಗಳ ಪ್ರಯೋಗವು ಮಾಡಲಾಯಿತು. ಇಡೀ ನಾಟಕವು ಬಹಳ ದೊಡ್ಡದೂ ಅನೇಕ ದೊಡ್ಡ ದೊಡ್ಡ ಪದ್ಯಗಳನ್ನುಳ್ಳದ್ದೂ ಆದ ಮೂಲಕ ಒಂದೇ

ರಾತ್ರಿಯಲ್ಲಿ ಇದರ ಪ್ರಯೋಗವಾಗುವದು ಅಸಾಧ್ಯವೆಂದು ಸಮಾಜ ದವರು ಮನದಂದು ಮೊದಲಿನ ೪ ಅಂಕುಗಳನ್ನು ಒಂದು ರಾತ್ರಿ ಹಾಗು ೪ನೇ ಅಂಕಿನಿಂದ ಮುಂದಿನ ಭಾಗವನ್ನು ಮತ್ತೊಂದು ರಾತ್ರಿ, ಹೀಗೆ ಪ್ರಯೋಗ ಮಾಡಿ ಇದೇ ಸಾಂಪ್ರದಾಯವನ್ನೇ ಇಟ್ಟುಕೊಂಡಿದ್ದರು. ಈ ಇಡೀ ಪ್ರಯೋಗಗಳಿಗೆ ಧಾರವಾಡದ ಆಗಿನ ಸುಶಿಕ್ಷಿತ ಸಮಾಜದಿಂದ ಚನ್ನಾ ಗಿಯೇ ಪ್ರೋತ್ಸಾಹನ ದೊರೆಯಿತು. ಎಷ್ಟೋ ಜನ ಹೊಸ ಸುಶಿಕ್ಷಿತ ತರು ಣರು ಮನೆಯ ಹಿರಿಯರ ಅನುಮತಿಯಿಂದ ಸಮಾಜವನ್ನು ಸೇರಿಕೊಂಡು ಅದರ ಕಾರ್ಯಕ್ಷೇತ್ರವನ್ನು ಬೆಳಿಸಿ ಹೊಸ ಹೊಸ ನಾಟಕಗಳನ್ನು ಬರಿಸಿ ಪ್ರಯೋಗ ಮಾಡಹತ್ತಿದರು. ಆದರೂ ಮೂಲ ಶಾಕುಂತಲವನ್ನು ಅವರು ಬಿಡಲಿಲ್ಲ. ಈ ಸಮಾಜದಲ್ಲಿ ರೇಲ್ವೆ ಹೆಡ್ ಆಫೀಸಿನ ಕೆಲಸಗಾರರನೇಕರಿದ್ದರು. ೧೯೦೯ ರಲ್ಲಿ ಈ ಹೆಡ್ಡಾಫೀಸುಗಳು ಮದ್ರಾಸಕ್ಕೆ ಹೋದುದರಿಂದ ಸಮಾಜ ದೊಳಗಿನ ನುರಿತ ನಟರನೇಕರು ಮದ್ರಾಸಕ್ಕೆ ಹೋಗಬೇಕಾಗಿ ಸಮಾಜವು ಮುರಕಳಿಗೆ ಬಂದಿತು. ಆದರೂ ಇಲ್ಲಿಯ ಶುಕ್ರವಾರ ಪೇಟೆಯ ಕೆಲವು ಜನ ನಾಟ್ಯಕಲಾಪ್ರಿಯ ಸುಶಿಕ್ಷಿತರು ಅದನ್ನು ಮುಂದೆ ಸಾಗಿಸುವ ಸಾಹಸವನ್ನು ಮಾಡಿದರು. ಅಂತೂ ೧೯೦೫ ರಿಂದ ೧೯೧೩ ರ ವರೆಗಿನ ೮ ವರ್ಷಗಳ ಅವಧಿ ಯಲ್ಲಿ ಈ ಶಾಕುಂತಲದ ಹತ್ತಿಪ್ಪತ್ತು ಪ್ರಯೋಗಳು ಇಲ್ಲಿ ಆದವು. ಕೆಲಸಗಾರರ ಅನುಕೂಲತೆ ನೋಡಿಕೊಂಡು ಹುಬ್ಬಳ್ಳಿ ಗದಗಿನಲ್ಲಿಯೂ ಈ ಸಮಾಜದವರು ತಮ್ಮ ಪ್ರಯೋಗಗಳನ್ನು ಮಾಡಿದರು. ಆದರೆ ಹೆಡ್ ಆಫೀಸಿನಲ್ಲಿ ಕೆಲಸಕ್ಕೆ ತೊಡಗಿದವರ ತೊಂದರೆಯ ಮೂಲಕ ಕರ್ನಾಟಕದ ಬೇರೆ ಪಟ್ಟಣಗಳಿಗೆ ಹೋಗಲು ಸಮಾಜಕ್ಕೆ ಅವಕಾಶ ದೊರೆಯದೆ ಇತರ ಕಡೆಗೆ ಇದರ ಪ್ರಯೋ ಗಗಳು ಸಮಾಜದವರಿಂದಾಗಲಿಕ್ಕೆ ಅನುಕೂಲ ಒದಗಲಿಲ್ಲ. ಈ ಸಮಾಜ ದೊಳಗಿನ ಅನೇಕ ಜನ ಕಾರ್ಯಕರ್ತರು ಇನ್ನೂ ಬದುಕಿದ್ದಾರೆ. ಇಂಥವ ರಲ್ಲಿ ನಾನೂ ಒಬ್ಬನು.

ಧಾರವಾಡದಲ್ಲಿ ಈ ಭರತಕಲೋತ್ತೇಜಕ ಸಂಗೀತಸಮಾಜವು ಹುಟ್ಟುವ ನಾಲ್ಕಾರು ವರ್ಷ ಮೊದಲು ಬಾದಾಮಿಯ ಕೆಲವು ಜನ ಸಂಗೀತ ಜ್ಞರು ಅಲ್ಲಿ ವಕೀಲರಾಗಿದ್ದ ಶ್ರೀ. ಮುಗಳೀ ಶ್ರೀನಿವಾಸರಾಯರೇ ಮೊದಲಾದ ವರ ಪ್ರೇರಣೆಯಿಂದ ಈ ಶಾಕುಂತಲವನ್ನು ಪ್ರಯೋಗಿಸಿದ್ದೂ ಉಂಟು. ಈ ನಾಟ್ಯಸಂಘದವರು ವಿಜಾಪುರ ಬಾಗಲಕೋಟೆಗಳಲ್ಲಿಯೂ ಇದರ ಪ್ರಯೋಗ

ವನ್ನು ಮಾಡಿ ಲೋಕಾದರವನ್ನು ಸಂಪಾದಿಸಿದರು. ೧೮೯೯ ರ ಸುಮಾರಕ್ಕೆ ನಾನು ಬಾಗಲಕೋಟಿಗೆ ಹೋದಾಗ ಈ ಸಂಘದವರ ಶಾಕುಂತಲದ ಪ್ರಯೋಗವನ್ನು ನೋಡುವ ಪ್ರಸಂಗ ಒದಗಿತು. ಧಾರವಾಡದ ಭರತಕಲೋತ್ತೇಜಕ ಸಂಗೀತಸಮಾಜವು ಹುಟ್ಟುವದಕ್ಕೆ ನಾನು ಈ ಪ್ರಯೋಗವನ್ನು ನೋಡಿದ್ದೇ ಕಾರಣವೆಂದೂ ಹೇಳಬಹುದು.

ಇಲ್ಲಿಗೆ ಈ ಶಾಕುಂತಲದ ಪ್ರಯೋಗದ ಮಾತೇ ಸದ್ಯಕ್ಕಂತೂ ಮುಗಿದಂತಾಯಿತೆಂದು ಹೇಳಬೇಕಾಗಿದೆ. ಮರಾಠಿಯಲ್ಲಿ ಶಾಕುಂತಲದ ಪ್ರಯೋಗಗಳು ಇನ್ನೂ ಆಗುತ್ತಿರುವವೆಂಬುದು ಮೇಲೆ ಹೇಳಲ್ಪಟ್ಟಿದೆ. ಆದರೆ ಈ ಸಂದರ್ಭದಲ್ಲ ನಮ್ಮೀ ಉತ್ತರ ಕರ್ನಾಟಕವು "ಹುಲ್ಲು ಮಾರುವ ಪೇಟೆ" ಯಾಗಿದೆ. ಇದರಲ್ಲಿ "ಹೂವುಗಳ" ಮಾರಾಟಕ್ಕೆ ಅವಕಾಶವೆಲ್ಲಿಂದ ಬರಬೇಕು? ಈ ಶಾಕುಂತಲವು ಬಹುಶಃ ಶುದ್ಧ ಕರ್ನಾಟಕ ಗಾಯನಪದ್ಧತಿಯ ಪದಗಳಿಂದಲೇ ತುಂಬಿರುವದರಿಂದ ಇದನ್ನು ಪ್ರಯೋಗಿಸುವದು ಬಹಳ ಕಠಿಣವಾಗಿರುವದು. ನಮ್ಮಿತ್ತಕಡೆಯ ಸಾಮಾನ್ಯ ಸುಶಿಕ್ಷಿತ ಜನವರ್ಗದಲ್ಲಿಲ್ಲ ನಮ್ಮ ಮೊದಲಿನ ಕರ್ನಾಟಕಗಾಯನ ಪದ್ಧತಿಯು ಪೂರಾ ಕೊಕ್ಕ ಸ್ಥಾನಕ್ಕೆ ಬಿದ್ದು ಹೋಗಿದೆ. ೧೮೯೫ ರ ವರೆಗೆ ಇಲ್ಲಿ ಕರ್ನಾಟಕ ಸಂಗೀತ ಪದ್ಧತಿಯ ಹಾಡುಗಾರಿಕೆಯು ಕೇಳಲು ದೊರೆಯುತ್ತಿತ್ತು. ೧೮೯೦ ರಲ್ಲಿ ಕರ್ನಾಟಕ ವಿದ್ಯಾವರ್ಧಕ ಸಂಘದ ಸ್ಥಾಪನವಾಗಿ ಕರ್ನಾಟಕ ಸಂಸ್ಕೃತಿ ಸಂರಕ್ಷಣೆಯ ಉಪಕ್ರಮವಾದ ವರ್ಷಾರು ತಿಂಗಳುಗಳಲ್ಲಿ ಇಲ್ಲಿಯ ಆಗಿನ ಕಾಲದ ಪ್ರಮುಖ ವಕೀಲರಲ್ಲೊಬ್ಬರಾಗಿದ್ದ ಸ್ವ. ಘಾಟಕ ಗುರುನಾಥರಾಯರು ಕರ್ನಾಟಕ ಸಂಗೀತ ಶಾಲೆಯೊಂದನ್ನು ಇಲ್ಲಿ ಸ್ಥಾಪಿಸಿದ್ದರು. ತಂಜಾವರದ ಸುಪ್ರಸಿದ್ಧ ನಾರಾಯಣಸ್ವಾಮಿಯವರ ಶಿಷ್ಯರಾಗಿದ್ದ ಚಿಮ್ಮಲಗೀ ವೆಂಕಣ್ಣನವರೆಂಬ ಕರ್ನಾಟಕ ಸಂಗೀತ ವಿದ್ಯಾವಿಶಾರದರೊಬ್ಬರು ಈ ಶಾಲೆಯಲ್ಲಿ ಶಿಕ್ಷಕರಾಗಿದ್ದರು. ಕೆಲವು ಜನ ತರುಣರು ಇಲ್ಲಿ ಶಿಕ್ಷಣವನ್ನೂ ಹೊಂದುತ್ತಿದ್ದರು. ೧೮೯೩ ರ ಸುಮಾರಕ್ಕೆ ಚಿಮ್ಮಲಗೀ ವೆಂಕಣ್ಣನವರು ಘಾಟಕ ಗುರುನಾಥರಾಯರ ಮನೆಯಲ್ಲೇ ಅಕಸ್ಮಾತ್ತಾಗಿ ಶಿಡಿಲು ಬಡಿದು ತೀರಿಕೊಂಡರು. ಇದು ಒಂದು ರೀತಿಯಿಂದ ಇತ್ತಕಡೆಯ ಕರ್ನಾಟಕ ಸಂಗೀತ್ತ ಪದ್ಧತಿಗೇ ಶಿಡಿಲು ಬಡಿದಂತಾಯಿತು. ಈ ಮೊದಲೇ ಹೇಳಿರುವಂತೆ ಇತ್ತ

ಕಡೆಗೆ ಒಂದೇ ಸವನೇ ನುಗ್ಗುತ್ತಿದ್ದ ಮರಾಠೀ ಸಂಗೀತ ನಾಟಕ ಕಂಪನಿಗಳ ಹಾಡುಗಾರಿಕೆಯನ್ನು ಕೇಳಿ ಕೇಳಿ ನಮ್ಮ ಕಿವಿಗಳಿಗೆಲ್ಲ ಹಿಂದುಸ್ಥಾನೀ ಗಾಯನವನ್ನೇ ಕೇಳುವ ಚಟಬಿದ್ದು ಹೋಗಿದೆ. ಮೇಲಾಗಿ ಇತ್ತ ಕಡೆಗೆ ಬಂದಿದ್ದ ಮರಾಠೀ ಅಧಿಕಾರಸ್ಥರಲ್ಲಿ ಕೆಲವರಿಗೆ ಹಿಂದುಸ್ಥಾನೀಗಾಯನದಲ್ಲಿ ವಿಶೇಷ ಅಭಿರುಚಿಯೂ ಪ್ರೇಮವೂ ಇದ್ದುದರಿಂದ ಅವರೆಲ್ಲ ಇಲ್ಲಿ ಅದರ ಪ್ರಸಾರ ಕ್ಕಾಗಿ ಹೆಣಗಿದ್ದೂ ಉಂಟು. ಚಿಮ್ಮಲಗೀ ವೆಂಕಣ್ಣನವರ ಅಪಮೃತ್ಯುವಿನಿಂದ ಘಾಟಕ ಗುರುನಾಥರಾಯರು ಸ್ಥಾಪಿಸಿದ ಸಂಗೀತಶಾಲೆಯು ಕುಗ್ಗುವ ಸುಮಾ ರಕ್ಕೆ ಸ್ವ. ಬಳವಂತರಾವ ಸಹಸ್ರಬುದ್ಧೆ ಎಂಬ ಮರಾಠೀ ಗೃಹಸ್ಥರು ಇಲ್ಲಿಗೆ ಎಜ್ಯುಕೇಶನಲ್ ಇನ್ಸಪೆಕ್ಟರರಾಗಿ ಬಂದರು. ಇವರಿಗೆ ಹಿಂದುಸ್ಥಾನೀ ಗಾಯನದಲ್ಲಿ ಅತ್ಯಂತ ಆದರ, ಅಭಿಮಾನ. ಸ್ವತಃ ಅದೇ ಪದ್ಧತಿಯ ಗಾಯನ ಕಲಿತ ನುರಿತ ಗಾಯಕರು. ಇವರ ಪ್ರೇರಣೆಯಿಂದ ಮತ್ತೊಂದು ಗಾಯನ ಶಾಲೆಯು ಇಲ್ಲಿ ಸ್ಥಾಪಿತವಾಯಿತು. ಆದರೆ ಇದರಲ್ಲಿ ಹಿಂದುಸ್ಥಾನೀ ಗಾಯನ ಪದ್ಧತಿಯ ಶಿಕ್ಷಣಕ್ಕೇ ಉಪಕ್ರಮವಾಯಿತು, ಇಲ್ಲಿಯ ಸರಕಾರೀ ಹಾಯಸ್ಕೂಲಿನಲ್ಲಿ ಡ್ರಾಯಿಂಗ ಮಾಸ್ತರರಾಗಿದ್ದ ಸ್ವ. ಮಣೇರಕರರೆಂಬ ಹಿಂದುಸ್ಥಾನೀ ಗಾಯನ ಬಲ್ಲವರೇ ಈ ಸಂಗೀತಶಾಲೆಗೆ ಮೊದಲು ಶಿಕ್ಷಕರಾಗಿದ್ದರು. ಇಲ್ಲಿಯ ಕನ್ನಡ ಟ್ರೇನಿಂಗಕಾಲೇಜಿನಲ್ಲಿ ಗಾಯನ ಶಿಕ್ಷಣವನ್ನಾರಂಭಿಸುವ ಉಪಕ್ರಮಕ್ಕೆ ಸರಕಾರದ ಒಪ್ಪಿಗೆ ದೊರೆತು ಸುಪ್ರಸಿದ್ಧ ಹಿಂದುಸ್ಥಾನೀ ಗಾಯನಕಲಾ ಪಟುಗಳಾದ ಸ್ವ. ಭಾಸ್ಕರ ಬುವಾ ಬಖಲೆ ಎಂಬ ಗವಾಯಿಗಳು ಕಾಲೇಜಿನಲ್ಲಿ ಗಾಯನ ಶಿಕ್ಷಕ ರಾಗಿ ನೇಮಿಸಲ್ಪಟ್ಟರು. ವಿರಾಮಕಾಲದಲ್ಲಿ ಭಾಸ್ಕರಬುವಾನವರು ಸಂಗೀತ ಶಾಲೆಯಲ್ಲಿಯೂ ಶಿಕ್ಷಣದ ಕೆಲಸ ಮಾಡುತ್ತಿದ್ದರು. ಟ್ರೇನಿಂಗ ಕಾಲೇಜಿನಲ್ಲಿ ಶಿಕ್ಷಣ ಪಡೆದ ಶಿಕ್ಷಕರು ಭಾಸ್ಕರ ಬುವಾನವರಿಂದ ಸಂಗೀತವನ್ನು ಕಲಿತು ಹೊರಬಿದ್ದ ಬಳಿಕ ಹಳಿಪಳ್ಳಿಗಳಲ್ಲಿ ಕೂಡ ಇವರ ಮುಖಾಂತರ ಹಿಂದುಸ್ಥಾನೀ ಗಾಯನ ಪದ್ಧತಿಯೇ ಹರಡುವದಕ್ಕೆ ಅನುಕೂಲವಾಯಿತು. ಕೇವಲ ಹಣಗಳಿಸುವದಕ್ಕೇ ಹುಟ್ಟಿಬೆಳೆದು ಹೆಸರಿಗೆ ಕನ್ನಡ ನಾಟಕಗಳನ್ನು ಮಾಡುತ್ತಿರುವ ನಮ್ಮ ಇತ್ತ ಕಡೆಯ ನಾಟಕ ಕಂಪ ನಿಗಳೂ ಹಿಂದುಸ್ಥಾನೀ ಗಾಯನವನ್ನೇ ತಮ್ಮ ಗುರುಮಂತ್ರವನ್ನಾಗಿಟ್ಟು

ಕೊಂಡು ಅದನ್ನೇ ಪ್ರಚಾರಮಾಡುತ್ತ ನಮ್ಮ ಕಡೆಯ ಲೋಕಾಭಿರುಚಿಯನ್ನು ಅದೇ ಹಳ್ಳದಲ್ಲಿ ಹರಿಸತೊಡಗಿವೆ. ಗ್ರಾಮೋಫೋನ ಪ್ಲೇಟುಗಳೂ ಇತ್ತ ಇದೇ ಹಾವಳಿಯನ್ನು ನಡಿಸಿರುತ್ತವೆ. ಹೀಗಾಗಿ ಕಳೆದ ಸುಮಾರು ೪೦ ವರ್ಷಗಳಿಂದ ಈ ಭಾಗದಲ್ಲಿ ಕರ್ನಾಟಕ ಸಂಗೀತ ಪದ್ಧತಿಯ ಗಾಯನವೆಂಬುದು ಹೇಳ ಹೆಸರಿಲ್ಲದಾಗಿದೆ. ರಾಗ ತಾಳಗಳ ಕರ್ನಾಟಕ ಹೆಸರುಗಳು ಕೂಡ ನಮ್ಮ ಜನರಿಗೆ ಮರೆತು ಹೋಗಿವೆ. ಹೀಗೆ ಕರ್ನಾಟಕ ಸಂಸ್ಕೃತಿಯ ಒಂದು ಶ್ರೇಷ್ಠವಾದ ಮುಖ್ಯಾಂಗವೇ ಈ ಭಾಗದಲ್ಲಿ ನಿರ್ನಾಮವಾಗಿದೆ. ಕರ್ನಾಟಕ ಸಂಸ್ಕೃತಿಯ ಬೇರೆ ಅಂಗೋಪಾಂಗಗಳ ಪುನರುಜ್ಜೀವನಕ್ಕೆ ಪ್ರಯತ್ನ ನಡೆದಿರುವ ಈ ಕಾಲದಲ್ಲಿಯೂ ನಮ್ಮ "ಸನಾತನ" ಸಂಗೀತ ಪದ್ಧತಿಯ ಕಡೆಗೆ ಯಾರೂ ಗಮನಕೊಟ್ಟಿರುವದಿಲ್ಲ. ಹೀಗೆ ನಮ್ಮ ವಿಶಿಷ್ಟ ಗಾಯನ ಕಲೆಯೇ ನಷ್ಟವಾಗಿರುವ ಈ ಕಾಲದಲ್ಲಿ ಅದನ್ನೇ ಮುಖ್ಯ ಗುರಿಯಾಗಿಟ್ಟುಕೊಂಡು ಬರೆಯಲ್ಪಟ್ಟ ಈ ಶಾಕುಂತಲದ ಪ್ರಯೋಗಕ್ಕೆ ಮಾಡುವವರ ಅಥವಾ ನೋಡುವವರ ಮನಸ್ಸು ಒಲಿಯುವದೆಂತು? ನಮ್ಮ ಕನ್ನಡ ಸಂಸ್ಕೃತಿಯನ್ನು ಉಳಿಸುವದಕ್ಕೂ ಬೆಳಿಸುವದಕ್ಕೂ ನಡೆದಿರುವ ಪ್ರಯತ್ನಗಳಲ್ಲಿ ನಮ್ಮ ಸಂಗೀತ ಪದ್ಧತಿಗೂ ಉಳಿಗಾಲವನ್ನು ತರಬೇಕೆಂಬ ಪುಣ್ಯವಂತರಾರಾದರೂ ಉದಯ ಹೊಂದಿ ಅಸಂಖ್ಯ ಸಂಕಟಗಳಿಂದ ಬಳಿಸಲ್ಪಟ್ಟಿರುವ ನಮ್ಮೀ ಅತ್ಯಂತ ಶ್ರೇಷ್ಠವಾದ ಸನಾತನ ಕಲೆಯನ್ನು ಮತ್ತೆ ಉದಯೋನ್ಮುಖ ಮಾಡತಕ್ಕ ಸಾಹಸವನ್ನು ಕೈಕೊಂಡು ಶ್ರೇಯಸ್ಸು ಪಡೆಯಬೇಕಾಗಿದೆ. ಇಷ್ಟಾದನಂತರ ಈ ಶಾಕುಂತಲದ ಪ್ರಯೋಗಕ್ಕೆ ಯಾರಾದರೂ ಮನಸ್ಸು ಮಾಡಿದರೆ ಮಾಡಬಹುದೆಂಬ ಆಶೆ. ಹೀಗೆ ಪ್ರಯೋಗಗಳಾದನಂತರ ಇದರೊಳಗಿನ ಪದಪದ್ಯಗಳ ಸ್ವಾರಸ್ಯದ ಗುಟ್ಟು ಸಾರ್ವತ್ರಿಕವಾಗಿ ಪ್ರಸಾರಗೊಂಡು ಲೋಕಾಭಿರುಚಿಯ ಇಂಥ ಕೃತಿಗಳನ್ನು ಓದುವ ಕಡೆಗೆ ಹೊರಳುವ ಸಂಭವ. ಆದರೆ ಈ ಆಶೆಸಂಭವಗಳೆರಡೂ "ನಂದೋ ರಾಜಾ ಭವಿಷ್ಯತಿ" ಎಂಬಂತೆ ಸದ್ಯಕ್ಕಂತೂ ಉಪಹಾಸಾಸ್ಪದವಾಗಿಯೇ ತೋರುತ್ತವೆ.

ತೀರಿತು. ಇಲ್ಲಿಗೆ ಈ "ಶಾಕುಂತಲದ ಪರಿಚಯ" ಕ್ಕೆ ಸಂಬಂಧಿಸಿದ ಮಾತುಗಳೆಲ್ಲ ಮುಗಿದವು. ಇನ್ನು ಈ "ಪರಿಚಯ" ದ ಪರಿಚಯವನ್ನಷ್ಟು ವಾಚಕರಿಗೆ ಮಾಡಿಕೊಟ್ಟು ಅವರ ಅಪ್ಪಣೆ ಪಡೆಯಬೇಕಾಗಿದೆ.

“ ಅನ್ನಕ್ಕಿಂತ ತೊವ್ವೆಯೇ ಬಹಳ ” ಎನ್ನುವಂತೆ ಪುಸ್ತಕದ ಪ್ರಮಾಣಕ್ಕಿಂತ ಪರಿಚಯವೇ ದೊಡ್ಡದಾಗಿರುವದೆಂಬ ಆಕ್ಷೇಪವು ಬರುವದೆಂಬದನ್ನು ನಾನು ತಿಳಿದೇ ಇರುವೆನು. ಆದರೆ ಉಪಾಯವಿಲ್ಲದೆ ಇಷ್ಟು ಬರೆಯಬೇಕಾಯಿತೆಂದು ಸಮಾಧಾನ ಹೇಳಿ ಆಕ್ಷೇಪಕರಲ್ಲಿ ಕ್ಷಮೆಯನ್ನೇ ಯಾಚಿಸಬೇಕಾಗಿದೆ. ಇತ್ತಿತ್ತಲಾಗಿ ಕನ್ನಡ ಜನಾಂಗದಲ್ಲಿ ಕನ್ನಡ “ ಗ್ರಂಥ ” ಗಳನ್ನೋದುವ ರುಚಿಯೇನೋ ಬೆಳೆಯುತ್ತ ನಡೆದಿದೆ; ಕಾವ್ಯಗಳನ್ನು ಕೇಳಿ ತಿಳಿದುಕೊಳ್ಳಬೇಕೆಂಬ ಲವಲವಿಕೆಯೇನೋ ಹುಟ್ಟಿದೆ. ಇದು ನಿಜ. ಆದರೆ ಈ ಅಭಿರುಚಿಯೂ ಲವಲವಿಕೆಯೂ ನೂತನ ಸಾಂಪ್ರದಾಯದ ನೂತನ ಕೃತಿಗಳಲ್ಲಿ, ಚಿಕ್ಕ ಕತೆಗಳಲ್ಲಿ, ಖಂಡಕಾವ್ಯಗಳಲ್ಲಿ ಹೆಚ್ಚಾಗಿ ಉಪಯೋಗವಾಗುತ್ತಿರುವದೆಂದು ನನಗೆ ತೋರುವದು. ಪ್ರಾಚೀನ ಅರ್ವಾಚೀನ ಕವಿಗಳ “ ಹೊತ್ತಿಗೆ ” ಗಳನ್ನು ಆಸಕ್ತಿಯಿಂದ ಓದಿ ಅವುಗಳ ಮರ್ಮವನ್ನರಿತುಕೊಳ್ಳಲು ಯತ್ನಿಸಿ ಬಹುಶ್ರುತತ್ವದ ಬಲವನ್ನು ಗಳಿಸಲು ಹೆಣಗುವವರು ತೀರ ವಿರಳ. ನಮ್ಮ ಆಹಾರ ವಿಹಾರಗಳಲ್ಲ ತಾತ್ಕಾಲಿಕ ತೃಪ್ತಿಯನ್ನುಂಟುಮಾಡುವ ಹಗುರಾದ ಖಾದ್ಯ ಪೇಯಗಳೂ ಆಟಪಾಟಗಳೂ ನಮಗೆ ಪ್ರಿಯವಾಗಿರುವಂತೆಯೇ ವಾಚನದಲ್ಲಿಯೂ ನಾವು “ ಹಗುರಾದ ವಾಙ್ಮಯ ” ವನ್ನು ಬಯಸುವದೇ ಬಹಳವಾಗಿದೆ. ಊರೂರಿನ ಗರಡೀಮನೆಗಳೆಲ್ಲ ನೆಲಸಮವಾಗಿ ಶರೀರಬಲದಲ್ಲ “ ಖಂಡೇರಾಯ ” ರಾಗಿರುವ ನಮ್ಮ ಸಂತತಿಗೆ ವ್ಯಾಯಾಮ ಶಾಲೆಗಳ ಶಿಕ್ಷಣವು ಹೇಗೆ ಈಗ ಆವಶ್ಯಕವಾಗಿರುವದೋ ಹಾಗೆಯೇ ಬುದ್ಧಿಬಲದಲ್ಲಿಯೂ ಕ್ಷೀಣವಾಗಿರುವ ನಮ್ಮ ಜನಾಂಗಕ್ಕೆ ಕನ್ನಡ ಕಾವ್ಯಗಳ ಪಠಣಶ್ರವಣಗಳ ಪರಂಪರಾ ಸಾಂಪ್ರದಾಯವು ನಷ್ಟವಾಗಿರುವ ಈ ಕಾಲದಲ್ಲಿ ಗ್ರಂಥಗಳನ್ನು ಯಾವ ದೃಷ್ಟಿಯಿಂದ ಹೇಗೆ ಓದಬೇಕೆಂಬದನ್ನು ಸಂಕ್ಷೇಪವಾಗಿಯಾದರೂ ತಕ್ಕಮಟ್ಟಿಗೆ ತಿಳಿಯುವಂತೆ ವಿಶದಪಡಿಸಿ ಬರೆಯದೆ ಗತ್ಯಂತರವಿಲ್ಲವೆಂಬ ವಿಚಾರದಿಂದಲೇ ಈ “ ಪರಿಚಯ ” ವನ್ನು ಇಷ್ಟೊಂದು ವಿಸ್ತಾರಗೊಳಿಸಬೇಕಾಯಿತು. “ ಅಯ್ಯೋ, ಹನುಮನ ಬಾಲದಂತೆ ಇಷ್ಟೊಂದು ಬೆಳೆದ ಈ “ ಪರಿಚಯ ” ವನ್ನು ಓದಲು ಈಗಿನ ಪ್ರಾಪಂಚಿಕ ತಾಪಗಳಲ್ಲಿ, ಅಭ್ಯಾಸದ ಹೊರೆಯಲ್ಲಿ, ಆಟನೋಟಗಳ ಗದ್ದಲದಲ್ಲಿ ವಿರಾಮವೂ ವಿಶ್ರಮವೂ ಯಾರಿಗೆ? ಆದುದರಿಂದ ಇಷ್ಟೊಂದು ಬರೆದು

ಪ್ರಯೋಜನವೇನು? " ಎಂಬ ವಿಚಾರವೂ ಕ್ಷಣಹೊತ್ತು ಹೊಳೆಯದಿರಲಿಲ್ಲ. ಆದರೆ ಬರೆಯಲಿಕ್ಕೆ ಕೂತವನು ಓದುವವರ ಕಷ್ಟತಾಪಗಳನ್ನು ಕಣ್ಣೆದುರಿಗೆ ಕಟ್ಟಿಕೊಂಡು ತನ್ನ ಕರ್ತವ್ಯವನ್ನೇಕೆ ಕುಗ್ಗಿಸಬೇಕು ? ಇಂದಿನವರೆಗೆ ಬರೆದದ್ದರಲ್ಲಿ ಎಷ್ಟೋ ಪಾಲು ಬೆಳಕುಕಾಣದೆ ಬರಿದೆ ಬಿದ್ದಿರುವಂತೆ ಈ ಬರವಣಿಗೆಯೂ ಬೀಳುವದೆಂಬ ಬೆದರಿಕೆ ಬೇರೆ ಇಲ್ಲವಲ್ಲ! ಬೆಳಗಾವಿಯ ಶ್ರೀವಿದ್ಯಾರಣ್ಯ ಗ್ರಂಥಪ್ರಕಾಶನ ಸಮಿತಿಯವರು ಬರೆದು ಕೊಟ್ಟಷ್ಟನ್ನೂ ಮುದ್ರಿಸಲು ಬದ್ಧರಾಗಿರುವಾಗ ಭಯವೇನು? ಬುದ್ಧಿಗೆ ಹೊಳೆದ ವಿಚಾರಗಳನ್ನೆಲ್ಲ ಒಂದೆಡೆಗೆ ಬರೆದುಕೊಟ್ಟು ಬಿಟ್ಟರಾಯಿತು. ಮುದ್ರಿಸುವವರು ಮುದ್ರಿಸಿ ಇಟ್ಟು ಬಿಟ್ಟರಾಯಿತು. ಮಹಾಕವಿ ಭವಭೂತಿಯು ಹೇಳಿರುವಂತೆ ನಿರವಧಿಯಾದ ಕಾಲದಲ್ಲಿ ಈ ವಿಶಾಲವಾದ ಕರ್ನಾಟಕದಲ್ಲಿ ಯಾರಾದರೂ ಒಬ್ಬಿಬ್ಬರು " ಸಮಾನಧರ್ಮಿ " ಗಳು ಹುಟ್ಟಿ ಓದುವ ಪರಿಶ್ರಮಬಡಲು ಸಿದ್ಧರಾದರೂ ಸಾಕೆಂಬ ಸಮಾಧಾನವೂ ತಟ್ಟನೆ ಹೊಳೆಯಿತು. ಮೇಲಾಗಿ ಈಗಿನ ಇತಿಹಾಸ ಸಂಶೋಧಕರು ಪ್ರಾಚೀನ ಸಂಗತಿಗಳ ಸಂಶೋಧನಕ್ಕೆ ಪಡುತ್ತಿರುವ ಅಖಂಡ ಪರಿಶ್ರಮವು ಕಣ್ಣುಮುಂದೆ ಕಟ್ಟಿ, ಮುಂದಿನ ಇತಿಹಾಸ ಸಂಶೋಧಕರ ವಿಷಯವಾಗಿ ಮನಸ್ಸಿನಲ್ಲಿ ಅನುಕಂಪೆ ಹುಟ್ಟಿ, ಬಲ್ಲಷ್ಟು ಸಂಗತಿಗಳನ್ನು ಬರೆದುಕೊಟ್ಟೇ ಬಿಡಬೇಕೆಂಬ ಆತುರವೂ ಹೆಚ್ಚಾಯಿತು. ಈ ಕಾರಣಗಳ ಮೂಲಕ ಇಷ್ಟೊಂದು ಬೆಳೆದಿರುವ ಈ "ಪರಿಚಯದ" ಕಡೆಗೆ ಕನ್ನಡನಾಡಿನ ಹೊಸ ಹುರುಪಿನ ತರುಣರು ತಮ್ಮ ಪ್ರೇಮಪೂರ್ಣ ದೃಷ್ಟಿಯನ್ನು ಹೊರಳಿಸಲಾರರೇ?

ಸ್ವ. ಶೇಷಗಿರಿರಾಯರ ಈ ಶಾಕುಂತಲದ ವಿಷಯವಾಗಿ ವಿಮರ್ಶಾತ್ಮಕವೆಂದು ಇದರಲ್ಲಿ ಬಂದಿರುವ ವಿಚಾರಗಳೆಲ್ಲ ನನ್ನ ಸ್ವಂತ ಬುದ್ಧಿ ಪ್ರಭಾವದವೆಂಬ ಜಂಭವನ್ನೂ ನಾನು ಕೊಚ್ಚಿಕೊಳ್ಳಲಾರೆನು. ಇದನ್ನು ಬಹುದಿನಗಳಿಂದ ಬಲ್ಲವರಾದ ಅನೇಕ ಜನ ಹಿರಿಯರೊಡನೆ ಬಳಿಕೆಮಾಡುವ ಭಾಗ್ಯವು ನನಗೆ ದೊರೆತಕಾಲಕ್ಕೆ ಅವರೆಲ್ಲರ ಬಾಯಿಗಳಿಂದ ಹೊರಬಿದ್ದ ಪ್ರಶಂಸೋದ್ಗಾರಗಳ ಸಂಕಲಿತ ಭಾವಗಳೇ ಇದರಲ್ಲಿ ಒಡಮೂಡಿರುವವೆಂದು ಪ್ರಾಂಜಲಬುದ್ಧಿಯಿಂದ ಒಪ್ಪಿಕೊಳ್ಳಬೇಕಾಗಿದೆ. ಗುಣೈಕಪಕ್ಷಪಾತಿಗಳಾದ ಈ ಮಹನೀಯರಲ್ಲಿ ಒಬ್ಬಿಬ್ಬರ ಹೆಸರುಗಳು ಈ ಮೊದಲೇ ಬಂದಿರುವವು. ಅವರನ್ನುಳಿದು ಸ್ವರ್ಗ

ಸ್ಥರಾದ ಶಾಂತಕವಿಗಳು, ಕಾವ್ಯಾನಂದರು, ರೊದ್ದ ವ್ಯಾಸರಾಯರು ಈ ಮೂವರ ಹೆಸರುಗಳ ಉಲ್ಲೇಖವನ್ನೂ ಅತ್ಯಂತ ಕೃತಜ್ಞತೆಯಿಂದ ಮಾಡದಿರಲಾರೆನು. ವಿಮರ್ಶಾತ್ಮಕ ವಿಚಾರಗಳನ್ನಷ್ಟು ಬಿಟ್ಟು ಮಿಕ್ಕ ಪ್ರತಿಪಾದನೆಯ ಹೊಣೆಯನ್ನು ನಾನು ಹೊತ್ತೇತೀರಬೇಕು; ಹೊರಲು ಸಿದ್ಧನಾಗಿಯೂ ಇರುವೆನು. ಕೊನೆಗೆ ಬಹು ದಿವಸಗಳಿಂದ ನೆನೆಗುದಿಗೆ ಬಿದ್ದರೂ "ಪರಿಚಯದ" ಕೆಲಸವನ್ನು ಒಂದು ಬಾರೆ ಪರಿಸಮಾಪ್ತಗೊಳಿಸಲು ನನ್ನನ್ನು ಸುತ್ತುಗಟ್ಟಿದ ಅನೇಕ ಬಗೆಯ ಪ್ರಾಪಂಚಿಕತಾಪತೊಂದರೆಗಳಲ್ಲಿಯೂ ನನಗೆ ಅನುಕೂಲವನ್ನು ಕಲ್ಪಿಸಿಕೊಟ್ಟ ಸಚ್ಚಿದಾನಂದಮೂರ್ತಿ ಯೋಗೇಶ್ವರ ಶ್ರೀಕೃಷ್ಣಪರಮಾತ್ಮನ ಅಖಂಡ ಅನುಗ್ರಹವನ್ನು ಅನನ್ಯಭಾವದಿಂದ ಸ್ಮರಿಸದೆ ಈ ನನ್ನ ಲಿಕ್ಕಣಿಕೆಯನ್ನು ಕೆಳಗಿಡಲಾರೆನು.

ಚಾಲುಕ್ಯವಿಕ್ರಮ ವರ್ಷ ೮೫೯ ಭಾವಸಂವತ್ಸರದ ಕೃಷ್ಣಾಷ್ಟಮಿ.

"ತಾರಾಧೀಶನ ಮಾರ್ಗಮಂ ಕ್ಷುಧಿತಮಾಧ್ವರ್ ನೋಳ್ಪರಂದಿಂದಿರಾ ||
ವಾರಕ್ಕಂ ಪರಿಪೂರ್ಣಮಾಯ್ತು ಬರಹಂ ಶ್ರೀಕೃಷ್ಣಕಾರುಣ್ಯದಿಂ" ||

**ಧಾರವಾಡ,**
೩೧-೮-೩೪.

**ಮುದವೀಡು ಕೃಷ್ಣರಾಯ.**

---

*

# ಸಂಪಾದಕರ ಸೊಲ್ಲು.

ಕನ್ನಡ ಸಾಹಿತ್ಯವನ್ನು ಎಲ್ಲೆಡೆಯಲ್ಲಿಯೂ ಬಿತ್ತರಿಸಲಾತುರವಾಗಿ ಕಣ್ತೆರೆದೊಡನೆಯೇ ಕಂದಿಕುಂದಿದ ಗ್ರಂಥ ಪ್ರಕಾಶಕಮಾಲೆ. ಮಂಡಲಗಳನೇಕವು ಬೆಳಗಾಂವಿಯಲ್ಲಿ ಕಂಗೊಳಿಸಿದವು. ಕನ್ನಡ ಸಾಹಿತ್ಯಕ್ಕಾಗಿ ಸತತ ಶ್ರಮತಾಳ್ವಸಾಹಿತಿಗಳನೇಕರು ಈ ಕರಿನಾಡಾದ ಬೆಳಗಾವಿಯಲ್ಲಿಹರು. ಆದರಾಸಮಿತಿಗಳ ತಳಹದಿಯು ಮಂದಿರದ ಭಾರವನು ತಾಳಲಾರದಲಿಹುದು. ಸಾಹಿತ್ಯ ಕ್ಷೇತ್ರದಲ್ಲಿ ವೃದ್ಧಕೃಷೀವಲರಾದ ಶ್ರೀ. ಬಿ. ಕಲ್ಯಾಣಶರ್ಮರು ಈ ಕರಿನಾಡಿನ ಕುಂದನ್ನು ನಿರುಕಿಸಿ ಸದ್ಹೇತುವಿನಿಂದ ತಮ್ಮ ಸಂಪಾದಕತ್ವದ ಕೆಳಗೆ ನಡೆಸಲ್ಪಡುತ್ತಿದ್ದ ಶ್ರೀಭುವನೇಶ್ವರೀ ಗ್ರಂಥಮಾಲೆಯನ್ನು ತರುಣ ಉತ್ಸಾಹೀ ಸಾಹಿತಿಗಳಾದ ಶ್ರೀ. ನಗರ. ವೆಂಕಣ್ಣಾಚಾರ್ಯರವರ ಬಿನ್ನಹದಂತೆ ಅವರೊಡನೆ ಕಲೆತು ಕನ್ನಡ ಮಾತೆಯ ಸೇವೆಗಾಗಿ ಟೊಂಕಕಟ್ಟಿ ಶ್ರೀಭುವನೇಶ್ವರೀ ಮಾಲೆಯನ್ನು ಶ್ರೀವಿದ್ಯಾರಣ್ಯ ಗ್ರಂಥ ಪ್ರಕಾಶನ ಸಮಿತಿಯಲ್ಲಿ ಸಮಾವೇಶ ಮಾಡಿ ಅವ್ಯಾಹತವಾಗಿ ಕಜ್ಜ ಕೈಕೊಳ್ಳಲು ಸಿದ್ಧರಾದರು. ಅದಕ್ಕಾಗಿ ನಾವು ಅವರನ್ನು ಎಷ್ಟು ತುತಿಸಿದರೂ ಅಲ್ಪವೇ ಸರಿ.

ಕಾರ್ಯಕೈಕೊಳ್ಳಲಾತುರರಾಗಿ ಪ್ರಥಮ ಮೆಟ್ಟಿಲನ್ನು ಮುಟ್ಟಿದೊಡನಯೇ ಮಹಾಜನದ ಮುಂದಿರಿಸದಂತಹ ವಿಪತ್ತುಗಳನೇಕವು ಕ್ಷಣಕ್ಷಣಕ್ಕೂ ಸಂಭವಿಸತೊಡಗಿದವು. ನಮ್ಮಗಳಲ್ಲಿ ಸ್ಫೂರ್ತಿಯನ್ನಿತ್ತು ಶಾಕುಂತಲದ ಸವಿಯನ್ನು ಓದುಗರಿಗೀಯಿರೆಂದು ಉಪದೇಶಿಸಿದ ಪರಮಪೂಜ್ಯ ಮುದವೀಡು ಕೃಷ್ಣರಾಯರ ಸಹಿಷ್ಣುತಾಮತಿಯ ಕನಿಕರ ಕತೆಯೊಂದನ್ನು ನಾವು ಇಲ್ಲಿ ಹೇಳದಿರ ಲಾರೆವು.

ದೇಶಭಕ್ತ ಮುದವೀಡು ಕೃಷ್ಣರಾಯರಿಗೆ ಗಂಡು ಮಕ್ಕಳೆಂದರೆ ಮೂವರು. ಹಿರಿಕಿರಿಯ ಮಕ್ಕಳನ್ನು ಗಂಡು ಮಕ್ಕಳಿಲ್ಲದೆ ಮರಮರನೆ ಮರುಗುತ್ತಿರುವವರ ಮನೆತನ ಸಾಗಿಸಲು ಉದಾರಮನದಿಂದ ನೀಡಿದರು. ಮುಪ್ಪಿನ ಮುದವೀಡುರಾಯರ ಮನೆ ಮುಂದೆ ತರುವರೆಂದರೆ ನಡುವಿನವರಾದ ಶ್ರೀನಿವಾಸರಾಯರೇ. ಆದರೆ ಕಾಲಗತಿಯು ವಿಚಿತ್ರವೇ ಸರಿ! ಇಂಥ

ದರಲ್ಲಿ ಆ ಶ್ರೀನಿವಾಸರಾಯರು ವಿಷಮಜ್ವರ ಪೀಡಿತರಾಗಿ ಬಹುದಿನ ಬಳಲಿ ತಮ್ಮ ಇಪ್ಪತ್ತನೇ ವರ್ಷದಲ್ಲಿಯೇ ಇಹಲೋಕ ಯಾತ್ರೆಯನ್ನು ಮುಗಿಸಿ ಮುದವೀಡುರಾಯರ ಕುಟುಂಬವನ್ನೇ ಶೋಕಾಂಬುಧಿಯಲ್ಲಿ ಚಲ್ಲಿ ತೆರಳಿ ದರು. ನಮಗೆ ಮನಮುಟ್ಟಿ ಸಹಾಯ ಮಾಡಿದ ಮುದವೀಡುರಾಯರಿಗೆ ನಮ್ಮ ಕುತ್ತು ಕೊರತೆಗಳ ಗಾಳಿತಟ್ಟಿ ಹೀಗಾಗಿರಬಹುದೋ ಏನೋ ಎಂಬ ಶಂಕೆಯು ಮಾತ್ರ ನಮ್ಮನ್ನು ಬಲವಾಗಿ ಬಾಧಿಸತೊಡಗಿದೆ. ಭವತಾಪದಿಂದ ಬೆಂದು ಬೆಂಡಾದ ಮುದವೀಡು ಕೃಷ್ಣರಾಯರು ನಮ್ಮಗಳ ವಿನಂತಿಗೆ ಮನ್ನಣೆಯ ನಿತ್ತು ತಮ್ಮ ಸರಸ ಲೇಖನಿಯಿಂದ ರಸಭರಿತವಾಗಿ ಸ್ವ. ಚುರಮುರಿ ಶೇಷ ಗಿರಿರಾಯರ ಅಲ್ಪ ಪರಿಚಯವನ್ನೂ ಶಾಕುಂತಲದ ಪರಿಶೋಧನೆಯನ್ನೂ ಇಂಥ ದುರ್ಧರ ಪ್ರಸಂಗದಲ್ಲಿಯೂ ಬರೆದು ಕಳುಹಿದ್ದಕ್ಕಾಗಿ ಆ ದೇಶಭಕ್ತರ ಆ ಸಹಿಷ್ಣು ಸಾಹಿತಿಗಳ ಗುಣಗಾನವನ್ನು ಎಷ್ಟು ರೀತಿಯಾಗಿ ಮಾಡಿದರೂ ಮನಸು ತಣಿಯದಾಗಿದೆ.

ಕಜ್ಜ ಕೈಕೊಳ್ಳಲು ಉತ್ಸುಕರಾದ ನಮಗೆ ಹಣದ ಅವಶ್ಯಕತೆಯಾಗಲು ಅನೇಕ ಮಹನೀಯರೂ ಮಹಿಲೆಯರೂ ಮುಂಗಡವಾಗಿಯೇ ಚಂದಾ ಹಣವನ್ನು ಕೊಟ್ಟು ಪ್ರೋತ್ಸಾಹಿಸಿದ್ದಕ್ಕಾಗಿ ಅವರೆಲ್ಲರಿಂದಲೂ ಸಮಿತಿಯು ಉಪಕೃತವಾಗಿದೆ. ಈ ಶಾಕುಂತಲನಾಟಕವು ಹೊರಗೆ ಬರಬೇಕಾದರೆ ಅನೇಕ ಪರಿಶ್ರಮವನ್ನು ಕೈಕೊಂಡು ಶಾಕುಂತಲ ಪ್ರಕಾಶನ ಮಂಡಲವನ್ನು ಸ್ಥಾಪಿಸಿ ಪ್ರಚಾರಕಾರ್ಯಕ್ಕೆ ಒಳ್ಳೇ ಸಹಾಯವಾಗುವಂತೆ ಪ್ರಯತ್ನ ಮಾಡಿದ ನಮ್ಮ ಗೆಳೆಯರಾದ ಶ್ರೀ. ಪ್ಯಾಟೀಶಾಮರಾಯರಿಗೂ ಮಂಡಲದವರಿಗೂ ತುಂಬಾ ಕೃತಜ್ಞರಾಗಿರುವೆವು. ಇದಲ್ಲದೆ ಗೆಳೆಯರಾದ ಶ್ರೀ. ಕುಲಕರಣಿ ಪ್ರಲ್ಹಾದ ರಾಯರು ಅತಿ ಶ್ರಮಬಟ್ಟು ಕೈಬರಹದ ಪ್ರತಿಬರೆದು ಕೊಟ್ಟದ್ದಕ್ಕಾದಿ ಅವ ರಿಗೆ ಅನಂತ ಧನ್ಯವಾದಗಳನ್ನು ಅರ್ಪಿಸುತ್ತೇವೆ. ಇದಲ್ಲದೆ ಆಶ್ರಯದಾತ ರಾಗಿಯೂ, ಪೋಷಕರಾಗಿಯೂ, ಮತ್ತು ಸಹಾಯಕರಾಗಿಯೂ ಪ್ರೋತ್ಸಾ ಹಿಸಿದ ಮಹನೀಯರ ಉಪಕಾರವನ್ನು ಎಂದೆಂದಿಗೂ ಮರೆಯಲು ಸಾಧ್ಯ ವಿಲ್ಲ. ಮತ್ತು ನಮ್ಮ ವಿನಂತಿಯಂತೆ ಶ್ರೀ. ಕುರುಗುಂದ ರಾಮರಾಯರು ಸಂತೋಷದಿಂದ ಮುದ್ರಣ ದೋಷಗಳನ್ನು ತಿದ್ದುವಿಕೆಯಲ್ಲಿ ಸಹಾಯ ಮಾಡಿದ್ದರಿಂದ ಅವರಿಗೂ ಮುದ್ರಣಕಾರ್ಯದಲ್ಲಿ ಹೆಚ್ಚಾಗಿ ಅನುಕೂಲತೆ

ಯನ್ನು ಒದಗಿಸಿಕೊಟ್ಟು ಮುದ್ದಾದ ಮುದ್ರಣ ಮಾಡಿಕೊಟ್ಟದ್ದಕ್ಕಾಗಿ ಸ್ಫೂರ್ತಿಸ್ವಭಾವದ ಚೌಗುಲೆ ಸಾತಪ್ಪನವರಿಗೂ ನಾವು ಋಣಿಯಾಗಿರುವೆವು. ಇವಲ್ಲದೆ ನಮ್ಮ ಕಾರ್ಯಕ್ಷೇತ್ರದಲ್ಲಿ ಅನೇಕ ಸಲಹೆಗಳನ್ನು ಕೊಟ್ಟು ಸಹಾಯಮಾಡಿದವರ ಉಪಕಾರವನ್ನು ಸ್ಮರಿಸದಿರಲಾರೆವು.

| | |
|---|---|
| **ಬೆಳಗಾಂವಿ.**<br>ಆಶ್ವೀನ ಶುದ್ಧ ೧. ಚಾ.<br>ವಿ. ೮೫೫ ವರ್ಷ. | **ಕನ್ನಡ ಭಾಷಾಸೇವಕರು.**<br><br>ಸಂಪಾದಕರು. |

---

# ಸೂಚನೆ.

( ಅಂದರೆ ಗ್ರಂಥಕರ್ತರ ಮುನ್ನುಡಿ )

ಕವಿಲೋಕಕ್ಕೆ ನರೇಶ್ವರಂ ನವರಸಂ ಸೂರಲ್ ಮಹಾಮೇಘ ಮಾ- ।
ಧವ ಮೇಣ್ ಬಲ್ಲ ರಸಜ್ಞ ಭೃಂಗತತಿಗಾ ಗೀರ್ವಾಣಭಾಷಾವನಂ ॥
ತವೆ ಸೌಂದರ್ಯಕೆ ತಂದ ಚಂದ್ರಮ ಮನೋಭಾವ ಪ್ರಕಾಶಕ್ಕೆ ತಾಂ ।
ರವಿ ಮುನ್ ಪೇಳ್ದನಿದನ್ನು ಸಂಸ್ಕೃತದೊಳಾ ಶ್ರೀಕಾಳಿದಾಸಾಖ್ಯನು ॥ ೧ ॥
ಇದಭಿಜ್ಞಾನ ಶಕುಂತಲಾಖ್ಯಕೃತಿಯಂ ಭಾಷಾಂತರಂ ತಮ್ಮ ತ- ।
ಮ್ಮ ವರೋಳ್ಮಾಡಿದರೆಲ್ಲ ನಾಡದ ( ಡಿನ ) ಜನರ್ ಕರ್ನಾಟದೋಳಿಲ್ಲೆಲೈ ॥
ಮುದಿವಂಪಟ್ಟುವದಲ್ಲದೆನ್ನ ಮರಣಂ ಯಾವಾಗಲೋ ಎಂಪು ಸಿ- ।
ಕ್ಕಿದ ಶಬ್ದಂಗಳನಿಟ್ಟು ಶೀಘ್ರತರದಿಂದೀ ಕೃತ್ಯಮಂ ಗೈದೆ ನಾಂ ॥ ೨ ॥
ಕವಿಜನರೆಲ್ಲ ನೋಡಬಹುದೆನ್ನಯ ಕೃತ್ಯವನನ್ಯದೇಶದೋಳ್ ।
ವಿವಿಧಜನರ್ಕಳಿಂ ವಿವಿಧಭಾಷೆಯೊಳಂತರಿಸಿರ್ಪವಂಗಳಂ ॥
ಸವಿಯೊಳು ಹಚ್ಚಿನೋಡಲೊರೆ ಕನ್ನಡಿನೆನ್ನದು ಹೆಚ್ಚದಿರ್ದೊಡೆ ।
ಕವಿತೆಯ ಗಂಡುಮೆಟ್ಟು ಕರನಾಟಕ ಬಿಟ್ಟು ತೆರಳ್ದು ಪೋಗುವೆಂ ॥ ೩ ॥
ಬಿಗಿನುಡಿಯಿರ್ದು ತಕ್ಕ ಸೊಗಸಿಲ್ಲದಿರಲ್ಕದು ತಾಲವೃಕ್ಷದೋಳ್ ।
ಮೊಗೆಯೊಳಗಿರ್ಪ ಮದ್ಯ ಮಧುರೋಕ್ತಿಯ ಕಾವ್ಯ ಸುಬೋಧವಾಗಿರಲ್ ॥
ಲ್ಕು ( ಉ ) ಗುರೆಳೆಗೆಂಪುವಣ್ಣೊಡೆದ ದ್ರಾಕ್ಷದ ಗೊಂಚಲು ಗೂಢವಾಗಿ ಮೇಣ್ ।
ಮಿಗೆ ರಸದುಂಬಿರಲ್ಕೆ ರಸದಾಳಿಯು ಕಬ್ಬದು ಕಬ ಮುತ್ತಮಂ ॥ ೪ ॥

ತಳಿರುಗಳಿಂದೆ ಮುಚ್ಚಿ ತೆರೆಯಲ್ ತನಿಮಾವಿನ ಹಣ್ಣು ಜೋಲ್ವೊಲ್ ।
ತಿಳಿವಸನಕ್ಕೆ ಬಟ್ಟೆ ಮೊಲೆಗಳ್ ಮರೆಯಾಗಿರೆ ತೋರುವಂತೆ ಮೈ ||
ಯೊಳಗಿನಿಯಂಗೆನಾಚಿ ನರಸಂಗದೊಳೊಪ್ಪಿಸದಿರ್ಪವ ವೆಣ್ಣಿನಲ್ ।
ಬಲು ಬಿಗಿಯಲ್ಲ ತೀರದೆರೆದಲ್ಲದು ಸೊಂಪಿನ ಕಾವ್ಯಮೊಪ್ಪುಗುಂ || ೫ ||
ಪರಿಯಲ್ತ್ತೋರ ತರಂಗಮೆನ್ನಲುಪಮಾದಿ ಪ್ರೌಢಾಲಂಕಾರಗಳ್ ।
ಹರಲೀಲಾಮೃತಸಾಗರೋ ನವರಸಂಗಳ್ ಮೌಕ್ತಿಕಾ ಪಂಕ್ತಿಯುಂ ||
ಮರಿಸಲ್ ಕನ್ನಡಮಾತೆ ಸೊಂಪಿನಲಿ ಮೂಗಿಂಗಿಟ್ಟ ನತ್ತೋ ಚಿಕಿ- ||
ತ್ಸರ ಕಲ್ಬುದ್ಧಿಗೆ ವಜ್ರವೋ ಕೃತಿಯೊ ಮೇಣಾರಕ್ಕರಾಯರ್ಗರ್ಗಳಾ || ೬ ||
ಕವಿಸೇನಾಪತಿ ಕಾವ್ಯಶಾಸ್ತ್ರವನಸಿಂಹಂ ಭೀಮಸೇನಂ ಕಣಾ ।
ನವಪಾಕಕ್ಕೆ ಗುರೋರ್ಗುರುಂ ರಸಿಕ ಮುಖ್ಯರ್ಗೀತನೈ ಮೇಣು ಮಾ- ||
ನವರೋಳಿಪ್ಪ ಮನಸ್ಸಿನೆಲ್ಲ ಬಗೆದೋರಲ್ ದರ್ಪಣಂ ಸೌಮ್ಯರಾ-
ರಿವಗೀ ಕನ್ನಡ ಕಾಳಿದಾಸನಿಗತಿ ಪ್ರಖ್ಯಾತ ಲಕ್ಷ್ಮೀಶಗೆ || ೭ ||
ಕವಿ ವಿದ್ವಾಂಸನಿರಲ್ಕೆ ತತ್ಕೃತುಪಮಾಲಂಕಾರ ಮುಂತಾಪರಿಂ ।
ಸವಿಯಾಗಿರ್ಪ ಸುಗೂಢ ದಿವ್ಯ ಕೃತಿಯುಂ ಸಾಮಾನ್ಯನುಂ ಕಟ್ಟಿದ ||
ಕವನಂ ನೋಡಲು ರತ್ನದೊಸ್ತದ ಕರಂಡಂ ಪಕ್ವದಾಡಿಂಬಮುಂ ।
ರವಿಯುಂ ಪೊಂಗಲಶಂ ಸುಧಾಕಿರಣನಂ ಚಲ್ವಾನನಂ ಪೋಲ್ವವು || ೮ ||
ಬಡಕವಿಗೀ ಕುರೂಪ ಕೃತಿಗನ್ನಿಕೆ ಪುಟ್ಟಿದಳಿನ್ನು ಜಾಣರೋಳ್ ।
ಅಡಿಗಳ ದಾಸಿಯಾಗಿ ಬದುಕಲ್ ಕಳುಹಿರ್ಪೆನಿವಕ್ಕೆ ತಪ್ಪಿ ತಾಂ ||
ನಡೆದೊಡೆ ಡೊಂಬದಾಸರೊಳು ಸಾಯ್ ನಡೆ ಯೆಂದಿವಳನ್ನೆ ನೂಂಕಿರೆ- ।
ನ್ನೆಡೆಯೊಳು ಬೇಡವರ್ಗೆ ಸಹ ಬೇಸರಿಡಲ್ಕೆಡಿಪರ್ಚಿಕಿತ್ಸರೆ || ೯ ||
ತನುವನಿದಿತ್ತು ಮಾತೃಪಿತೃಗಳ್ ಪೊರೆದೆನ್ನಿರಲನ್ಯನನ್ನದಾ-।
ತನವನ ಭಾಗ್ಯದಿಂದೆ ಬದುಕಲ್ ಮತಿಯಂ ಸತಿ ಮೇಣ್ ಸುತಂ ಹಿತಂ ||
ದಿನದಿನ ಚಿತ್ತಕಿತ್ತು ಪೊರೆಯಲ್ ಗುರುವಿಂಪುರೆ ಕಲ್ತಿರಲ್ಕೆ ಹಿಂ ।
ದಿನಘನಕಾವ್ಯ ಸೇವ್ಯಮಿರೆ ನಾನಿರೆನೋರ್ವನೆ ಕಾರ್ಯಕಾರಣಂ || ೧೦ ||
ಕಡುಗುರು ಭಕ್ತಿಯಿಂ ತುರಮುರೀತ್ಯುಪನಾಮಕ ರಾಮಚಂದ್ರಜಂ ।
ಜಡಮತಿ ಕಬ್ಬಿ ಶೇಷಗಿರಿಯೆಂಬವನೀ ಕೃತಿಗೈದು ಮಾಡಿಡಂ ||
ಬಡವರ ವಿದ್ಯೆಕಾಗಿ ತನುವಿಂ ಮನದಿಂ ಧನದಿಂದೆ ಸಾಹಸಂ ।
ಬಡುತಿಹ ಧೀರ ಚನ್ನಬಸವೇಶ್ವರ ದಿವ್ಯರ ಪಾದಭೂಷಣಂ || ೧೧ ||

---

# ಪಾತ್ರಪರಿಚಯ.

| | | | |
|---|---|---|---|
| ೧ | ಕಣ್ವರು | .... .... | ತಪಸ್ವಿಗಳು |
| ೨ | ದುಷ್ಯಂತ | .... .... | ಪುರುವಂಶದರಸು |
| ೩ | ವಿದೂಷಕ | .... .... | ಅರಸನ ಗೆಳೆಯ(ವಿನೋದಗಾರ) |
| ೪ | ಕಂಚುಕಿ | .... .... | ಸೇವಕ |
| ೫ | ಪುರೋಹಿತ | .... .... | ರಾಜಪುರೋಹಿತ |
| ೬ | ಬಾಲಕ | .... .... | ಭರತ. ದುಷ್ಯಂತತನಯ |
| ೭ | ಶಕುಂತಲಾ | .... .... | ಕಣ್ವರ ಸಾಕುಮಗಳು |
| ೮ | ಅನಸೂಯಾ | .... .... | ಸಖಿಯರು |
| ೯ | ಪ್ರಿಯಂವದಾ | .... .... | |
| ೧೦ | ಚತುರಿಕೆ | .... .... | ದಾಸಿಯರು |
| ೧೧ | ವೇತ್ರವತಿಕೆ | .... .... | |
| ೧೨ | ಗೌತಮಮ್ಮ | .... .... | ಶಕುಂತಲೆಯ ಸಾಕುತಾಯಿ |
| ೧೩ | ಮಾತಲಿ | .... ... | ಇಂದ್ರನ ಸಾರಥಿ |

ಇದಲ್ಲದೇ ಸೇನಾಪತಿ, ಋಷಿಸಿಷ್ಯರು, ದಾಸಿಯರು, ದ್ವಾರರಕ್ಷಕರು, ಮೀನುಗಾರ, ಕೊತವಾಲ ಮೊದಲಾದವರು.

# ಶಾಕುಂತಲ ನಾಟಕವು.

## ೧ ನೆಯ ಅಂಕವು.

### ಮಂಗಲಾಚರಣೆಯು.

ಪದ ರಾಗ—ಕಲ್ಯಾಣಿ.*

ತಳೆದಿಹ ಪರಾತ್ಪರನು ಹರಿ । ನಾಟ್ಯರೂಪಂ ॥
ಜಲಮೊಲರುಮಿಳಿಯು । ತಿಳಿವು ಬೆಳಕು ಬಾಂ- ॥
ದಳಂಗಳುಂ ತಾನೆಯಾಗಿ ॥ ಪಲ್ಲ ॥
ತಿಳಿಯು ತಿಳಿವ ಜಡನಾದಾ । ಜೀವನಾದಾ ।
ಕಲಿವ ತಾ ಕಲಿಸುವನು । ತಾನೆ ಸೋಲುವ ಗೆಲ್ಲುವ ।
ದೀನ- । ನು ತಾ । ಧನಿ ತಾ ಸತಿ ಪತಿ ತಾ ।
ದುಃಖ । ಸುಖ । ಬಡುವ ಅಳಿದು ಉಳಿವ ।
ನಿರುತದೊಳಳುತಲಿ ನಗುತಲಿ ॥ ೧ ॥

ಇಂಥ ಪರಮೇಶ್ವರನು ನಿಮ್ಮನ್ನು ಸಂರಕ್ಷಣೆ ಮಾಡಲಿ.

( ಈ ಪ್ರಕಾರ ಮಂಗಲಾಚರಣೆಯಾದ ಮೇಲೆ ಸೂತ್ರಧಾರನು ಮುಂದಕ್ಕೆ ಬರುತ್ತಾನೆ. )

**ಸೂತ್ರಧಾರ—** ( ಹಿಂದೆ ನೋಡುತ್ತ ) ಆರ್ಯಳೆ, ವಸ್ತ್ರಾಭರಣಗಳನ್ನು ಇಟ್ಟುಕೊಂಡು ನೀನು ಸಿದ್ಧಳಾಗಿದ್ದರೆ ತೀವ್ರದಿಂದ ಹೊರಟು ಬಾ.

**ನಟಿ—** ( ಬಂದು ) ಆರ್ಯರೆ, ನನ್ನನ್ನು ಏನು ಕಾರಣ ಕರೆಯೋಣವಾಯಿತು? ಯಾವ ಕಾರ್ಯವನ್ನು ಮಾಡತಕ್ಕದ್ದು, ಆಜ್ಞಾಪಿಸಬೇಕು.

---

* ಈ ಪದಕ್ಕೆ ಸ್ವರ—ಗಮಪಧನಿಧಾ ಪಮಪಗಮ । ಪಾಮಗರಿಸಾ ॥ ಸರಿ ಸಗಂ ಮಗರಿ । ಸಗರಿ ಸಸನಿಧ । ಸರೀರಿಗಾಪಮ । ಧಪಾಮ ॥ ಪಲ್ಲ ॥

ನಿನಿಧಧ ಪಮಗರಿ । ಗಪಾಗಾಪಾ ಧಸಾ । ರಿಸನಿಧಾ । ಗರಿಸನಿಧ । ಸಾನಿಧಾಪಮ ಗಾರಿಸಾ । ಗಾಗಾ । ಪಾಪಾ । ಧಸಪಾ । ಧನಿಸರಿಗಾ । ಗಾಗಾ । ಪಾಪಾ । ಧನಿಗಾ । ಧಪಮಗರಿಸಾ । ಸಾಸಾ ರಿರಿ ಗಗ ಮಮ ಪಧ ಪಮ ॥ ೧ ॥

**ಸೂತ್ರ**—ಆರ್ಯಳೆ, ರಸಜ್ಞತೆಯ ವಿಷಯದಲ್ಲಿ ಮಹಾ ವಿಖ್ಯಾತನಾದ ವಿಕ್ರಮಾದಿತ್ಯನ ಸಭಾಮಂಟಪವಿದು; ಇದರಲ್ಲಿ ಅನೇಕ ವಿದ್ವಜ್ಜನರು ವಿರಾಜಮಾನರಾಗಿದ್ದಾರೆ. ಅವರ ಮುಂದೆ ಈವತ್ತು ಕಾಲಿದಾಸಕವಿಯಿಂದ ರಚಿಸಲ್ಪಟ್ಟಂಥ ಅಭಿಜ್ಞಾನ ಶಾಕುಂತಲವೆಂಬ ನಾಟಕವನ್ನು ನಾವು ಪ್ರಯೋಗಿಸಿ ತೋರಿಸತಕ್ಕದ್ದಿರುತ್ತದೆ; ಕಾರಣ, ಎಲ್ಲ ಪಾತ್ರಗಳು ತಮ್ಮ ತಮ್ಮ ಕೃತಿಯಲ್ಲಿ ಬಹು ಜಾಗ್ರತರಾಗಿರಬೇಕು ಬಲ್ಲೆಯಾ ?

**ನಟಿ**—ಪ್ರಯೋಗಿಸತಕ್ಕಂಥವರು ತಾವು ಮಹಾ ಪ್ರವೀಣರಾಗಿರಲಿಕ್ಕೆ ಯಾವ ಮಾತಿನಿಂದಲೂ ನ್ಯೂನತೆಯಾಗಲರಿಯದು.

**ಸೂತ್ರ**—(ನಕ್ಕು) ಆದರೂ ನಮ್ಮಷ್ಟಕ್ಕೆ ನಾವು ಪ್ರವೀಣರೆಂದು ತಿಳಿಯಲಿಕ್ಕೆ ಬಾರದು ಬಲ್ಲೆಯಾ ?

(ಮಲ್ಲಿಕಾಮಾಲೆ.)

**ಕಾಂತೆ ಕೇಳೊರೆಯಂತೆ ಗಂತಿನ ಗಂತದಂತವನಾಂತವರ್ |**
**ಕುಂತು ಕೇಳುತಲಂತರಂಗದಿ ಸಂತಸಂ ತಳೆದಿಂತು ಪ್ರ |**
**ತ್ಯಂತರಂ ಬರುವಂತಿನಂ ತಲೆದೂಗುವಾ ಪರಿಯುಂತರಂ |**
**ನಾಂ ತಳೆರ್ದಿಹೆ ಶಂಕೆ ಸದ್ಗುಣವಂತನಾಂ ತದನಂತರಂ || ೨ ||**

**ನಟಿ**—ಅಹುದು ಸ್ವಾಮಿ ವಿದ್ವಜ್ಜನರು ಆನಂದದೊಳಗೆ ಮುಳುಗಿ ತಲೆದೂಗದೆ ಹೋದರೆ, ನಮ್ಮಲ್ಲಿದ್ದ ಗುಣಗಳಿಂದ ಏನು ಪ್ರಯೋಜನ ? ಒಳ್ಳೇದು, ಮುಂದೆ ನಾನು ಮಾಡತಕ್ಕ ಕಾರ್ಯವು ಯಾವದು ?

**ಸೂತ್ರ**— ಈ ಸಭಾಜನರ ಕರ್ಣೇಂದ್ರಿಯವನ್ನು ಸಂತೋಷಬಡಿಸುವಂಥ ಸಂಗೀತವನ್ನು ಬಿಟ್ಟು ಮತ್ತೇನು ಮಾಡತಕ್ಕದ್ದಿದೆ.

**ನಟಿ**—ಒಳ್ಳೇದು ಸ್ವಾಮಿ, ಯಾವ ಋತುವನ್ನನುಸರಿಸಿ ಗಾಯನವನ್ನು ಮಾಡತಕ್ಕದ್ದು ?

**ಸೂತ್ರ**—ಆರ್ಯಳೆ, ವಿಷಯೋಪಭೋಗಕ್ಕೆ ಸರ್ವೋತ್ತಮವಾದಂಥ ಗ್ರೀಷ್ಮಕಾಲವು ಇದೇ ತಲೆದೋರುತ್ತದೆ; ಇದನ್ನೇ ಕುರಿತು ಗಾಯನ ಮಾಡು; ನೋಡಿದೆಯಾ, ಸಾಂಪ್ರತ ಕಾಲವೇನು ರಮಣೀಯವಾಗಿ ತೋರುತ್ತದೆ !

( ಶಾರ್ದೂಲ ವಿಕ್ರೀಡಿತ. )

ತೋಯಂ ತುಂಬಿದ ತೋರ ದಿವ್ಯ ಸರಗಳ್ ಕ್ರೀಡಿಂಗೆ
ಚೆಲ್ವಾಗಿರಲ್ |
ವಾಯುಂ ಪಾಟಲಪುಷ್ಪದಿಂದೆ ಮಕರಂದಂ ತಾಳ್ದು
ಮಂದಾಗೆ ಮೇಣ್ ||
ಛಾಯಾ ಸೀತಲಮಾಗಿ ವನ್ಯತರುಗಳ್ ನೀಡಲ್ಕೆ ನಿದ್ರಾಸುಖಂ|
ಸಾಯಂಕಾಲದಿ ಸೃಷ್ಟಿಯೆಷ್ಟು ಸೊಬಗಂ ತಾಂ ತೋರ್ಪುದೇ
ಗ್ರಿಷ್ಮದೊಳ್ || ೩ ||

ನಟಿ—ಅಹುದು ಸ್ವಾಮಿ, ನಿಜವಾಗಿದೆ. ( ಗಾಯನವನ್ನಾರಂಭಿಸುತ್ತಾಳೆ. )

( ಪದ )

ವಾಟಿ —" ನಡಿಸಖಿ ಕುಂಜಬನದೊಳು ಪೋಗುನು ಮುರಲಿಯು ಕೇಳುನು "
ಎಂಬ ಪದದಂತೆ.

ನಡಿಸಖಿ ಕುಂಜಬನ | ದೊಳು ಪೋಗುವ |
ವಿಶ್ರಮುಗೂಡುವ || ಪಲ್ಲ ||
ಖರತರ ರವಿಕರ | ದುರಿಗೆ ದಣಿದೆ ಬಲು ||
ನೆರಳೊಳು ಕ್ಷಣ ಶ್ರಮ | ಪರಿಹರಿಸುವ ನಡಿ || ೧ ||
ಸುಂದರ ಸರೋವರ | ದಿಂದಲಿ ಬರುವ ಸು- ||
ಗಂಧ ಸೀತಲವಾದ | ಮಂದ ಎಲರಿನೊಳು || ೨ ||
ಅಲಿಕುಲ ಚುಂಬಿತ | ದಲರಿಲಿ ಬಾಲೆಯು- ||
ರೊಲಿದು ನಲಿದು ಮಾಲೆ | ಗಳನು ರಚಿಸುವಲ್ಲಿ || ೩ || ‡

---

* ಪದದ ಸ್ವರ—ನಿ ಸ ರಿ ರಿ ಗಾ ಮ ಮ ಪಾ | ಮಪಮಗರಿಸ | ರೀಪ್ಪಾಮಪಮಗರಿಸ ||ಪಲ್ಲ||
ಮಪ ಮಪ ನಿನಿ ಸಸ| ರೀ ಗ ರಿ ಸ ನೀ ನೀ ಧ ಪ | ಪಾ-ಪಾ-ಪಾ- ಸಾನಿ ಧಪ ಸಾ ನಿ ಧಪಮಗರಿಸ

‡ ईषदीषच्चुम्बितानि भ्रमरैः सुकुमारकेसरशिखानि
अवतंसयन्ति दयमानाः प्रमदाः शिरीषकुसुमानि॥ ४ ॥

**ಸೂತ್ರ**—ಆರ್ಯಳೆ, ಸರ್ವೋತ್ಕೃಷ್ಟವಾಗಿ ಗಾಯನ ಮಾಡಿದಿ. ಆಹಾಹಾ! ನಿನ್ನ ಮನೋರಮ ಸ್ವರಕಲ್ಪನೆಯಿಂದ ಜನರ ಚಿತ್ತವೃತ್ತಿಗಳೆಲ್ಲ ತಲ್ಲೀನವಾಗಿ ರಂಗಭೂಮಿಯು ಚಿತ್ರದಂತೆ ತಟಸ್ಥವಾಯಿತು ನೋಡಿದೆಯಾ? ಇನ್ನು ಯಾವ ನಾಟಕವನ್ನಾಡಿ ಇವರನ್ನು ತೃಪ್ತಿಬಡಿಸುವ?

**ನಟಿ**—ಮೊದಲೇ ತಾವು ಹೇಳಲಿಲ್ಲವೆ, ಅಭಿಜ್ಞಾನ ಶಾಕುಂತಲನಾಟಕ ವೆಂತ?

**ಸೂತ್ರ**—ಆರ್ಯಳೆ, ಒಳ್ಳೇ ನೆನಪು ಮಾಡಿದಿ, ಈ ಹೊತ್ತು ನಿಜವಾಗಿ ವಿಸ್ಮೃತಿಯಾಗಿತ್ತು ಬಲ್ಲಿಯಾ. ಕಾರಣವೇನಂದರೆ:—

( ಕಂದ )

**ಸುಡಿಯಿಂ ಪಿಡಿಯಲ್ಬಾರದ |**
**ಕಡು ಸವಿಗೊಡೆ ನಿನ್ನಯು ಗಾಯನವೊಯ್ತ್ತು ಮನಂ ||**
**ಪೊಡವಿಪ ದುಷ್ಯಂತನ ನೋ- |**
**ಡಡವಿಗೆ ತಂದೀ ವೇಗದ ಸಾರಂಗದ ಓಲ್ || || ೫ ||**

( ಇಬ್ಬರೂ ಹೊರಟು ಹೋಗುತ್ತಾರೆ. )

( ಇದು ಪ್ರಸ್ತಾವನೆ. )

( ಇಷ್ಟರಲ್ಲಿ ಮುಂದೆ ಚಿಗರಿಯೋಡುತ್ತದೆ; ಹಿಂದೆ ರಥದಲ್ಲಿ ದುಷ್ಯಂತರಾಜನು ಚಾಪಕ್ಕೆ ಬಾಣವನ್ನು ಹೂಡಿ ಸಾರಥಿಸಮೇತನಾಗಿ ಬರುತ್ತಾನೆ. )

**ಸಾರಥಿ**—ಆರ್ಯನ್, ನೀನು ಈಗ ಹ್ಯಾಗೆ ಶೋಭಿಸುತ್ತಿಯೆಂದರೆ:—

( ಪುಷ್ಪಿತಾ. )

**ಚಿಗುರೆ ಮುಖವ ನೋಡಿ ನಿನ್ನ ನೋಡಲ್ |**
**ತೆಗೆದು ಬಿಡಲ್ ಕಣೆಗಳ್ಗುಣಕ್ಕೆ ಪೂಡಲ್ ||**
**ಮೃಗವನುಸರಿಪಂ ಪಿನಾಕಿಯೆಂಬೊಲ್ |**
**ಮೊಗನೆಸೆದಿಹುದೆಂತು ಪೇಳ್ವೆ ನಿನ್ನೊಳ್ || ೬ ||**

**ಅರಸು**—ಆಹಾಹಾ! ಸಾರಥೀ, ಅದು ನಮ್ಮನ್ನು ಹಿಂಬಾಗಿ ನೋಡು ವಾಗ ಏನು ರಮಣೀಯವಾಗಿ ತೋರುತ್ತದೆ, ನೋಡಿದೆಯಾ?

( ಹರಿಣೀ. )

**ತಿರುತಿರುಗಿ ಹಿಂನೋಡುತ್ತೋಡುತ್ತಲೆಮ್ಮಯ ತೇರನಂ |**
**ತುರುಕುತಿಹುದೈ ಪಶ್ಚಾರ್ಧಂ ಪೂರ್ವಕಾಯದೊಳಳ್ಕಿ ತಾಂ ||**
**ಶರಪತನಕಂಜುತ್ತೆಂಜಲ್ದರ್ಭವರ್ಧನೆ ಕಚ್ಚಿ ಬಿ- |**
**ಟ್ಟಿರದೆ ನೆಲದೊಳ್ ಹಾರುತ್ತಾರುತ್ತೆ ಬಾನಿನೋಳಿರ್ಪುದೈ || ೭ ||**

ಎಲೋ ಸೂತಾ, ಈ ಸಾರಂಗವು ನಮ್ಮನ್ನು ಬಹು ದೂರ ತೆಗೆದು ಕೊಂಡು ಬಂದಿದೆ; ಹತ್ತರಹತ್ತರವಾಗಿ ಬಂದ ಎರಳೆಯು ದೂರವಾಗಿ ಹೋಯಿತು; ನೋಡಿದೆಯಾ, ಈಗ ಕಾಣುವದಕ್ಕೆ ಸಹ ಪ್ರಯಾಸವಾಗಿದೆ.

**ಸಾರಥಿ**—ಆಯುಷ್ಮನ್, ಈ ಪ್ರದೇಶವು ಬಹು ತಗ್ಗುಮಿಟ್ಟೆಯಾದ ಕಾರಣ ರಶ್ಮಿಗಳನ್ನು ಬಿಗಿದು ಹಿಡಿದಿದ್ದೆ, ಆದ್ದರಿಂದ ವೇಗವು ಮಂದವಾಗಿ ಎರಳೆ ಬಹಳ ದೂರವಾಯಿತು. ಇನ್ನು ಮೇಲೆ ಸವನೆಲ ಹತ್ತಿದೆ; ಅದನ್ನು ಸಮೀಪಿಸಲಿಕ್ಕೆ ಕಠಿಣವಿಲ್ಲ.

**ಅರಸು**—ಹಾಗಾದರೆ ರಶ್ಮಿಗಳನ್ನು ಸೈಲು ಬಿಡು!

**ಸಾರಥಿ**—ಮಹದಾಜ್ಞಾ. (ರಥಕ್ಕೆ ವೇಗವನ್ನು ಕೊಟ್ಟು) ಆಯುಷ್ಮನ್, ಈಗ ನೋಡು, ರಶ್ಮಿಗಳನ್ನು ಸೈಲು ಬಿಟ್ಟ ಕ್ಷಣವೇ ಕುದುರೆಗಳು ಹ್ಯಾಗೆ ಓಡುತ್ತವೆ.

( ಅಶ್ವಧಾಟಿ )

**ಸೈಲ್ಬಿಟ್ಟಿರಲ್ ರಶ್ಮಿಗಳ್ ಕರ್ಣಗಳ್ ನಿಚ್ಚಳಂಗೈದು ಪುಚ್ಛಂ**
**ನಿಗಚರ್ಚುತ್ತೆ ಮೇಣ್ |**
**ಜೋಲ್ಬಿದ್ದ ಗೋಣ್ಣೂದಲಂ ಗಾಳಿಗೇಳುತ್ತೆ ಬೀಳ್ವಂತಿರಲ್**
**ಮಾರುಪೇರ್ಜಾಪಿನಿಂ ||**
**ಕಾಲ್ಬಟ್ಟೆ ಹೆಗ್ಗುರಂಗಳ್ ಬೀಸಲಾ ಪೆಟ್ಟಿನಿಂದೇಳ್ವ ಧೂಳ್**
**ತಮ್ಮನಂ ಮುಟ್ಟದಂ- |**
**ತೋಲ್ಬಿದ್ದಿರಲ್ ಸಾಗರಂ ತಾಳ್ವವೇನೀರ್ಷೆ ಸಾರಂಗದೋಳೀ**
**ತುರಂಗಂಗಳು || ೮ ||**

**ಅರಸು**—( ಹರುಷದಿಂದ ) ಶಾಬಾಸ್, ಶಾಬಾಸ್! ಈ ಕುದುರೆಗಳು ಸೂರ್ಯನ ಕುದುರೆಗಳನ್ನೂ ಅತಿಕ್ರಮಿಸುವವು! ರಥದ ಅತಿಶಯವಾದ ವೇಗದಿಂದ ಏನು ಚಮತ್ಕಾರವಾಗುತ್ತದೆ ನೋಡಿದೆಯಾ?

( ಮದಿರಾ. )*

**ಚಕ್ಷುಗಳೀಕ್ಷಿಸದಿರ್ಪತಿಸೂಕ್ಷ್ಮತೆ ಬಿಟ್ಟು ತೊಟ್ಟಿರೆ ವಿಶಾಲತೆ**
**ಯುನ್ನೊಂ-|**
**ದೀಕ್ಷಣದೊಳ್ ತ್ವರದಿಂ ಭರದಿಂದೆದಿರ್ಬರ್ಪುತಿರ್ಪ**
**ಗಿಡಗಂಟೆಯು ನೋಡೆ-||**
**ಲ್ಲಾ ಕ್ಷಿತಿಯುಂ ಪರಿಯಲ್ ಕೆಲದೋಳಿಹ ವಕ್ರ ಚಕ್ರಗತಿಯಿಂ**
**ಸರಳಾಗಲ್ |**
**ಪಕ್ಷಿಗೆ ಸಾಕ್ಷಿಯು ತೇರಿಗೆ ದೂರುವದೇನು ಕಾಣಿಸದು**
**ಸಾರಥಿಯೇ ಕೇಳ್ || ೯ ||**

**ಸಾರಿಥಿ**—ನೋಡು ಈಗ ಕೈಪಾಡಿನಲ್ಲಿ ಬಂದಿದೆ.

**ಅರಸು**—( ಗುರಿ ಇಡುತ್ತಾನೆ. )

( ಇಷ್ಟರಲ್ಲಿ ಹಿಂದೆ ಶಬ್ದವಾಗುತ್ತದೆ. ) ಹೇ ರಾಜನ್, ಹೇ ರಾಜನ್, ಆಶ್ರಮದೊಳಗಿನ ಚಿಗುರೆ ಕಂಡೆಯಾ? ಹೊಡೆಯತಕ್ಕದ್ದಲ್ಲ! ಹೊಡೆಯ ತಕ್ಕದ್ದಲ್ಲ!

**ಸಾರಥಿ**—( ಕಿವಿಗೊಟ್ಟು ಕೇಳಿ ) ದೊರೆಯೇ, ನಮ್ಮ ಬಾಣದಳತೆ ಯಲ್ಲಿಯೆ ಚಿಗುರೆ ಬಂದಿದೆ; ಪರಂತು ನಡುವೆ ಮೂವರು ತಪಸ್ವಿಗಳು ಬಂದು ನಿಂತಿದ್ದಾರೆ.

**ಅರಸು**—( ಗಾಬರಿಗೊಂಡು ) ಹಾಗಾದರೆ ರಥವನ್ನು ನಿಲ್ಲಿಸು. ಬೇಗ ನಿಲ್ಲಿಸು!

**ಸಾರಥಿ**—ಮಹಾರಾಜ್ಞಾ. ( ರಥವನ್ನು ನಿಲ್ಲಿಸುತ್ತಾನೆ. )

( ಇಷ್ಟರಲ್ಲಿ ಮೂವರು ಋಷಿ ಶಿಷ್ಯರು ಬರುತ್ತಾರೆ. )

**ಋಷಿ**—ಹೇ ರಾಜನ್, ಆಶ್ರಮದೊಳಗಣ ಚಿಗುರೆ ಕಂಡೆಯಾ? ಹೊಡೆಯತಕ್ಕದ್ದಲ್ಲ. ನೋಡು:—

---

* ಮದಿರಾ ವೃತ್ತದ ಲಕ್ಷಣಕ್ಕೆ ಈ ವೃತ್ತದ ಲಕ್ಷಣವು ಸರಿ ಹೋಗುವದಿಲ್ಲ.

( ಮಾಲಿನೀ. )

**ಅರಳುಗಳಲಿ ಕಿಚ್ಚಂ ಚುಚ್ಚಿದೊಲ್ ವಜ್ರಪೋಲ್ವ |**
**ಸರಳನೆಸೆಯ ಬೇಡೈ ಕೋಮಲಾಂಗಕ್ಕೆ ಚೆಲ್ವ ||**
**ಎರಳೆಯ ಮೃದುಜೀವಕ್ಕಲ್ಲ ನಿನ್ನಸ್ತ್ರ ವ್ಯರ್ಥ ||**
**ದುರುಳರಿನುರೆ ಪೀಡಾ ಪಟ್ಟರಂ ಪಾಲನಾರ್ಥ || ೧೦ ||**

ಆದ್ದರಿಂದ ಬಾಣವನ್ನು ಹಿಂದಕ್ಕೆ ತೆಗೆ ಕಂಡೆಯಾ. ನಿನ್ನಂಥ ಧರ್ಮಿಷ್ಠ ನಾದ ರಾಜನಿಗೆ ಇದು ಉಚಿತವಲ್ಲ.

**ಅರಸು**—ಇಕ್ಕೋ ನೋಡಿ, ಹಿಂದಕ್ಕೆ ತೆಗೆದಿದ್ದೇನೆ. ( ಬಾಣವನ್ನು ತೆಗೆದು ಬತ್ತಳಿಕೆಯಲ್ಲಿ ಸೇರಿಸುತ್ತಾನೆ. )

**ಋಷಿ**—ಭಾಪುರೆ ರಾಜನ್, ಪುರವಂಶ ಪ್ರದೀಪನಾದಂಥ ಪುರುಷ ನಿಗೆ ಇದು ಯೋಗ್ಯವೇ ಸರಿ.

||ಕಂದ|| **ಪುರವಂಶ ದೀಪಕನೆ ನಿನ- |**
**ಗಿರುತಿಹದುಚಿತಮಿದೇ ನಡತೆಯು ಕೇಳ್ನಿನ್ನ ||**
**ಸರಿಗುಣತಾಳುವ ಸುಂದರ |**
**ತರಪುತ್ರಂ ಪುಟ್ಟಿ ಚಕ್ರವರ್ತಿಯೆನಿಸುವಂ || ೧೧ ||** *

**ಉಳಿದ ಇಬ್ಬರು**—( ಎರಡೂ ಕೈಗಳನ್ನು ಮುಂದಕ್ಕೆ ಚಾಚಿ ) ಸರ್ವಥೈವ ಚಕ್ರವರ್ತಿಪುತ್ರನ ಪ್ರಾಪ್ತಿಯಾಗಲಿ.

**ಅರಸು**—ತಥಾಸ್ತು. ತಮ್ಮ ಆಶೀರ್ವಾದವನ್ನು ನಾನು ಶಿರಸ್ಸಿನಲ್ಲಿ ಧಾರಣ ಮಾಡಿದ್ದೇನೆ.

**ಋಷಿ**—ಹೇ ರಾಜನ್, ಇಲ್ಲಿಂದ ಸಮೀಪದಲ್ಲಿಯೆ ಮಾಲಿನೀತೀರದಲ್ಲಿ ಕಣ್ವಮಹಾಮುನಿಗಳಾಶ್ರಮವುಂಟು; ಎರಡನೆಯ ರಾಜಕಾರ್ಯಕ್ಕೆ ಪ್ರತಿ ಬಂಧವಾಗದಿದ್ದರೆ ತಾವು ಅಲ್ಲಿಗೆ ಹೋಗಿ ಅತಿಥಿಸತ್ಕಾರವನ್ನು ಸ್ವೀಕರಿಸ ಬಹುದು; ನಾವು ತಮ್ಮ ಸಂಗಡ ಬರುತಿದ್ದಿವಿ, ಆದರೆ ಗುರುಗಳ ಆಜ್ಞೆಯ ಮಟ್ಟಿಗೆ ಸಮಿಧಾ ತರುವ ನಿಮಿತ್ತ ಹೊರಟಿದ್ದೇವೆ. ಹೇ ಭೂಪತೇ, ಅಲ್ಲಿಗೆ ಹೋದಲ್ಲಿ ಇನ್ನೊಂದು ಮಾತು ತಮಗೆ ಕಂಡು ಬಂದೀತು.

---

* || ಶ್ಲೋಕ || ಜನ್ಮ ಯಸ್ಯ ಪುರೋರ್ವಂಶೇ | ಯುಕ್ತರೂಪಮಿದಂ ತವ |
ಪುತ್ರಮೇವಂ ಗುಣೋಪೇತಂ | ಚಕ್ರವರ್ತಿನಮಾಪ್ನುಹಿ || ೧೧ ||

( ವಸಂತತಿಲಕಾ ).

**ಸರ್ವಂ ತಪೋಧನರ ಕರ್ಮವದೈ ಸುಗಮ್ಯಂ |**
**ನಿರ್ವಿಘ್ನವಾಗಿ ನಡೆದಿರ್ಪುದು ನೋಡು ರಮ್ಯಂ ||**
**ವಿರ್ವೀಕಿಣಾಂಕ ಭುಜದಿಂ ತಿಳಿ ಇಂದು ನಿನ್ನಾ |**
**ಉರ್ವೀಪ್ರಜಂಗಳು ಸುರಕ್ಷಿತರೆಷ್ಟಿದನ್ನಾ || ೧೨ ||**

**ಅರಸು**—ಕುಲಗುರುಗಳಾದ ಕಣ್ವಮಹಾಮುನಿಗಳಾಶ್ರಮವಿಲ್ಲಿಂದ ಸಮೀಪವಿರುವದೋ ?

**ಋಷಿ**—ಅಹುದು ಸಮೀಪದಲ್ಲಿಯೇ ಉಂಟು; ನೋಡು ಇಲ್ಲಿಂದ ಸಹ ಕಾಣಿಸುತ್ತದೆ.

**ಅರಸು**—ಆಶ್ರಮದಲ್ಲಿ ಮುನಿವರ್ಯರಿರುವರೋ ಈಗ ?

**ಋಷಿ**—ಇದೇ ಅವರು ತಮ್ಮ ಮೋಹದ ಕನ್ನಿಕೆಯಾದ ಶಕುಂತಲೆಯನ್ನು ಅತಿಥಿಸತ್ಕಾರಾರ್ಥವಾಗಿ ಆಶ್ರಮದಲ್ಲಿಟ್ಟು ಅವಳ ದೈವವು ಪ್ರತಿಕೂಲವಾಗಿರುವ ಕಾರಣ ಶಾಂತಿಯನ್ನು ಮಾಡುವಗೋಸ್ಕರ ಸೋಮತೀರ್ಥಕ್ಕೆ ಹೊರಟು ಹೋಗಿದ್ದಾರೆ.

**ಅರಸು**—ಒಳ್ಳೇದು, ಅವಳ ದರ್ಶನವೆ ತೆಗೆದುಕೊಂಬುವ; ಅವಳು ನನ್ನ ಭಕ್ತಿಯನ್ನು ಕಂಡು ಮಹರ್ಷಿಗಳಿಗೆ ತಿಳಿಸ್ಯಾಳು.

**ಋಷಿ**—ಇನ್ನು ನಾವು ನಮ್ಮ ಕಾರ್ಯಕ್ಕೆ ಹೋಗುತ್ತೇವೆ. ( ಎಂದು ಆ ಮೂವರು ಋಷಿಶಿಷ್ಯರು ಹೊರಟು ಹೋಗುತ್ತಾರೆ. )

**ಅರಸು**—ಸಾರಥಿಯೆ, ರಥವನ್ನು ನಡಿಸು. ಪುಣ್ಯಾಶ್ರಮದರ್ಶನದಿಂದ ಆತ್ಮವನ್ನು ಪವಿತ್ರವಾಗಿ ಮಾಡುವ.

**ಸಾರಥಿ**—ಮಹದಾಜ್ಞಾ. ( ಪುನಃ ರಥವನ್ನು ನಡಿಸುತ್ತಾನೆ. )

**ಅರಸು**—( ಸುತ್ತಲು ನೋಡಿ ) ಎಲೋ ಸಾರಥಿಯೆ, ನೋಡಿದೆಯಾ, ಇವೆಲ್ಲಾ ಚಿಹ್ನಗಳನ್ನು; ತಪಸ್ವಿಗಳಾಶ್ರಮಸ್ಥಾನವೆಂದು ಹೇಳದಲೆ ತೋರಿ ಬರುತ್ತದೆ ಇಲ್ಲಿ.

**ಸಾರಥಿ**—ಅದು ಹ್ಯಾಗೆ ?

**ಅರಸು**—ಇಕ್ಕೋ, ನಿನಗೆ ಕಾಣುವದಿಲ್ಲವೇ?

॥ ಚಂಪಕಮಾಲಾ ॥

**ಗಿಳಿಗಳ ಗೂಡಿನಿಂ ಗಿಡದ ಬೊಡ್ಡೆಗಳೊಳ್ ಗಳಿತಾಗಿರಲ್ಕೆ ಕಾ- |**
**ಳ್ಗಳು ಬಲಿದಿಂಗುದಿಂಗಳನೆ ಜರ್ಜಿದ ಕಲ್ಗಳು ಕಪ್ಪುಗೊಂಡಿರ- ॥**
**ಲ್ಕೆಳೆ ಎರಳಿಂಗಳಿಲ್ಲುಲಿವಿಗಂಜದೆ ಶಾಂತತೆಯಿಂದೆ ಪೋಗೆ ವ- |**
**ಲ್ಕಲೆಯೊಗೆತಂದು ದಾರಿ ಜಲಧಾರೆಗೊಳಲ್ ತಿಳಿವೆಂ**
**ಮುನಿಸ್ಥಳಂ ॥ ೧೩ ॥**

ಮತ್ತೂ ನೋಡಿದೆಯಾ:—

॥ ಉತ್ಪಲಮಾಲಾ ॥

**ಸ್ವಚ್ಛತೆವೆತ್ತೆಲರ್ನಡೆಯೆ ಕಾಲಿವೆಗಳ್ ಪೊಳೆಯುತ್ತೆ**
**ದಂಡೆಯೊಳ್ |**
**ನಿಚ್ಚದಿ ವೃಕ್ಷಮೂಲಗಳನುಂ ತೊಳೆಯಲ್ಕೆಳೆ ಪಲ್ಲವಂಗಳಾ ॥**
**ಹಚ್ಚನ ಬಣ್ಣ ಹೋಮುಘೃತಧೂಮದಿ ಕೆಟ್ಟಿರೆ, ಕೊಯ್ದು**
**ದರ್ಭದೊಳ್ |**
**ಬೆಚ್ಚದೆ ಶಂಕೆಬಿಟ್ಟೆಳೆ ಮೃಗಂಗಳು ಮೇಯುಲಿದಾಶ್ರಮ**
**ಸ್ಥಳಂ ॥ ೧೪ ॥**

**ಸಾರಥಿ**—ಸೈ ಸೈ !

**ಅರಸು**—( ಆಶ್ರಮದ ಹತ್ತರ ಹೋಗಿ ) ಆಶ್ರಮವಾಸಿಗಳಾದ ಮುನಿ ಜನರುಗಳಿಗೆ ನಮ್ಮಿಂದ ಉಪದ್ರವವಾಗಬಾರದು ಬಲ್ಲೆಯಾ. ಇಲ್ಲಿಯೇ ರಥವನ್ನು ನಿಲ್ಲಿಸು; ನಾನು ಕೆಳಗೆ ಇಳಿಯುತ್ತೇನೆ.

**ಸಾರಥಿ**—( ರಥವನ್ನು ನಿಲ್ಲಿಸಿ ) ಇಳಿಯಬೇಕು ಜೀಯಾ.

**ಅರಸು**—( ರಥದಿಂದಿಳಿದು ) ಸಾರಥಿಯೆ, ಈ ಸ್ಥಾನದಲ್ಲಿ ಒಣ ಜಂಭವು ಕೆಲಸದ್ದಲ್ಲ. ಋಷಿಗಳಾಶ್ರಮದಲ್ಲಿ ಸಾಧಾರಣವಾದ ವಸ್ತ್ರಾಲಂಕಾರಗಳಿಂದೇ ಹೋಗತಕ್ಕದ್ದು ; ಕಾರಣ, ಇವನ್ನು ತೆಗೆದುಕೋ. ( ಎಂದು ಮೈ ಮೇಲಿನ ಆಭರಣಗಳನ್ನೂ ಧನುಷ್ಯಬಾಣಗಳನ್ನೂ ಸಾರಥಿಯ ಕೈಯಲ್ಲಿ ಕೊಡುತ್ತಾನೆ. ) ಸಾರಥಿಯೇ, ಋಷಿಗಳ ದರ್ಶನವನ್ನು ನಾನು ತೆಗೆದುಕೊಂಡು ಬರುವ ತನಕ ಕುದುರೆಗಳಿಗೆ ನೀರು ಕುಡಿಸಿ ಚೆನ್ನಾಗಿ ಅವುಗಳ ಮೈಯನ್ನು ತೊಳೆದುಕೊಂಡು ಬಾ ಹೋಗು.

**ಸಾರಥಿ**—ಒಳ್ಳೇದು, ( ಎಂದು ರಥವನ್ನು ತೆಗೆದುಕೊಂಡು ಹೋಗುತ್ತಾನೆ. )

**ಅರಸು**—( ಅತ್ತಿತ್ತ ತಿರುಗಿ ನೋಡುತ್ತ ) ಆಶ್ರಮದಲ್ಲಿ ಸೇರಲಿಕ್ಕೆ ಇದೇ ದಾರಿಯೇ ಕಾಣುತ್ತದೆ; ಹೀಗೆ ಹೋಗುವ, ( ಎಂದು ಆಶ್ರಮದಲ್ಲಿ ಹೋಗುತ್ತಾನೆ. ಅಷ್ಟರಲ್ಲಿ ಆತನ ಬಲ ಭುಜವು ಹಾರುತ್ತದೆ. ಅದನ್ನು ಕುರಿತು ಮಾತನಾಡುತ್ತಾನೆ. )

( ಕಂದ )

**ಶಾಂತವಿದಾಶ್ರಮ ಪವನಿ- ।**
**ನ್ನೆಂತುಂಟಿಲ್ಲಿ ಫಲಮೇನಿಹದು ಬಲದ ಭುಜಂ ॥**
**ಇಂತ್ಯಾತಕೆ ಪಾರುವದಿ- ।**
**ನ್ನೆಂತಲ್ಲಿಯಾದರುಂ ತಪ್ಪುವದೆ ಭವಿಷ್ಯಂ ॥ ೧೫ ॥**

( ಇಷ್ಟರಲ್ಲಿ ಹಿಂದೆ ಶಬ್ದವಾಗುತ್ತದೆ. )

(ಗೆಳತಿಯರಾ, ಹೂವಿನ ಗಿಡಗಳಿಗೆ ನೀರು ಚಿಮ್ಮಡಿಸುವ ಬನ್ನಿರೆ.)

**ಅರಸು**—( ಆಲಿಸಿ ) ಓಹೋ, ಈ ಉಪವನದ ದಕ್ಷಿಣ ದಿಕ್ಕಿನಲ್ಲಿ ಕೋಮಲವಾದ ಎಳೆ ಹೆಂಣಿನ ಸ್ವರವು ಕೇಳಬರುತ್ತದೆ. ಅತ್ತಲೇ ಹೋಗುವ. ( ಎಂದು ನಡೆಯಲಾರಂಭಿಸುತ್ತಾನೆ. ಇಷ್ಟರಲ್ಲಿ ಶಕುಂತಲಾ ಎಂಬವಳು ಇಬ್ಬರು ಸಖಿಯರಿಂದ ಕೂಡಿಕೊಂಡು ಕೆಳಗೆ ಬರೆದ ಪದವನ್ನು ಹಾಡುತ್ತ ಬರುತ್ತಾಳೆ. )

**( ಪದ )** *

ದಾಟಿ—" ಯಾಕೆ ತಡಾ ಸುಂದರಾಂಗಾ । ನ್ಯಾಕೆ ಕರತಾರೆ ॥ ಬೇಕಾಪಂಥಾ ವಸ್ತ್ರಾನೀವೆ ಬ್ಯಾಗ ಪೋಗಿಬಾರೆ " ॥ ಎಂಬಪದದಂತೆ.

**ನೀರು ಚಿಮ್ಮಡಿಸುವಾ । ಬನ್ನಿರೆ ಬನದೊಳು ॥ ಪಲ್ಲ ॥**
**ಸಾರಸಸಖನುರೆ ಮೀರಿದ ಬಿಸಿಲೊಳು ॥ ಅನುಪಲ್ಲ ॥**
**ಜುಳುಜುಳು ಹರಿಯುವ । ಝರಿಗಳ ನಿರ್ಮಲ ।**
**ಜಲಗಳು ಪೊಳೆವವು । ಕಲಶವ ತುಂಬಿ ಕೋ- ।**
**ಮಲಕಿಸಲಯುಗಳು । ನಳಿನಳಿಸುವ ಓಲು ॥ ೧ ॥**

---

* ಈ ಪದ್ಯ ಮೂಲದಲ್ಲಿ ಇಲ್ಲ.

**ಶಾವಂತಿಗೆ ಮೊಲ್ಲೆ । ಸಾಲಿಡಲೆಳೆಯೆಳೆ ।**
**ಹೂವಿನ ಗಿಡಗಳು । ಹಾದಿಯ ಕೆಲದೊಳು ।**
**ತೀವಿರೆ ಮೊಗ್ಗೆಗಳು । ತೆರೆದರಳುವ ಓಲು ॥ ೨ ॥**
**ತಳಿ ಹಾಕಿರೆ ಬನ- । ದೊಳು ಬಿಳಿಮುಳಲಿಸ ।**
**ಥಳಥಳಿಸುವ ಪಥ- । ದೊಳು ಬಲು ದಣಿಯುತ ।**
**ನೆಳಲೊಳತಿಥಿಗಳು । ಬರಲು ಸುಖಿಪ ಒಲು ॥ ೩ ॥**

ಗೆಳತಿಯರಾ ಇಲ್ಲಿ ಬನ್ನಿರೇ, ಇಲ್ಲಿ ಬನ್ನಿ.

**ಅರಸು**—( ಸ್ವಲ್ಪ ಮುಂದಕ್ಕೆ ಹೋಗಿ ) ಓಹೋ! ಇವರು ತಪಸ್ವಿಗಳ ಕನ್ನಿಕೆಯರು; ತಮ್ಮ ತಮ್ಮ ಶಕ್ತ್ಯಾನುಸಾರ ಸಣ್ಣ ಸಣ್ಣ ಕಲಶಗಳನ್ನು ತೆಗೆದುಕೊಂಡು ಹೂವಿನ ಗಿಡಗಳಿಗೆ ನೀರು ಚಿಮ್ಮಿಡಿಸುವೆವೆಂದು ಬರುತ್ತಾರೆ. ( ಚೆನ್ನಾಗಿ ನೋಡಿ ) ಆಹಾ! ಏನು ಮಧುರವಯ್ಯಾ ಇವರ ದರ್ಶನ!

( ಪ್ರಹರ್ಷಿಣೀ. )

**ಅಂತಸ್ತಂಗಳಲಿಹ ಚೆಲ್ವ ಪೆಣ್ಗಳಿಂಗೆ- ।**
**ಲ್ಲಿಂತಾ ಕಾಂತಿಯು ಗುಣದಿಂದೆ ಗೆಲ್ವವಯ್ಯ ॥**
**ಕಾಂತಾರಂ ಪಡೆದಿಹ ಬಳ್ಳಿ ತೋಟದೊಳ್ ಬಲ್ ।**
**ಚಿಂತಾಕಷ್ಟದಿ ಬೆಳಸಿರ್ಪವನ್ನೆ ಸೈ ಸೈ ॥ ೧೭ ॥**

ಒಳ್ಳೇದು, ಇಲ್ಲಿಯೇ ಈ ವೃಕ್ಷದ ನೆರಳಿನಲ್ಲಿ ಕುಳಿತು ಅವರು ಏನೇನು ಮಾತುಗಳಾಡುವರೊ ಕೇಳುವ. ( ಎಂದು ಅವರನ್ನು ಒಂದೇ ದೃಷ್ಟಿಯಿಂದ ನೋಡಿಕೊಳ್ಳುತ್ತಿರುತ್ತಾನೆ. )

( ಆ ಮೇಲೆ ಶಕುಂತಲೆಯೂ ಸಖಿಯರೂ ಹೂವಿನ ಗಿಡಗಳಿಗೆ ನೀರು ಚಿಮ್ಮಿಡಿಸುತ್ತ ತಿರುಗಾಡುತ್ತಾರೆ. )

**ಶಕುಂ**—ಗೆಳತಿಯರಾ, ಇಲ್ಲಿ ಬನ್ನಿರೆ.

**ಒಬ್ಬ ಸಖಿಯು**—ಸಖಿಯೇ ಶಕುಂತಲಾ, ಕಾಶ್ಯಪ* ತಾತನ ಮಮತೆ ನಿನ್ನಲ್ಲಿಗಿಂತಲೂ ತೋಟದ ಗಿಡಗಳಲ್ಲಿ ಹೆಚ್ಚಾಗಿ ತೋರುತ್ತದೆ.

**ಶಕುಂ**—ಅನಸೂಯಾ, ಅದು ಯಾವ ಮಾತಿನ ಮೇಲೆ?

---

* ಕಾಶ್ಯಪನೆಂದರೆ ಕಣ್ವ ಋಷಿಯು.

**ಅನ**—ಮಲ್ಲಿಗೆ ಹೂವಿನಂತೆ ನಿನ್ನ ಕೋಮಲವಾದ ಕಾಯವಿರಲಿಕ್ಕೆ ನಿನ್ನನ್ನು ಈ ಗಿಡಗಳಿಗೆ ನೀರು ಹಾಕಲಿಕ್ಕೆ ಹಚ್ಚಿದ್ದಾನೆ.

**ಶಕುಂ**—ಅನಸೂಯಾ, ನಾನು ಕೇವಲ ತಾತನ ಹೇಳಿಕೆಯಿಂದ ಈ ಕೆಲಸವನ್ನು ಮಾಡುತ್ತೇನಂತಲ್ಲ. ಈ ಗಿಡಗಳು ನನ್ನ ಅಣ್ಣತಮ್ಮಂದಿರೆಂದು ತಿಳಿಯುತ್ತೇನೆ. (ಎಂದು ನೀರು ಚಿಮ್ಮಡಿಸುತ್ತ ಮುಂದಕ್ಕೆ ಬರುತ್ತಾಳೆ.)

**ಇನ್ನೊಬ್ಬ ಸಖಿಯು**—ಸಖಿಯೇ ಶಕುಂತಲಾ, ಬೇಸಿಗೆಯಲ್ಲಿ ಹೂ ಗೊಡುವ ಗಿಡಗಳಿಗೆಲ್ಲಾ ನೀರಾಯಿತು; ಇನ್ನು ಮೇಲೆ ಇತ್ತಲಾಗಿನ ಗಿಡಗಳಿಗೆ ಯದ್ಯಪಿ ಹೂವಿನ ಭರ ತೀರಿದ್ದರೂ ನೀರು ಚಿಮ್ಮಡಿಸುವ; ಭೇದವಿಲ್ಲದೆ ಎಲ್ಲವಕ್ಕೂ ಸಮನಾಗಿ ನೀರು ಹಾಕುವದುಚಿತವಾಗಿದೆ.

**ಶಕುಂ**—ಹೌದವ್ವ. (ಎಂದು ಪುನಃ ನೀರು ಚಿಮ್ಮಡಿಸಲಾರಂಭಿಸುತ್ತಾಳೆ.)

**ಅರಸು**—ಒಹೋ! ಕಣ್ವ ಋಷಿಗಳ ಕನ್ನಿಕೆ ಶಕುಂತಲಾ ಎಂಬವಳು ಇವಳೇ ಕಾಣುತ್ತಾಳೆ; ಅಯ್ಯೋ! ಕಣ್ವ ಋಷಿಗಳು ದೊಡ್ಡವರು ನಿಜ; ಅದರೂ ಅವರಿಗೆ ಯುಕ್ತಾಯುಕ್ತ ವಿಚಾರವಿಲ್ಲ; ಇಂಥ ಹೆಣ್ಣನ್ನು ಆಶ್ರಮ ಕಷ್ಟಕ್ಕೆ ಹಚ್ಚಬಹುದೆ!

(ವಂಶಸ್ಥ.)

**ಇದೈ ವಪುಂ ತಾಂ ಮೊದಲೇ ಮನೋಹರಂ |**
**ಇದಕ್ಕೆ ಮೇಣ್ ತಾಪಸಗಷ್ಟ ದುಸ್ತರಂ ||**
**ಅದೃಷ್ಟಿಯಿಂ ಕೊಯ್ವರೆ ಬನ್ನಿ ರುಕ್ಷವಂ |**
**ಮೃದುತ್ವವೆತ್ತುತ್ಪಲಪತ್ರಧಾರದಿಂ || ೧೮ ||**

ಈ ವೃಕ್ಷದ ಮರೆಗೆ ನಿಂತು ಇವಳನ್ನು ಚೆನ್ನಾಗಿ ನೋಡುವ. (ಗಿಡದ ಮರೆಗೆ ನಿಲ್ಲುತ್ತಾನೆ.)

**ಶಕುಂ**—ಸಖಿಯೆ ಅನಸೂಯಾ, ನೋಡೆ, ಪ್ರಿಯಂವದಾ ನನ್ನ ಕುಪ್ಪುಸವನ್ನು ಎಷ್ಟು ಬಿಗಿದು ಕಟ್ಟಿದ್ದಾಳೆ! ನನ್ನ ಮೈಯಲ್ಲಾ ನೋಯುತ್ತದೆ; ಸ್ವಲ್ಪ ಸೈಲುಮಾಡೆ.

**ಅನಸೂಯಾ**—ಹೌದೆ! ಎಷ್ಟು ಬಿಗಿತಾಗಿ ಕಟ್ಟಿದ್ದಾಳೆ! (ಎಂದು ಸೈಲು ಮಾಡುತ್ತಾಳೆ.)

**ಪ್ರಿಯಂ**—(ನಗುತ್ತ) ನಿನ್ನ ಪಯೋಧರಗಳು ವಿಸ್ತೃತವಾಗಲಿಕ್ಕೆ ಮೆಲ್ಲಮೆಲ್ಲನೆ ಹೆಚ್ಚಾಗುವ ನಿನ್ನ ತಾರುಣ್ಯವೇ ಕಾರಣವಾಗಿದ್ದೆ; ಅದರ ಮೇಲೆ ಕೋಪಿಸು, ನನ್ನ ಮೇಲೆ ಯಾಕೆ?

**ಅರಸು**—(ತನ್ನೊಳಗೆ) ಪ್ರಿಯಂವದೆ ನಿಜವಾಗಿ ನುಡಿಯುತ್ತಾಳೆ. ಇವಳ ವಸ್ತ್ರಾಭರಣಗಳು ಇಷ್ಟು ಬಡತನದವುಗಳಾಗಿದ್ದರೂ ನಿಜಸ್ವರೂಪವು ಮಾಜುವದಿಲ್ಲ.

|| ಪದ ||

ದಾಟಿ—"ಮದನ ಬಾಣಾಕ್ಷಿ ಮೋಹವಿರಲೆ ಮಂಜುಳ ಸುಳಿಗ ರುಳೆ ಎಂಬ ಪದದಂತೆ.

**ಮೋಹದ ವಸ್ತು ತಾ ಮಾಜಲರಿದು |**
**ಮೋಹವೇ ಬಡಿಸುವದು || ಪಲ್ಲ ||**
**ಬಾಹು ಬಿಗಿಯೆ ಕೇ- | ದಾಹತವನು ತೊ- |**
**ಟ್ಟೇಹುಡಗಿಯೊಳ್ಮನ । ಸ್ನೇಹ ಬಯಸುವದು ||ಅನುಪಲ್ಲ||**
**ಎಳೆವೆಣ್ಣು ತಾಳ್ದಿರುವ ಬಡವಸನ । ಅಲ್ಲಿವಳಿಗೆ ಹದನ|**
**ತೊಳಗುವ ಚಿನ್ನದ ಮೈಬಣ್ಣ | ಅಡಗಿದೆ ಬಲು ತಿಣ್ಣ ||**
**ಮೊಲೆಗಳ ಚೆಲ್ವಿಕೆ | ಮುಳುಗಲರಿದು ಪೂ- |**
**ಗಳ ಗುಂಚ್ಛದ ಮ್ಯಾ- | ಲೆಲೆಯನಿಕ್ಕಿದ ವೊಲು || ೧ ||**

---

* सरसिजमनुविद्धं शैवलेनापि रम्यं ।
मलिनमपि हिमांशोर्लक्ष्म लक्ष्मीं तनोति ॥
इयमधिकमनोज्ञा वल्कलेनापि तन्वी ।
किमिव हि मधुराणां मंडनं नाकृतीनाम् ॥

**ಶರೀರದ ಸೊಂಪೀ ಚೈಲದಿ ಮುರಿಯೆ | ಫಣಿಕಿರಿಬೆವರೊಡೆಯೆ|**
**ಕರಮುಖಘಾದಗಳು ತೆರೆಯೆ | ಈ ಉಡಿಗೆಯು ತಿಳಿಯೆ ||**
**ಸರಸಿಯೊಳಗೆ ತವೆ | ಬಿರಿದ ಕಮಲ ಸು- |**
**ತ್ತಿರುವ ಶೈವಲದ | ಪರಿಯುಲೊಪ್ಪಿಹುದೈ || ೨ ||**
**ತರುಣಿ ತಾನುಟ್ಟ ವಸ್ತ್ರವು ನ್ಯೆಯ | ದೊರಕಿಸುವದು ಸಿರಿಯು|**
**ಅರಳುಗಳಿಂ ದೇಂಟಿಗೆ ಸೌಂದರಿಯಾ || ಬರುವದು |**
**ನಿಶಿಪತಿಯು ||**
**ಕರಿಗುರುತವದೊ- | ಪ್ಪಿರುವದಲ್ಲದೆ ಕೆಡ- |**
**ಲರಿದು ವೊದಲೆ ತಾ | ಸರಸವಿರಲು ನೆರೆ || ೩ ||**

**ಶಕುಂ**—( ಎದುರಿನಲ್ಲಿ ನೋಡುತ್ತ ) ಸಖಿಯೇ, ಈ ಕೇಸರೀವೃಕ್ಷದ ಪಲ್ಲವಗಳು ಸ್ವಲ್ಪ ಗಾಳಿಯಿಂದ ಮೆಲ್ಲಮೆಲ್ಲನಲ್ಲಾಡುತ್ತವಷ್ಟೆ; ಅದು ನನ್ನನ್ನು ಬಟ್ಟನಿಂದ ಸನ್ನೆ ಮಾಡಿ ತೀವ್ರದಿಂದ ಕರೆಯುತ್ತದೆಂಬಂತೆ ಕಾಣಿಸುತ್ತದೆ, ಅದರ ಬಳಿಯಲ್ಲಿ ನಾನು ಹೋಗುತ್ತೇನೆ. ( ಎಂದು ಆ ವೃಕ್ಷದ ಹತ್ತರ ಹೋಗಿ ನಿಲ್ಲುತ್ತಾಳೆ. )

**ಪ್ರಿಯಂ**—ಸಖಿಯೇ, ಅಲ್ಲಿಯೇ ಒಂದು ಕ್ಷಣ ಹೊತ್ತು ನಿಲ್ಲು.

**ಶಕುಂ**—ಯಾತಕ್ಕೆ ?

**ಪ್ರಿಯಂ**—ಆ ವೃಕ್ಷಕ್ಕೆ ನೀನೊಂದು ಬಳ್ಳಿಯೇ ಹಬ್ಬಿರುವಂತೆ ಕಾಣಿಸುತ್ತಿ; ಆದ್ದರಿಂದ ಅದು ಬಹು ರಮಣೀಯವಾಗಿ ತೋರುತ್ತದೆ.

**ಶಕುಂ**—ಪ್ರಿಯಂವದಾ ಎಂಬ ಹೆಸರು ನಿನಗೆ ಒಪ್ಪುತ್ತದೆ; ನೀನು ಸವಿಮಾತನಾಡುವವಳು ನಿಜ.

**ಅರಸು**—( ತನ್ನೊಳಗೆ ) ಪ್ರಿಯಂವದೆ ಯಥಾಸ್ಥಿತ ಮಾತನಾಡಿದಳು.

( ಪುಷ್ಪಿತಾಗ್ರಾ ) *

**ಕಿಸಲಯುಗಳ ಪೋಲ್ವ ಕೆಂದುಟಿಂಗಳ್ |**
**ಪೊಸ ಎಳೆಬಳ್ಳಿಯ ಟೊಂಗೆಯಂತೆ ಕೈಗಳ್ ||**
**ಕುಸುಮಕೆ ಸಮ ಲೋಭಿಸಲ್ಕೆ ಯೋಗ್ಯಂ |**
**ಎಸೆಯುವದೀಕೆಯ ಯೌವನಂ ಸುಭೋಗ್ಯಂ ||**

* ಅರ್ಧಸಮವೃತ್ತ.

**ಅನಸೂಯಾ**—ಸಖಿಯೇ ಶಕುಂತಲಾ, ಕೇಸರೀವೃಕ್ಷಕ್ಕೆ ಸ್ವಯಂವರ ವಧುವಿನಂತೆ ಹಬ್ಬಿದಂಥ ನವಮಲ್ಲಿಕಾಲತೆಯನ್ನು ನೀನು ವನಜ್ಯೋತ್ಸ್ನಾ ಎಂಬ ಹೆಸರಿಟ್ಟಿದ್ದೆ; ಅದನ್ನು ಮರೆತು ಬಿಟ್ಟೆಯಾ ?

**ಶಕುಂ**—ಅದನ್ನು ಮರೆತರೆ ನನ್ನ ದೇಹವನ್ನು ಸಹ ಮರೆತೇನು ! (ಎಂದು ಆ ಮಲ್ಲಿಕಾಲತೆಯ ಬಳಿಗೆ ಹೋಗಿ ನಿಂತು) ಅನಸೂಯಾ, ನೋಡಿದೆಯಾ, ಈ ಕೇಸರೀವೃಕ್ಷಕ್ಕೂ ಈ ನವಮಲ್ಲಿಕಾಲತೆಗೂ ಒಳ್ಳೇ ಸಮಯದಲ್ಲಿ ಸಂಯೋಗವಾಗಿದೆ; ಇದಕ್ಕೂ ಹೂವಿನ ಭರ ಬಂದಿದೆ; ಈ ವೃಕ್ಷಕ್ಕೂ ನೂತನಪಲ್ಲವಗಳು ಸುರಿದಿದ್ದಾವೆ. ಹೀಗೆ ಇವೆರಡೂ ಒಂದ ಕ್ಕೊಂದು ಉಪಭೋಗಕ್ಕೆ ಯೋಗ್ಯವಾಗಿ ಒತ್ತಟ್ಟಿಗಿರುವದರಿಂದ ಎಷ್ಟು ಪರಿ ರಮಣೀಯವಾಗಿ ತೋರುತ್ತವೆ ನೋಡೆ ! (ಎಂದು ನೋಡುತ್ತಿರುತ್ತಾಳೆ. )

**ಪ್ರಿಯಂ**—ಅನಸೂಯಾ, ಶಕುಂತಲೆಯು ಆ ಮಲ್ಲಿಕಾಲತೆಯನ್ನು ಒಳ್ಳೇ ಧ್ಯಾನಿಸಿ ನೋಡುತ್ತಾಳೆ! ಇವಳ ಮನಸ್ಸಿನೊಳಗಿನ ಭಾವ ನಿನಗೆ ತಿಳಿಯ ಬಂತೆ ?

**ಅನ**—ನನಗೇನೂ ತಿಳಿಯಲಿಲ್ಲವ್ವ. ನೀ ಹೇಳು ನೋಡುವ !

**ಪ್ರಿಯಂ**—ನಾನು ಹೇಳಲಿಯಾ? ಇವಳ ಮನಸ್ಸಿನೊಳಗೆ ಆ ಮಲ್ಲಿಕಾ ಲತೆಗೆ ಹ್ಯಾಗೆ ಯೋಗ್ಯವಾದ ವೃಕ್ಷವು ಸಿಕ್ಕಿತೊ ಹಾಗೆ ತನಗೂ ತಕ್ಕ ಪುರುಷನು ದೊರೆಯಬೇಕು, ಎಂಬ ಅಭಿಪ್ರಾಯ.

**ಶಕುಂ**—ನಿನ್ನ ಮನಸಿನಲ್ಲಿ ಮಾತ್ರ ಹೀಗೆ ಬಂದಿದ್ದೀತು. ನನ್ನ ಮೇಲೇಕೆ ಹಾಕುತ್ತಿ ! ( ಎಂದು ಸುಳ್ಳು ರೋಷದಿಂದ ಕಲಶವನ್ನು ಕೈಯಿಂದ ಬಿಟ್ಟುಬಿಡುತ್ತಾಳೆ. )

**ಅರಸು**—( ತನ್ನೊಳಗೆ ) ಇವಳು ಋಷಿಕನ್ನಿಕೆಯಾದರೂ ಅನ್ಯಜಾತೀ ಸ್ತ್ರೀಯಿಂದ ಇವಳ ಉತ್ಪತ್ತಿಯಾಗಿರಬೇಕೆಂದು ಕಾಣಿಸುತ್ತದೆ! ಇದಕ್ಕೆ ಸಂದೇಹವಿಲ್ಲ.

( ವಸಂತತಿಲಕಾ. )

**ಆಕಾರಮೀಕ್ಷಿಸಲು ಕ್ಷತ್ರಿಯನಿಂಗೆ ಪಾತ್ರಳ್ !**
**ತಾ ಕಂಡಪಳ್ ತಳಿದೆ ನಾನಭಿಲಾಷೆಯಂ ಕಾ- ||**
**ರ್ಯಾಕಾರ್ಯವನ್ನರಿದವಂ ನೆರೆ ಬಲ್ಲವರ್ ಶಂ- |**
**ಕಾ ಕಂಡಿರಲ್ ಮನದ ವೃತ್ತಿಯೆ ನೈಜಮೆಂಬರ್ ||**

**ಶಕುಂ**—(ಭಯಗೊಂಡು) ಅಪ್ಪಯ್ಯಾ! ಈ ಭ್ರಮರವ ನೋಡಿ! ಈ ಭ್ರಮರವ ನೋಡಿ! ನೀರು ಚಿಮ್ಮಡಿಸಿದಾಕ್ಷಣವೆ ಮಲ್ಲಿಕಾಲತೆಯಿಂದೆದ್ದು ನನ್ನ ಮೋರೆ ಸುತ್ತರಿಯುತ್ತದೆ! (ಒಂದೆಹೊಂದಕ್ಕೆ ಸರಿದು ಭ್ರಮರವು ಬಾಧಿಸಿದಂತ ಭಾವಗಳನ್ನು ತೋರಿಸುತ್ತಾಳೆ.)

**ಅರಸು**—(ತನ್ನೊಳಗೆ) ಶಾಬಾಸ್, ಭ್ರಮರನೇ ಶಾಬಾಸ್! ಧನ್ಯನೋ ನೀನು!

**(ಪದ)**

ಚಾಲಿ—“ಬೆಳಗಾಯ ದ್ಯಾತಿ ಬ್ಯಾನೆರಿಸುತದೊರೆತ್ತೆ ಸುಂದರಾ ‖ ಉಳಿಸೀನ್ನನಾದ ವಂದಿಸುವೆ ದೋಣಾಕ್ಷಿ ಚಂದಿರಾ” ‖ ಎಂಬಂತೆ.

**ಸಿಂ-ಗಾರ ಭ್ರಮರನಯ್ಯಲೊ ನೀ ಧೈವವಂತನೊ।**
**ನೀ ಪಾರಿದತ್ತ ತರುಣಿ ನೋಡುತಿಹಳು ಧನ್ಯನೋ ‖ ಪ ‖**
**ಎಳೆ ಹೆಣ್ಣು ನೀ ಬರಲಂಜಿ ಹಿಂದೆ ಹಿಂದೆ ಸರಿವಳೊ।**
**ಕಡೆ-ಗಣ್ಣ ನೋಟದ ನಯಗಳು ನಿನ್ನೀಕ್ಷಿಸುವಳೊ ‖ ೧ ‖**
**ಮಂ-ಜುಳ ರವದಿಂ ಭರದಿ ಕಿವಿಯ ಬಳಿಗೆ ಬರುವೆಯೊ।**
**ಬಲು-ಸಲುಗೆಯಿಂದಲವಳೊಳು ಏಕಾಂತವೇಳ್ವೆಯೊ ‖ ೨ ‖**

---

* चलापाङ्गां दृष्टिं स्पृशसि बहुशो वेपथुमतीं
रहस्याख्यायीव स्वनसि मृदु कर्णान्तिकचरः
करं व्याधुन्वत्याः पिबसि रतिसर्वस्वमधरं
वयं तत्वान्वेषान्मधुकर हतास्त्वं खलु कृती ‖ २ ‖

ಕಾಶೀ ಕಡೆಯ ಪ್ರತಿಯಲ್ಲಿ ಇದರ ಬದಲು ಬೇರೆ ಶ್ಲೋಕಗಳುಂಟು; ಅವು ಕೆಳಗೆ ಕೊಡಲ್ಪಟ್ಟಿವೆ.

ಲೋಲಾಂ ದೃಷ್ಟಿಮಿತಸ್ತತೋ ವಿತನುತೇ ಸಭ್ರೂಲತಾವಿಭ್ರಮಾ।
ಮಾಭುಗ್ನೇನ ವಿವರ್ತಿತಾ ಬಲಿಮತಾ ಮಧ್ಯೇನ ಕಮ್ರಸ್ತನೀ ‖
ಹಸ್ತಾಗ್ರಂ ವಿಧುನೋತಿ ಪಲ್ಲವಸಭಂ ಶೀತ್ಕಾರಭಿನ್ನಾಧರಾ।
ಜಾತೇಯಂ ಭ್ರಮರಾಭಿಲಂಘನಭಯಾ ವಾದ್ಯೈರ್ವಿನಾ ನರ್ತಕೀ ‖
ಯತೋಯತಃ ಷಟ್ಚರಣೋಽಭಿವರ್ತತೇ। ತತಸ್ತತಃ ಪ್ರೇರಿತ ವಾಮಲೋಚನಾ ‖
ವಿವರ್ತಿತಭ್ರೂರಿಯಮದ್ಯ ಶಿಕ್ಷತೇ। ಭಯಾದಕಾಮಾಪಿ ಹಿ ದೃಷ್ಟಿವಿಭ್ರಮಂ ‖

**ಕೈಯಿಂದ ನಿನ್ನ ನಿವಾರಿಸಲು ಸಖಿಯ ಮಾಳ್ಪೆಯೊ।**
**ಬಲುವಿಂದಲಧರದಮೃತವೀಂಟಿ ತೃಪ್ತನಪ್ಪೆಯೊ ॥ ೩ ॥**

ಶಾಬಾಸ್, ಭ್ರಮರನೇ ಶಾಬಾಸ್! ನಮ್ಮಂಥ ದೈವಹೀನ ಜನರಿಗೆ ಹ್ಯಾಗೆ ಬಂದೀತಪ್ಪಾ ಇಂಥ ವೈಭವ!

**ಶಕುಂ**—ಎಲ್ಲಿ ಹೋದರೂ ಬಿಡಲೊಲ್ಲದಲ್ಲೆ! ನಾನು ಆಚೇ ಕಡೆಯಲ್ಲಿ ಹೋಗುತ್ತೇನೆ. (ನಾಲ್ಕು ಹೆಜ್ಜೆ ಹೋಗಿ) ನನ್ನ ಬೆನ್ನೇ ಹತ್ತಿದೆ. ಬಿಡಿಸಿ ಕೊಳ್ಳಿರೆ! ಬಿಡಿಸಿಕೊಳ್ಳಿರಿ! (ಎಂದು ಚೀರುತ್ತಾಳೆ.)

**ಇಬ್ಬರೂ ಸಖಿಯರು**—(ವಿನೋದದಿಂದ) ನಾವು ಯಾರೇ ನಿನ್ನನ್ನು ಬಿಡಿಸಿಕೊಳ್ಳಲಿಕ್ಕೆ? ದುಷ್ಯಂತರಾಜನನ್ನು ಬೇಕಾದರೆ ಕರೆ. ಆತನೇ ಈ ತಪೋವನವನ್ನು ಸಂರಕ್ಷಣೆ ಮಾಡುತ್ತಾನೆ.

**ಅರಸು**—(ತನ್ನೊಳಗೆ) ಇವರ ದೃಷ್ಟಿಗೆ ಬೀಳಲಿಕ್ಕೆ ಇದೇ ಸಮಯ ಚೆನ್ನಾಗಿದೆ. (ದೊಡ್ಡ ಧ್ವನಿಯಿಂದ) ಅಂಜಬೇಡಿ. (ತನ್ನೊಳಗೆ) ನಾನು ಅರಸನೆಂದು ತಿಳಿದರೆ ಭೀತಿಗೊಂಡಾರು; ಕಾರಣ ಬೇರೊಂದು ಪರಿಯಿಂದ ಮಾತನಾಡುವ.

**ಶಕುಂ**—(ಹಿಂದೆಹಿಂದಕ್ಕೆ ಸರಿಯುತ್ತ ಭ್ರಮರವನ್ನು ನೋಡುತ್ತ) ನಾನು ಇಲ್ಲಿ ಬಂದರೆ ತಾನೂ ಇಲ್ಲಿಯೇ ಬರುತ್ತದೆ; ನನ್ನನ್ನು ಬಿಡುವದಿಲ್ಲೇನೆ ಇದು!

**ಅರಸು**—(ಶೀಘ್ರದಿಂದ ಮುಂದಕ್ಕೆ ಹೋಗಿ, ದೊಡ್ಡ ಧ್ವನಿಯಿಂದ) ಯಾರವನು—

(ಪ್ರಹರಣಕಲಿಕಾ.)

**ಧರೆಗರಸಿರೆ ಪೌರವ ದೊರೆ ಖತಿಯಾ।**
**ದುರುಳರನುರೆ ಶಿಕ್ಷಿಸುತಿರೆ ಮುನಿಯಾ ॥**
**ಅರಿಯದ ಎಳೆ ಕನ್ನಿಕೆಗಳು ಬನದೊಳ್।**
**ತಿರುಗುತಿರಲು ಕಾಡುವನೊದೆವೆನುಕೇಳ್ ॥ ೨೨ ॥**

( ಅರಸನನ್ನು ನೋಡಿ ಮೂವರೂ ಭಯಪಡುತ್ತಾರೆ. )

**ಇಬ್ಬರೂ ಸಖಿಯರು**–ಆರ್ಯರೇ, ಹೇಳುವಂಥಾದ್ದು ಏನೂ ಇಲ್ಲ. [ಶಕುಂತಲೆಯನ್ನು ಬಟ್ಟಿನಿಂದೇ ತೋರಿಸಿ.] ಇವಳು ಭ್ರಮರಕ್ಕೆ ಅಂಜಿದಳು ಇಷ್ಟೇ.

**ಅರಸು**— ( ಶಕುಂತಲೆಯನ್ನು ನೋಡಿ) ಹೇ ಋಷಿಕನ್ನಿಕೆಯೇ, ಆಶ್ರಮದಲ್ಲಿ ಎಲ್ಲಾ ಕ್ಷೇಮವೋ ?

**ಶಕುಂ**—( ಅಂಜಿಕೊಂಡದರಿಂದ ಮೋರೆ ಕೆಳಗೆ ಮಾಡಿ ಸುಮ್ಮನೆ ಇರುತ್ತಾಳೆ. )

**ಅನ**— ಆರ್ಯರ ಬರುವಿಕೆಯಿಂದ ಆಶ್ರಮದಲ್ಲಿ ಯಾವತ್ತೂ ಕುಶಲವಾಗಿದೆ; ಶಕುಂತಲಾ, ಈ ಸಮಯದಲ್ಲಿ ಶ್ರೇಷ್ಠರಾದಂಥ ಅತಿಥಿಗಳ ಲಾಭವಾಗಿದೆ; ಪರ್ಣಕುಟಿಯಲ್ಲಿ ಹೋಗಿ ಪುಷ್ಪಗಳನ್ನೂ ಫಲಗಳನ್ನೂ ತೆಗೆದುಕೊಂಡು ಬಾ ಹೋಗು. ಪಾದಪ್ರಕ್ಷಾಲನಕ್ಕೆ ನೀರು ಇಲ್ಲಿಯೇ ಉಂಟು.

**ಅರಸು**— ನಿಮ್ಮ ಮಧುರವಾದ ಭಾಷಣದಿಂದಲೆ ನಾವು ತೃಪ್ತರಾದೆವು. ಪೂಜಾಫಲದಿಂದೇನು ಪ್ರಯೋಜನ ?

**ಪ್ರಿಯಂ**—ಆರ್ಯರೆ, ಈ ವೃಕ್ಷದ ಸೀತಲವಾದ ಛಾಯೆಯಲ್ಲಿ ಸ್ವಲ್ಪ ಹೊತ್ತು ಕುಳಿತು ವಿಶ್ರಮಿಸಬೇಕು.

**ಅರಸು**—ತಾವೂ ಈ ನಿತ್ಯಕರ್ಮಶ್ರಮದಿಂದ ದಣಿದಿದ್ದೀರಿ. ಸ್ವಲ್ಪ ಕುಳಿತುಕೊಳ್ಳಬೇಕು.

**ಅನ**— ಶಕುಂತಲಾ, ಅತಿಥಿಸತ್ಕಾರವನ್ನು ಮಾಡುವದು ನಮಗೆ ಉಚಿತವಾಗಿದೆ ; ಬಾ ಇಲ್ಲಿ ಕುಳಿತುಕೊಂಬುವ.

**ಶಕುಂ**—( ತನ್ನೊಳಗೆ ) ಈ ಪುರುಷನನ್ನು ನೋಡಿ ನನ್ನ ಮನಸ್ಸಿನಲ್ಲಿ ತಪೋವನಕ್ಕೆ ಅಯೋಗ್ಯವಾದ ವಿಕಾರಗಳೇನು ಕಾರಣ ಬರುತ್ತಿದ್ದಾವಾದೀತು ?

**ಅರಸು**—( ಅವರನ್ನು ನೋಡಿ) ನೀವು ಮೂವರೂ ಒಂದೇ ವಯಸ್ಸಿನವರಿದ್ದು, ರೂಪವತಿಯರಿದ್ದು ಒಬ್ಬರಿಗೊಬ್ಬರು ಗೆಳತಿಯರಾಗಿದ್ದೀರೆಂಬದನ್ನು ನೋಡಿ ಬಹು ಸಂತೋಷಾಶ್ಚರ್ಯವಾಗುತ್ತದೆ.

**ಪ್ರಿಯಂ**—( ಏಕಾಂತದಿಂದ ) ಅನಸೂಯಾ, ಈ ಚಂದ್ರನಂತೆ ಕಾಂತಿಯುಳ್ಳ ಗಂಭೀರಸ್ವರೂಪಿಯಾದ ಚತುರ ಪುರುಷನು ಒಳ್ಳೇ ಪ್ರಿಯ ಮಧುರವಾದ ಮಾತುಗಳನ್ನಾಡುತ್ತಾನೆ. ದಾವಾತನೇ ಈತಾ?

**ಅನ**—ಸಖಿಯೆ, ನನಗೂ ಬಹು ಕೌತುಕವಾಗುತ್ತದೆ; ಅವರನ್ನು ಕೇಳುತ್ತೇನೆ ನಾನು.

**ಪ್ರಿಯಂ**—ಎಲ್ಲಾ ಚೆನ್ನಾಗಿ ಕೇಳಿಕೋ.

**ಅನ**—ಚೆನ್ನಾಗಿ ಹ್ಯಾಗೆ? ಕೇಳುವ ನಡತೆಯ ಪ್ರಕಾರ ಕೇಳತಕ್ಕದ್ದು. ( ಅರಸನ ಕಡೆಗೆ ತಿರುಗಿ ) ಆರ್ಯರೇ, ತಮ್ಮ ಮಧುರತರವಾದ ಮಾತಿನ ಮೇಲಿಂದ ವಿಶ್ವಾಸ ಹುಟ್ಟಿ ಯದ್ಯಪಿ ಏನಾದರೂ ಕೇಳಿದರೆ ತಮಗೆ ಸಿಟ್ಟು ಬರಲಿಕ್ಕಿಲ್ಲೆಂದು ತಿಳಿದು ಒಂದೆರಡು ಪ್ರಶ್ನೆಗಳನ್ನು ಮಾಡುತ್ತೇವೆ; ದಯಮಾಡಿ ಹೇಳಬೇಕು.

( ಪದ )

ದಾಟಿ:—" ನಾಗವೇಣಿ ನಲ್ಲನ ಬಳಿಗೆ ಪೋಗಿ ಕರೆದು ತಾರೆ । ಪೂಗಣೆಯುವ ನಾಗಮಿಸುವ ಬ್ಯಾಗ ಪೋಗಿ ಬಾರೆ " ಇದರಂತೆ ಇರುತ್ತದೆ. )

**ಆವ ರಾಜ ಕುಲದಿ ಜನಿಸಿ । ಅಲಂಕೃತ ಗೈದಿಹಿರೈ ॥**
**ಕೋವಿದರ ಸುವೃತ್ತಗಳನು । ಕೇಳ್ವ ಸುಖವ ನೀಡಿರೈ ॥ ಪಲ್ಲ ॥**
**ದೇವ ನಿಮ್ಮ ವಿಯೋಗದಿಂದ । ಆವ ದೇಶವಿಂದು ॥**
**ಜೀವನಿಲ್ಲದ ಮೀನಗಳೋಲ್ । ಜೀಯ ಬಳಲುತಿಹುದು॥ ೧ ॥**
**ಮುಂದೆ ದಾವ ದೇಶಕೆ ತಾ । ವಿಂದು ತೆರಳುತೀಹಿರೈ ॥**
**ಇಂದು ಉದಯಿಸಿದ ವೊಲು ಆ । ನಂದವ ಬಡಿಸುವಿರೈ ॥ ೨ ॥**
**ಈ ರಣರಣ ಬಿಸಿಲಿನೊಳ್ ಸುಕು । ಮಾರ ದೇಹವನ್ನು ॥**
**ಘೋರಬಡಿಸುವದಕೆ ತಮಗೆ । ಕಾರಣಾವದಿನ್ನು ॥ ೩ ॥**

**ಶಕುಂ**—( ತನ್ನೊಳಗೆ ) ಹೃದಯವೆ ಹಾತೊರೆಯಬೇಡ; ನಿನ್ನ ಮನಸ್ಸಿನಲ್ಲಿದ್ದದ್ದೇ ಅನಸೂಯಾ ಕೇಳುತ್ತಾಳೆ.

**ಅರಸು**—( ತನ್ನೊಳಗೆ ) ಇನ್ನು ಮೇಲೆ ಹೆಸರು ಹೇಳಬೇಕು ಹ್ಯಾಗೆ? ಬಿಡಬೇಕು ಹ್ಯಾಗೆ? ( ಒಂದು ಕ್ಷಣ ಧ್ಯಾನಿಸಿ ) ಪೌರವ ರಾಜನು ನನ್ನನ್ನು ಧರ್ಮಾಧಿಕಾರದ ಮೇಲೆ ನೇಮಿಸಿದ್ದಾನೆ; ಆದಕಾರಣ ಋಷಿಗಳ ಕರ್ಮಗಳು

ನಿರ್ವಿಘ್ನದಿಂದ ನಡೆಯುತ್ತವೋ ಇಲ್ಲವೋ ಎಂಬದನ್ನು ನೋಡುವದರ ಉದ್ದೇಶದಿಂದ ಈ ಧರ್ಮಾರಣ್ಯಕ್ಕೆ ಬಂದಿದ್ದೇನೆ.

**ಅನ**—ಹಾಗಾದರೆ ಇವತ್ತು ಋಷಿಗಳಿಗೆ ಉದಯಕಾಲವೇ ಬಂದ ಹಾಗಾಯಿತು.

**ಶಕುಂ**—( ಶೃಂಗಾರ ಲಜ್ಜೆದೋರುತ್ತಾಳೆ. )

**ಇಬ್ಬರೂ ಸಖಿಯರು**—( ಶಕುಂತಲೆಯ ಹಾಗೂ ಅರಸಿನ ಮನಸ್ಸಿನೊಳಗಿನ ಭಾವಗಳನ್ನು ತಿಳಿದು ಮೆಲ್ಲನೆ ) ಸಖಿಯೇ ಶಕುಂತಲೆ, ಇವತ್ತು ಕಣ್ವತಾತನು ಮನೆಯಲ್ಲಿದ್ದರೆ— ( ಇಷ್ಟೇ ಅರ್ಧ ಮಾತನಾಡಿ ಬಿಡುತ್ತಾರೆ. )

**ಶಕುಂ**—( ರೋಷದಿಂದ ) ಇದ್ದರೇನು ಮಾಡಿರುವನು?

**ಸಖಿಯರು**—ತನ್ನ ಜೀವಕ್ಕೆ ಸಮಾನವಾದಂಥ ಧನವನ್ನು ಕೊಟ್ಟು ಈ ಅತಿಥಿಗಳನ್ನು ಕೃತಾರ್ಥರನ್ನು ಮಾಡಿರುವನು.

**ಶಕುಂ**–( ರೋಷದಿಂದ ) ಹೋಗಿರೆ, ನೀವೇನೇನೊ ಇಲ್ಲದ್ದೊಂದು ಮಾತನಾಡುತ್ತೀರಿ; ನನಗೆ ನಿಮ್ಮ ಮಾತು ಒಂದೂ ಕೇಳಿಸುವದೇ ಇಲ್ಲ.

**ಅರಸು**—( ಸಖಿಯರಿಗೆ ) ನಿಮ್ಮ ಗೆಳತಿಯ ವೃತ್ತಾಂತವನ್ನು ಸ್ವಲ್ಪ ಕೇಳಬೇಕೆಂದು ಮನಸಿನಲ್ಲಿ ಬಂದಿದೆ. ಕೇಳಬಹುದೆ?

**ಸಖಿಯರು**—ತಾವು ಕೇಳತಕ್ಕಂಥಾದ್ದು ನಮ್ಮ ಮೇಲೆ ಅನುಗ್ರಹವೇ ಸರಿ. ಅವಶ್ಯವಾಗಿ ಕೇಳಬೇಕು.

**ಅರಸು**—ಭಗವಾನ್ ಕಣ್ವಋಷಿಗಳು ನಿರಂತರ ಬ್ರಹ್ಮಚರ್ಯ ವ್ರತವನ್ನು ಧಾರಣಮಾಡಿದ್ದಾರೆಂಬುವದು ಪ್ರಸಿದ್ಧವುಂಟು; ಹೀಗಿರಲಿಕ್ಕೆ ನಿಮ್ಮ ಗೆಳತಿಯು ಅವರ ಕನ್ನಿಕೆ, ಇದು ಹ್ಯಾಗೆ?

**ಅನ**—ಹೇಳುತ್ತೇನೆ ಕೇಳಿ. ಕೌಸಿಕವೆಂಬ ಗೋತ್ರದಲ್ಲಿ ಹುಟ್ಟಿದಂಥ ಒಬ್ಬ ಮಹಾ ಪ್ರತಾಪಿಯಾದ ಋಷಿಯುಂಟು.

**ಅರಸು**—ಹೌದು; ನಾನು ಕೇಳಿ ಬಲ್ಲೆ.

**ಅನ**—ಆತನು ನಮ್ಮ ಗೆಳತಿಯ ತಂದೆಯಾಗಬೇಕು; ಮುಂದೆ ಆತನು ತ್ಯಾಗ ಮಾಡಿದ ನಂತರ, ಪಾಲನ ಪೋಷಣ ಮಾಡಿದ್ದರಿಂದ ಕಣ್ವಋಷಿಗಳು ಇವಳ ತಂದೆಗಳಾಗಬೇಕು.

**ಅರಸು**—ತ್ಯಾಗವೆಂಬ ಶಬ್ದದಿಂದ ಕೌತುಕ ಉತ್ಪನ್ನವಾಗಿ ಮೊದಲಿನಿಂದ ಕೇಳಬೇಕೆಂದು ಇಚ್ಛೆಯಾಗಿದೆ.

**ಅನ**—ಹಾಗಾದರೆ ಕೇಳಬೇಕು. ಪೂರ್ವದಲ್ಲಿ ಗೌತಮೀತೀರದಲ್ಲಿ ಆ ಋಷಿಯು ಉಗ್ರವಾದ ತಪಸ್ಸು ನಡಿಸಿದ್ದನು; ಆಗ್ಗೆ ದೇವತೆಗಳು ಭಯಪಟ್ಟು ಆತನ ತಪಶ್ಚರ್ಯವನ್ನು ಭಂಗ ಮಾಡುವ ಉದ್ದೇಶದಿಂದ ಮೇನಕಾ ನಾಮಕಳಾದಂಥ ಅಪ್ಸರಾಸ್ತ್ರೀಯನ್ನು ಕಳುಹಿಸಿದರು.

**ಅರಸು**—ಯಾರಾದರೂ ತಪಶ್ಚರ್ಯವನ್ನು ಮಾಡಲಾರಂಭಿಸಿದ ಕೂಡಲೆ ದೇವತೆಗಳು ಅಂಜಿಕೊಳ್ಳುತ್ತಾರೆ; ಇದು ಸಹಜಿಕವೆ. ಒಳ್ಳೇದು ಮುಂದೇನಾಯಿತು ?

**ಅನ**—ಅಲ್ಲಿಂದ, ವಸಂತಋತುವಿನಾಗಮನದಿಂದ ದಿವಸಗಳು ಪರಮ ರಮಣೀಯವಾಗಿ ಕಾಣಿಸುವವಷ್ಟೇ. ಆ ಕಾಲದಲ್ಲಿ ಯಾವಾಗ್ಗೆ ಅಪ್ಸರಾ ಸ್ತ್ರೀಯು ಬಂದು ಎದುರಿನಲ್ಲಿ ನಿಂತಳೊ ಆಗ್ಗೆ ಆ ಉನ್ಮಾದಕಾರಕವಾದಂಥ ರೂಪವನ್ನು ನೋಡಿ....( ಮುಂದೆ ಹೇಳುವದಕ್ಕೆ ಲಜ್ಜಿತಳಾಗುತ್ತಾಳೆ. )

**ಅರಸು**—ಮುಂದೆ ಹೇಳುವದು ಅವಶ್ಯವಿಲ್ಲ; ಅಂತೂ ಅಪ್ಸರಾಸ್ತ್ರೀಯಿಂದ ಇವಳ ಉತ್ಪತ್ತಿ ?

**ಅನ**—ಸ್ವಾಮಿ, ಇದರಲ್ಲಿ ಏನು ಸಂದೇಹ ?

**ಅರಸು**—ಹಾಗಾದರೆ ಈಗ ಮಾತ್ರ ಎಲ್ಲಾ ಸರಿಯಾಗಿ ಹೊಂದಿತು.

( ಪ್ರಹರ್ಷಿಣಿಯಂತೆ )

**ಪುಟ್ಟುವದೇ ಮನುಜೆಯುಳಿಂದಲಿಂತು ರೂಪಂ |**
**ಪೊಟ್ಟೆಯಲಿಂ ಪಡೆಯುಳಿದೆಂಥ ಕಾಂತಿಯೋ ನಾ ||**
**ದಿಟ್ಟಿಸಿ ನೋಡೆನು ಮುರೆಮಿಂಚಿನಿಂದಲಾದಾ |**
**ಘುಟ್ಟಿಯುದೆಂದಿಗೆ ಬರಬೇಕು ಪೃಥ್ವಿಯಿಂದಾ ||**

( ಶಕುಂತಲೆಯು ಲಜ್ಜೆಗೊಂಡು ಮೋರೆ ಕೆಳಗೆ ಮಾಡುತ್ತಾ

**ಅರಸು**—( ತನ್ನೊಳಗೆ ) ಇನ್ನುಮೇಲೆ ನನಗೆ ಮನೋರಥವನ್ನು ಮಾಡಲಿಕ್ಕೆ ಏನೂ ಚಿಂತೆ ಇಲ್ಲ; ಆದರೂ ಈ ಸಖಿಯರು ಅವಳ ಮನಸ್ಸಿನೊಳಗಿನ ಅಭಿಲಾಷೆಯನ್ನು ತಿಳಿದು ಪರಿಹಾಸ ದೂಡಿದರು; ಆದ್ದರಿಂದ ನನ್ನ ಮನಸು ಭಯಪಡುತ್ತದೆ.

---

* ಇದಕ್ಕೆ ಹೆಸರು ಛಂದಸ್ಸಿನಲ್ಲಿ ದೊರೆಯುವದಿಲ್ಲ. ಲಕ್ಷಣ-ಭ ಭ ಸ ಜ ಗ ಗ.

**ಪ್ರಿಯಂ**—( ಶಕುಂತಲೆಯನ್ನು ನೋಡಿ ನಕ್ಕು, ಅರಸನನ್ನು ಕುರಿತು ಮಾತನಾಡುತ್ತಾಳೆ. ) ತಮ್ಮ ಮನಸಿನಲ್ಲಿ ಮತ್ತೇನಾದರೂ ಪ್ರಶ್ನ ಮಾಡತಕ್ಕದ್ದಿದ್ದೀತು ?

**ಶಕುಂ**—( ಬಟ್ಟನಿಂದ ಆಕೆಯ ತೊಡೆ ಚುಚ್ಚಿ ) ಇದೇನೇ ನಿನ್ನ ನಡತಿ ? ಸುಮ್ಮನಿರು.

**ಅರಸು**—( ಪ್ರಿಯಂವದೆಯನ್ನು ಕುರಿತು ) ನೀವು ನಮ್ಮ ಮನಸ್ಸಿನೊಳಗಿನ ಭಾವ ಚೆನ್ನಾಗಿ ತಿಳಿದಿರಿ; ಉತ್ತಮವಾದ ಚರಿತ್ರವನ್ನು ಕೇಳಬೇಕೆಂಬಾಶೆಯಿಂದ ಮತ್ತೂ ಪ್ರಶ್ನ ಮಾಡಬೇಕೆಂದು ಮನಸಿನಲ್ಲಿ ಬಂದಿದೆ.

**ಪ್ರಿಯಂ**—ತಪಸ್ವಿ ಜನರ ಹತ್ತರ ಏನು ಬೇಕಾದದ್ದು ಕೇಳಬಹುದು; ಅದಕ್ಕೇನೂ ಪ್ರತಿಬಂಧವಿಲ್ಲ.

**ಅರಸು**—ನಾನು ಇಷ್ಟೇ ಕೇಳುತ್ತೇನೆ.

( ಪದ )

ಧಾಟಿ—( " ಸಾಕೊ ಸಾಕೊ ನಿನ್ನ ಸೊಗಸೆಲ್ಲ ನಿನಗಿಂತ । ಬೇಕೋ ಎನ್ನ ಗಂಡ ಭವ್ಯ ರೂಪ " ಎಂಬ ಪದದಂತೆ. )

**ಎಷ್ಟು ದಿವಸಗಳ ತನಕ ನಿಮ್ಮಯ ಸಖಿ ।**
**ಕಷ್ಟವನನುಭವಿಸಲಿ ಬೇಕೆ ? ॥ ಪಲ್ಲ ॥**
**ಹೆಚ್ಚಿನ ತಾಪಸ ನೇಮದಿಂ ಬಯಕೆಗಳ್ ।**
**ಮುಚ್ಚಿ ತನ್ನೊಳು ತಾನೇ ನೊಯ್ಯಬೇಕೆ ? ॥**
**ಇಚ್ಛೆಗಳೆಲ್ಲ ಈ ವ್ರತದಿಂ ಬಿಗಿದ ಗಂಟು ।**
**ಬಿಚ್ಚಿ ತಾನೇ ಹೊರಬೀಳಬೇಕೆ ? ॥ ೧ ॥**
**ಈ ತರುಣಿಯು ಪೋಲು ಕಣ್ಣುಗಳಿರುವಂಥ ।**
**ಈ ತಪೋವನದೆರಳೆಗಳ ಕೂಡ ॥**
**ಸ್ವಾತಂತ್ರ್ಯವಿಲ್ಲದೆ ನಿತ್ಯ ನಿರಂತರ ।**
**ತಾ ತೊಳಲುತಲಿರಬೇಕೇನಯ್ಯೊ ॥ ೨ ॥**
**ಹೊನ್ನಿನ ಬಳ್ಳಿಯು ಹೊರಳುತಿಹದು ಕಾಮು- ।**
**ನೆನ್ನುವ ರವಿಯ ತಾಪಕ್ಕೆ ಕೇಳು ॥**
**ಬಂನಬಡುವದಯ್ಯೊ ಮುನಿಕುಲವನದೊಳಿ- ।**
**ದಂನೆ ಕಾಯಲು ವೃಕ್ಷವಿಲ್ಲವಲ್ಲೆ ॥ ೩ ॥**

**ಪ್ರಿಯಂ**—ಆರ್ಯರೆ, ಇವಳು ಧರ್ಮಾಚರಣದಲ್ಲಿ ಕೂಡ ಪರಾಧೀನಳಾಗಿದ್ದಾಳೆ; ಆದರೂ ತಕ್ಕ ಪುರುಷನನ್ನು ನೋಡಿ ಇವಳನ್ನು ಲಗ್ನ ಮಾಡಿಕೊಡಬೇಕೆಂದು ಇವಳ ತಂದೆಯ ಸಂಕಲ್ಪ ಉಂಟು.

**ಅರಸು**—ಅವರ ಸಂಕಲ್ಪ ದುಃಸಾಧ್ಯವಲ್ಲ; ( ತನ್ನೊಳಗೆಂದುಕೊಳ್ಳುತ್ತಾನೆ ) ಇನ್ನೇನೂ ಭೀತಿ ಇಲ್ಲ. ನನ್ನ ಬಯಕೆಗನುವುದೋರಿತು.

( ಪದ ) *

ದಾಟಿ—( " ನಾಗವೇಣಿ ನಲ್ಲನ ಬಳಿಗೆ ಪೋಗಿ ಕರೆದು ತಾರೆ । ಪೂಗಣೆಯವ ನಾಗಮಿಸುವ ಬ್ಯಾಗ ಪೋಗಿಬಾರೆ " ಎಂಬ ಪದದಂತೆ. )

**ಬೆದರಬ್ಯಾಡ ಮನವೆ ನಿನ್ನ । ಬಯಕೆಗನುವು ದೋರಿತು ॥**
**ಬದಿಗೆ ಬರಲು ಸಂಶಯ ಬಿಸಿ- । ಲ್ಗದುರೆಯಂತೆ**
**ಪೋಯಿತು ॥ ಪಲ್ಲ ॥**
**ನೇಮನಿಷ್ಠೆಯೆಂಬ ವಿಷದ । ನಾಗವಲ್ಲ ಬಾಲೆಯು ॥**
**ಕೋಮಲೆಯು ವಸಂತನೃಪನ । ಕೊರಳ ದುಂಡ**
**ಮಾಲೆಯು ॥ ೧॥**
**ಬ್ಯಾರೆ ಇಂದ್ರಿಯಗಳನು ಸುಡುವಂ- । ಗಾರವಲ್ಲ ಕನ್ನೆಯು ॥**
**ಆರಿಸಿ ತಂದಿರಿಸಿದ ಶೃಂ- । ಗಾರ ರಾಗ ರನ್ನೆಯು ॥ ೨ ॥**
**ಪೊಳೆಯೆ ನಿಸ್ಪೃಹದಾಗಸದೊಳ್ । ನಿಲುಕದಿರುವ ಉಡುಪೆಯು॥**
**ತಿಳಿಯದಿರಲ್ಲಿವಳು ಸ್ಮರನ । ಶಯನಮಂದಿರ ದೀಪೆಯು ॥ ೩ ॥**

**ಶಕುಂ**—( ರೋಷದಿಂದ ) ಅನಸೂಯಾ, ನಾನು ಹೋಗುತ್ತೇನವ್ವ ಇನ್ನ.

**ಅನ**—ಅದ್ಯಾಕೆ?

**ಶಕುಂ**—ನೋಡು, ಈ ಪ್ರಿಯಂವದಾ ಇಲ್ಲದ್ದೊಂದು ಮಾತನಾಡುತ್ತಾಳೆ; ನಾನು ಗೌತಮಮ್ಮನ ಮುಂದೆ ಹೋಗಿ ಹೇಳುತ್ತೇನೆ. ( ಎದ್ದೇಳುತ್ತಾಳೆ. )

---

* भव हृदय साभिलाषं संप्रति संदेहनिर्णयो जातः ।
आशङ्कसे यदग्निं तदिदं स्पर्शक्षमं रत्नम् ॥ २७ ॥

**ಅನ**—ಸಖಿಯೆ, ಬಂದಂಥ ಅತಿಥಿಗಳನ್ನು ಸತ್ಕಾರಗೊಳಿಸದೆ ಹೀಗೆ ಹೋಗುವದು ನಿನ್ನ ನಡತೆಯಲ್ಲ; ಬಾ ಸುಮ್ಮನೆ.

**ಶಕುಂ**—( ಮಾತಾಡದಲೆ ಹಾಗೇ ಹೋಗುತ್ತಾಳೆ. )

**ಅರಸು**—( ಗಾಬರಿಯಾಗಿ ಅವಳನ್ನು ಹಿಡಿಯಬೇಕೆಂದು ಇಚ್ಛಿಸುತ್ತಾನೆ; ಆದರೂ ವಿನಯದಿಂದ ಮನಸಿನಲ್ಲಿಯೇ ಕುದಿಯುತ್ತ ಕುಳಿತುಕೊಳ್ಳುತ್ತಾನೆ. ) ಏನಾಶ್ಚರ್ಯವಿದು ? ಕಾಮೀಜನರ ಮನಸ್ಸಿನ ಸ್ವಭಾವವು ದೇಹದಿಂದ ಮಾಡುವಂಥ ಕೃತಿಗಳ ಪ್ರತಿಬಿಂಬದಂತೆ ಕಾಣಿಸುತ್ತದೆ !

( ಪ್ರಹರಣಕಲಿಕಾ. )

**ತನುವಿಯು ಪಿಡಿಯಲ್ಕಿದೆ ಹವಣಿಸಿ ನೋ- |**
**ಣ್ಪೆನಯದ ಭಯದಿಂ ಸ್ಥಿರತೆಯ ತಳೆಯು- ||**
**ಲ್ಕನಿತರೊಳಗೆ ಪೋಗಿ ತಿರುಗಿ ಬರುವೊಲ್ ।**
**ಮನದೊಳು ತಿಳಿವಾಯ್ತಿದರಿದರಿದು ಬಲ್ || ೨೭ ||**

**ಪ್ರಿಯಂ**—( ಶಕುಂತಲೆಯನ್ನು ಹೋಗಿ ಹಿಡಿದು ) ಸಖಿಯೇ, ಈ ವ್ಯಾಳ್ಯದಲ್ಲಿ ನೀನು ಹೋಗುವದುಚಿತವಲ್ಲ.

**ಶಕುಂ**—( ಹುಬ್ಬು ಗಂಟು ಹಾಕಿ ) ಅದ್ಯಾಕೆ ?

**ಪ್ರಿಯಂ**—ನನ್ನವೆರಡು ಗಿಡಗಳಿಗೆ ನೀನು ನೀರು ಹಾಕಬೇಕಷ್ಟೆ ? ಆ ಸಾಲ ತೀರಿಸು; ಅಲ್ಲಿಂದ ನೀನು ಹೋಗು ಬೇಕಾದಲ್ಲಿ. ( ಹೀಗೆಂದು ಅವಳನ್ನು ಬಲಾತ್ಕಾರದಿಂದ ಹಿಡಿದುಕೊಂಡು ಬರುತ್ತಾಳೆ. )

**ಅರಸು**—ಗಿಡಗಳಿಗೆ ನೀರು ಹಾಕಿಯೇ ಶ್ರಮಗೊಂಡಿದ್ದಾಳೆ. ಅವಳನ್ನು ಮತ್ತೂ ಕೆಲಸಕ್ಕೆ ಹಚ್ಚಬೇಡ ಕಂಡೆಯಾ !

( ಪದ )

ದಾಟೀ—( " ಕಾಡಬ್ಯಾಡವೊ । ಕರುಣದಿ ನೋಡೊ ॥ ಬೇಡಿಕೊಂಬೆನೋ ನೀ ದಯ ಮಾಡೋ " ಈ ಪದದಂತೆ. )

**ಹೇಳಬ್ಯಾಡವೆ ಹೆಚ್ಚಿನ ಕೆಲಸಾ ।**
**ಬಾಲೆ ಬಲು ದಣಿದಿಹಳೆ ಸಹಸಾ || ಪಲ್ಲ ||**
**ನೆತ್ತರಾದವೊಲ್ ಭಾರವ ಕೊಡವು ।**
**ಎತ್ತಿಳುಹಿ ಕೈ ಕೆಂಪೇರಿಹವು ||**

**ನೆತ್ತಿ ಮ್ಯಾಲಿನ ಪೊಳೆವ ಕೇಶಗಳು |**
**ಸುತ್ತಿ ಉಂಗುರದೋಲ್ ಕಾಣಿಸುತಿಹವು || ೧ ||**
**ಮೋರೆ ಮ್ಯಾಲಿನ ಬೆವರಿನ ಸಾಲು |**
**ತೋರುತಲಿದೆ ಸಣ್ಣ ಜಾಲದವೋಲು ||**
**ಮೀರಿ ಬಂದಿಹ ಶ್ವಾಸವ ಬಿಡಲು |**
**ಹಾರುತಲಿದೆ ಮೊತ್ತಣೆದೆ ಶ್ರಮದೋಳು || ೨ ||**
**ಮುಡಿ ಬೆನ್ನಿನ ಮ್ಯಾಲೆ ಬಿದ್ದಿರಲು |**
**ಎಡಗೈಯೊಳು ತಾನಾವರಿಸಿಹಳು ||**
**ಕುಡಿಗಣ್ಣುಗಳರೆದೆರೆದಿಹಳು |**
**ಉಡುರಾಜನ ಪೋಲ್ವ ಮುಖ ಬಾಡಿರಲು || ೩ || ***

ಆದರೆ ಇವಳ ಸಾಲವನ್ನು ನಾನು ತೀರಿಸುತ್ತೇನೆ. ( ಎಂದು ಪ್ರಿಯಂವದೆಯ ಕೈಯಲ್ಲಿ ತನ್ನ ಉಂಗುರವನ್ನು ಕೊಡುತ್ತಾನೆ. )

( ಅನಸೂಯಾಪ್ರಿಯಂವದೆಯರು ಉಂಗುರದ ಮೇಲಿನ ಅಕ್ಷರಗಳನ್ನು ಓದಿ ಬೆರಗಾಗುತ್ತಾರೆ. )

**ಅರಸು**—ಮತ್ತೇನೂ ವಿಶೇಷ ತಿಳಿಯಳಿಕ್ಕೆ ಕಾರಣವಿಲ್ಲ; ರಾಜನು ನನಗೆ ಕೊಟ್ಟಿದ್ದಾನೆ; ನಾನು ಆತನ ಆಶ್ರಿತ ಪುರುಷನಾಗಿದ್ದೇನೆ.

**ಪ್ರಿಯಂ**— ಈ ಉಂಗುರವು ತಮ್ಮ ಬಟ್ಟಿನಲ್ಲಿಯೇ ಇರತಕ್ಕದ್ದು; ಆರ್ಯರ ಮಧುರವಾದ ಭಾಷಣದಿಂದಲೆ ಇವಳು ಸಾಲದಿಂದ ಮುಕ್ತಳಾದಳು. ( ಸ್ವಲ್ಪ ನಕ್ಕು ) ಸಖಿಯೆ, ಮಹಾರಾಯರು ನಿನ್ನನ್ನು ಸಾಲದಿಂದ ಮುಕ್ತಳನ್ನು ಮಾಡಿದರು. ಇನ್ನು ಹೋಗು ಬೇಕಾದರೆ.

---

* स्रस्तांसावतिमात्र लोहिततलौ बाहू घटोत्क्षेपणा-
दद्यापि स्तनवेपथुं जनयति श्वासः प्रमाणाधिकः
बद्धं कर्णशिरीषरोधि वदने घर्माम्भसा जालकं
बन्धे स्रंसिनि चैकहस्तयमिताः पर्याकुला मूर्धजाः ॥ २ ॥

**ಶಕುಂ**—( ತನ್ನೊಳಗೆ ) ಹೌದು; ನನ್ನ ಮನಸ್ಸು ನನ್ನ ಮಾತು ಕೇಳಿದರಷ್ಟೆ! ( ಕೇಳುವಂತೆ ) ನೀನು ಯಾರೇ, ಇನ್ನು ಹೋಗು, ಬೇಡ ಎಂದು ಹೇಳಲಿಕ್ಕೆ? ನಾನು ಬೇಕಾದರೆ ಹೋದೇನು, ಹತ್ತಾದರೆ ಬಿಟ್ಟೇನು!

**ಅರಸು**—( ಶಕುಂತಲೆಯನ್ನು ನೋಡಿ ತನ್ನೊಳಗೆ ) ನನ್ನ ಮನಸ್ಸು ಹ್ಯಾಗೆ ಇವಳಲ್ಲಿ ನಟ್ಟಿರುವದೊ ಅದೇ ಪ್ರಕಾರವೇ ಇವಳ ಮನಸ್ಸು ನನ್ನಲ್ಲಿ ನಟ್ಟಿದ್ದೀತೆ? ಇದಕ್ಕೆ ಸಂದೇಹವೇ ಬೇಡ; ನಿಜವಾಗಿ ಇವಳ ಮನಸ್ಸು ನನ್ನಲ್ಲಿ ಆಗಿದೆ. ಹ್ಯಾಗಂದರೆ:—

**( ಪದ )**

ದಾಟಿ:—( " ದಿಲ್ಕೀದಿಲ್ ಮಾರ್ಕೈ ಉಥಾಜಿ " ಎಂಬ ಹಿಂದುಸ್ಥಾನೀ ಪದದಂತೆ. )

**ಮನಸಾನಿಟ್ಟಿಹಳು | ಎನ್ನೊಳು** || ಪಲ್ಲ ||
**ಗೆಳತಿಯರೊಳ್ ಮಾತಿ- | ನೊಳು ನಾನಿರಲು** ||
**ತಿಳಿಸದೆ ಎನ್ನನು | ಬಲು ನೋಡುತಿಹಳು** || ೧ ||
**ಚೆಲುವ ಮುಖವ ನಾ ನೋ- | ಡಲು ನಾಚುತ ನೋರೆ** |
**ಕೆಳಗೆ ತೆಗ್ಗಿಸುತಲೆ | ನೆಲವ ಗೀಚುವಳು** || ೨ ||
**ಬಾಲೆ ಎನ್ನಯ ಮಾತಿ- | ನೊಳು ತಾ ಬಾರಳು** |
**ಆಲಿಸಿ ಮೆಲ್ಲನೆ | ಎಲ್ಲ ಕೇಳುವಳು** || ೩ ||
**ಅನ್ಯ ಮಾತಿನ ನೆವ- | ದಿಂ ತನ್ನೊಳು ತಾನೆ** ||
**ರನ್ನೆ ಗಲ್ಲದಿ ನಗು- | ತೆನ್ನ ನೋಡಿದಳು** || ೪ ||

( ಇಷ್ಟರಲ್ಲಿ ಹಿಂದೆ ಶಬ್ದವಾಗುತ್ತದೆ. )

ಎಲೋ ತಪಸ್ವಿ ಜನರುಗಳಿರಾ, ತಪೋವನದಲ್ಲಿಯ ಪ್ರಾಣಿಗಳನ್ನು ಕಾಯ್ದುಕೊಳ್ಳಿ! ಸಾರ್ವಭೌಮನಾದ ದುಷ್ಯಂತರಾಜನು ಮೃಗಯಾ ಆಡುವದಕ್ಕೋಸ್ಕರ ಸೈನ್ಯಸಹಿತನಾಗಿ ಈ ವನದಲ್ಲಿ ಆಶ್ರಮದ ಹತ್ತರವೇ

---

* वाचं न मिश्रयति यद्यपि मद्वचोभिः
कर्णं ददात्यभिमुखं मयि भाषमाणे
कामं न तिष्ठति मदाननसंमुखीना
भूयिष्ठमन्य विषया न तु दृष्टिरस्याः ॥ ३० ॥

ಪ್ರಾಪ್ತನಾಗಿದ್ದಾನೆ! ನೋಡಿದಿರಾ, ಈಹೊತ್ತಿನಲ್ಲಿ ಏನಾಗುತ್ತದೆ:—ಅತಿ ವೇಗದಿಂದ ಓಡುವ ಅಶ್ವಸಮುದಾಯದ ಖುರಪುಟಗಳಿಂದ ಏಳುವ ಕೆಂಧೂಳಿಯು ಶಲಭ ಸಮೂಹದಂತೆ ನಾಲ್ಕೂ ದಿಕ್ಕಿನಲ್ಲಿ ಆಕಾಶವನ್ನು ಮುಸುಕಿ ವೃಕ್ಷದ ಟೊಂಗೆಗಳಿಗೆ ಕಟ್ಟಿದ ಆರ್ದ್ರವಲ್ಕಲಗಳೆಲ್ಲಾ ಕೆಟ್ಟು ಹೋಗುತ್ತವೆ. ತೀವ್ರ ಬನ್ನಿ.

|| ವೃತ್ತ || *

**ದಂಡು ಕಂಡು ಬೆದರ್ದಾಶ್ರಮದೊಳ್ನೆರೆ**
**ಪುಂಡಗಂಡು ಗಜ ಬಂತಿದೊ ವಿಘ್ನಂ |**
**ಸೊಂಡೆಯುಂಡಿಗೊಳೆ ಕೋರೆಗೆ ವೃಕ್ಷದ**
**ಟೊಂಗೆ ಭಂಗಿಸಿ ತೊಡಂಗಿರೆ ಹಾಯಲ್ ||**
**ಕಂಡಕಂಡ ಕಡೆ ಪಾಶವೆನಲ್ಕುರೆ**
**ನಾಲ್ಕು ಕಾಲ್ಗಲಿಯೆ ಬಳ್ಳಿಗಳಿತ್ತಲ್ |**
**ಹಿಂಡುಹಿಂಡು ಚಿಗರಿಂಗಳು ಬಲ್ಭಯ**
**-ಗೊಂಡು ಚಂಡಿನ ತೆರಂ ಚಿಗಿದೋಡಲ್ || ೩೦ ||**

( ಎಲ್ಲರು ಕಿವಿಗೊಟ್ಟು ಕೇಳಿ ವಿಸ್ಮಿತರಾಗುತ್ತಾರೆ. )

**ಅರಸು**—( ತನ್ನೊಳಗೆ ) ಅಯ್ಯೋ! ನನ್ನನ್ನು ಶೋಧಿಸುತ್ತ ಸೈನ್ಯವೆಲ್ಲ ಇತ್ತಕಡೆಗೆ ಬಂದು ತಪೋವನಕ್ಕೆ ಉಪದ್ರವ ಕೊಡುತ್ತಾರೆ. ಇದು ಯೋಗ್ಯವಾಗಲಿಲ್ಲ; ನಾನು ಅತ್ತಕಡೆಯೆ ಹೋಗುವೆ.

**ಗೆಳತಿಯರು**—ಆರ್ಯರೆ, ಈ ಅರಣ್ಯ ವೃತ್ತಾಂತವನ್ನು ಕೇಳಿ ಭಯ ಬರುತ್ತದೆ; ನಮಗೆ ಪರ್ಣಕುಟಿಗೆ ಹೋಗಲಿಕ್ಕೆ ಆಜ್ಞೆ ಇರಬೇಕು.

**ಅರಸು**—( ತೀವ್ರದಿಂದ ) ಅಹುದಹುದು ತಾವು ಹೋಗಬೇಕು. ನಾವೂ ಹೋಗಿ ಆಶ್ರಮಕ್ಕೆ ಉಪದ್ರವವಾಗದಂತೆ ಯತ್ನಮಾಡುತ್ತೇವೆ.

( ಎಲ್ಲರೂ ಏಳುತ್ತಾರೆ. )

**ಗೆಳತಿಯರು**—ಆರ್ಯರೆ, ತಮ್ಮ ಆದರಸತ್ಕಾರವು ಚೆನ್ನಾಗಿ ಆಗಲಿಲ್ಲಾದ್ದರಿಂದ ಪುನಃ ತಾವು ಇಲ್ಲಿಗೆ ಬರುವದಕ್ಕೋಸ್ಕರ ಹೇಳಿಕೊಂಬುವದಕ್ಕೆ ನಾಚಿಕೆ ಬರುತ್ತದೆ.

---

* ಈ ವೃತ್ತಕ್ಕೆ ಛಂದಸ್ಸಿನಲ್ಲಿ ಹೆಸರು ದೊರೆಯುವದಿಲ್ಲ. ಲಕ್ಷಣ-ರನಭಭರನನಭಗಗ

**ಅರಸು**—ಹಾಗೆ ತಿಳಿಯತಕ್ಕದ್ದಲ್ಲ; ನಿಮ್ಮ ದರ್ಶನವಾಯಿತು, ನಿಮ್ಮ ಸಂಗಡ ಮಾತುಗಳಾದವು, ಇದರಿಂದಲೇ ಸತ್ಕಾರವಾಯಿತು.

**ಶಕುಂ**—ಅನಸೂಯಾ, ಸ್ವಲ್ಪ ನಿಲ್ಲೆ, ಕಾಲಿನಲ್ಲಿ ದರ್ಭ ನಟ್ಟಿದೆ, ತೆಗೆಯುತ್ತೇನೆ. ( ನಾಲ್ಕೆಂಟು ಹೆಜ್ಜೆ ಹೋಗಿ ) ಸೆರಗು ಕೊಕ್ಕಿಗೆ ಸಿಕ್ಕಿತವ್ವ ! ನಿಲ್ಲು; ( ಈ ಪ್ರಕಾರ ನಿಲ್ಲಲಿಕ್ಕೆ ಮೇಲೆ ಮೇಲೆ ನಿಮಿತ್ತವನ್ನು ತೆಗೆದು ಅರಸನನ್ನು ನೋಡುತ್ತ ನೋಡುತ್ತ ಸಖಿಯರ ಸಹವರ್ತಮಾನ ಹೊರಟು ಹೋಗುತ್ತಾಳೆ. )

**ಅರಸು**—ತಪಸ್ವಿಗಳ ಕನ್ನಿಕೆಗಳಂತು ಹೋದರು; ಇನ್ನು ಯಾವಾಗ್ಗೆ ಕಣ್ಣಿಗೆ ಬೀಳವರೋ ತಿಳಿಯದು. ನಗರಕ್ಕೆ ಹೋಗಲಿಕ್ಕೆ ನನ್ನ ಮನಸೇ ಆಗಲೊಲ್ಲದು.

|| **ಪದ** ||

( ದಾಟಿ—" ದಿಲ್ಕೀದಿಲ್‌ಮಾರ್ಕೈ ಉಥಾಜಿ " ಎಂಬ ಪದದಂತೆ.)

**ಬರಲಾರದೆನ್ನ ಮನ । ಎನ್ನೊಡನೆ ॥ ಪಲ್ಲ ॥**
**ಜನುಮದ ಸ್ನೇಹದ । ತನುವಿನೊಳಿರೆ ಪರ ।**
**ತನುವಿಯ ಕೋಮಲ । ತನುವ ಬಯಸಿ ತಾ ॥ ೧ ॥**
**ಶರೀರ ಮುಂದಕೆ ಪೋಗು । ತಿರಲು ರಥದ ಕೇತು ॥**
**ವಿರದೆ ಹಿಂದಕೆ ಜಗ್ಗು । ತಿರುವ ತೆರದೊಳು ॥ ೨ ॥**
**ಲಲಿತ ರೂಪದ ಸರ । ದೊಳು ನೇತ್ರ ನಳಿನ ।**
**ದಳದ ಮೋಹದ ಲತಾ । ವಲಯದಿ ಸಿಲುಕಿ ॥ ೩ ॥**

ಆದ್ದರಿಂದ ಯಾವತ್ತೂ ಸೈನ್ಯಕ್ಕೆ ಇಲ್ಲಿಯೆ ಗುಡಾರಗಳನ್ನು ಹೊಯಿಸಲಿಕ್ಕೆ ಆಜ್ಞಾಪಿಸುವ. ( ಎಂದು ಹೊರಟು ಹೋಗುತ್ತಾನೆ. )

## ( ೧ ನೆಯ ಅಂಕವು ಮುಗಿದುದು. )

---

※ गच्छति पुरः शरीरं धावति पश्चादसंस्तुतं चेतः
चीनांशुकमिव केतोः प्रतिवातं नीयमानस्य ॥ ३३ ॥

## ೨ನೆಯ ಅಂಕವು.



[ ಆ ಮೇಲೆ ಬಹು ದಣಿದುಕೊಂಡಂಥ ವಿದೂಷಕನು* ಬರುತ್ತಾನೆ. ]

**ವಿದೂಷಕ**—( ಶ್ವಾಸವಿಡುತ್ತ ) ಏನ್ ನನ್ನ ಕರ್ಮಪ್ಪಾ! ಈ ಅರಸಿನ ಬ್ಯಾಟೀಕಾಲಾಗ ನಾನನಕಾ ದಣದ ಹೋದ್ನಿ. ಕವವ ಚಿಗರಿ! ಕವವ ಕಾಡಂದಿ! ಕವವ ಹುಲಿ! ಅಂತ ವದರ್‍ಯಾಡಿಕೊಂತ ಚೀರ್‍ಯಾಡಿಕೊಂತ ಈ ಅಡವ್ಯಾಗಿಂದಾ ಅಡವಿ, ಆ ಅಡವ್ಯಾಗಿಂದೀ ಅಡವಿ, ಓಡಿ ಓಡಿ ಸಾಕಸಾಕಾತ್ಯೋ ನಮ್ಮಪ್ಪಾ! ಬಿಸಲಂತೀ ಆಸಾಡಮಾಸ ಕೇಳೂದೇನತಿ, ರಣರಣ ಕುಟ್ಟೀಕುಟ್ಟತತಿ; ಮದ್ಯಾಣದ್ಹೊತ್ತಿನಾಗ ವಂದ ಜರಾ ಗಿಡದ ಬುಡಕ ಕುಂತೇನಂದರ ನೆಳ್ಳಾರ ಅತೆ? ಅದೂ ಇಲ್ಲ. ನೀರಡಸಾಣಾ ತೊಪ್ಪಲ ಬಿದ್ದ ಕೊಳತ ಹಳದಾನ ನೀರ ಕುಡ್ಯಾಣಾ, ಹಸುವಾಗಾಣಾ ಹೊತ್ತಲ್ಲದ್ಹೊತ್ತಿನಾಗ ಹಸೆ ಖಂಡಾ ತಿನ್ನಾಣಾ! ಇವನ ಕುದರೀ ಹಿಂದ ಓಡಿ ಓಡಿ ಕೈಕಾಲೆಲ್ಲಾ ಸಂದದಪ್ಪಿ ಹೋದವು. ರಾತರಿನಾಗ ಕಣ್ಣತುಂಬಾ ನಿದ್ದ್ಯಾರ ಆಕ್ಕತೆ? ಅದೂ ಇಲ್ಲ; ಒಂದ ಜರಾ ಜಂಪ ಹತ್ತತ್ಯೊ ಇಲ್ಲೊ ಅಟರಾಗ ಬ್ಯಾಟೀ ಅಡೊ ಮಮ್ಮಕ್ಕಳು ವದರಾಡಿಕೊಂತ ಬಂದಕ್ಯಾಸ ಎಬ್ಬಿಸಿದರ! ಎಲಾ ಇವರ ಮಂಜಾಳ ಹೋಗಲಿ! †

ಇಷ್ಟಾದರೂ ಆಗಲಿ, ಮತ್ತೂ ಕುರುವಿನ ಮ್ಯಾಗ ಹುಂಣ ಹುಟ್ಟಿದ್ಹಾಂಗ ನಿನ್ನೆ ಅಪನಾರು ಚಿಗರೀ ಬೆನ್ಹತ್ತಿ ನಮ್ಮನ್ನ ಬಿಟ್ಟಕ್ಯಾಸ ಮುಂದ ನಡದ ನುಸಿಗೋಳ ವನದಾಗ ಹೊಕ್ಕೊಂಡರ; ಅಲ್ಲಿ ಸಕುಂತರೆಂತ ವಂದ ಹುಡಿಗಿ ಇವನ ಕಣ್ಣಿಗೆ ಬಿತ್ತಂತ; ಇನ್ನೇನ ಬರತಾನಿವ ಊರಿಗೆ! ಯಾ ಶಿವಾ! ನಮ್ಮ ಕಾಡೂ ಕಾಲತಿ ಬಾ, ನೀ ಏನ ಮಾಡಿ! ಇಲ್ಲೇ ಅಡಿವ್ಯಾಗ ನಮ್ಮದಾಕ್ಕತಿ. ಅವಗಂತೀ ನಿನ್ನೆ ರಾತರಿನ್ಯಾಗ ನಿದ್ದೀನ ಇಲ್ಲ. ಮನಸೆಲ್ಲಾ ಆ ಹುಡಿಗೀ ಹಂತ್ಯಾಕ! ಎವ್ವಾ ಎತ್ತ ಮಾರ್‍ಯಾಗಿ ಕುಂತಿದ್ದಿ!

---

* ಹಾಸ್ಯಗಾರ.

† " ಮಂಜಾಳ ಹೋಗಲಿ " ಎಂದರೆ " ಮನೆಜ್ವಾಲಿಹೋಗಲಿ " ಎಂಬದಾಗಲಿ ಅಥವಾ " ಮನಿಜೋಳಹೋಗಲಿ " ಎಂಬದಾಗಲಿ ಅರ್ಥವಿರಬಹುದು.

(ಅತ್ತಿತ್ತತಿರುಗಿ ನೋಡುತ್ತ) ಹಾ ನನ್ನ ವಡ್ಯಾ ಇತ್ತೇ ಬರತಾನು; ಸಂಗಾಟ ಬ್ಯಾಡ್ರ ಹೆಂಗಸರ ಬ್ಯಾರೆ ಕೊಳ್ಳಾಗ ಮಾಲಿ ಹಾಕ್ಕೊಂಡಕ್ಯಾಸ ಬಿಲ್ಲ ಹಿಡ ಹಿಡ ಕೊಂಡ ಬರತಾರು. ಬರಲಿ; ನಾ ಒಂದ ಜರಾ ಮತ್ತಟ ದಣವಾದಾಂಗ ಮೋತಿ ಮಾಡಿಕೊಂಡಕ್ಯಾಸ ಇಲ್ಲೇ ನಿಲ್ತೇನ; ಅಂದರಾರ ನನ್ನ ಬಿಟ್ಯಾನಿವ. (ಎಂದು ಊರಗಟ್ಟಿಗೆಗೆ ಗದ್ದವನ್ನು ಹೊಂದಿಸಿ ನಿಲ್ಲುತ್ತಾನೆ. ಆ ಮೇಲೆ, ಮೇಲೆ ಹೇಳಿದ ಪ್ರಕಾರ ಅರಸು ಬ್ಯಾಡತಿಯರ ಕೂಡ ಬರತ್ತಾನೆ.)

**ಅರಸು**—[ ಶಕುಂತಲೆಯ ಧ್ಯಾನದಲ್ಲಿ ಮುಳುಗಿ ತನಗೆ ಅಂದುಕೊಳು ತ್ತಾನೆ. ]

## ( ಪದ. ) *

ದಾಟೀ—( "ವಯ್ಯಾರೀ ಒಲಿಸೀದಳೇನೊ ॥ ಪಲ್ಲ ॥ ಅತಿಮೋಹವೆರಸಿ। ರತಿಸುಖ ಸುರಸಿ ॥ ಕೃತಿಮೆ ಎನ್ನನು ಮರಸಿದಳೇನೊ ॥ ೧ ॥ ಎಂಬಂತೆ." )

**ಮೋಹಾಬ್ಧಿಯೊಳ್ಮುಳುಗೀಹೆನಯ್ಯೊ** ॥ ಪಲ್ಲ ॥

**ಯುವತಿಯ ಸಾಧನ । ಇರಲತಿ ಕಠಿಣ ॥**
**ಅವಳ ಭಾವಗಳೆಲ್ಲಾ ನೆನೆದು ನೆನೆದು ನಾ ॥ ೧ ॥**
**ಕನಸಿನೊಳ್ ಸುಖವನು । ಕಂಡು ಹಿಗ್ಗುವವೊಲು ॥**
**ಮನದಿ ಜಾಗೃತನಿರ- । ಲನುಭವಿಸುವೆ ನಾ ॥ ೨ ॥**
**ಮನಸಿಜನು ಕೃತಾ- । ರ್ಥನು ಆಗದ ಮುನ್ನ ॥**
**ಮನಸಿರ್ವರವು ರತಿಕ್ರೀಡಿಸುತಿರೆ ನಾ ॥ ೩ ॥**

(ಸ್ವಲ್ಪ ನಕ್ಕು) ತಾನು ಒಬ್ಬರಲ್ಲಿ ಇಚ್ಛೆ ಮಾಡಲು ತನ್ನ ಮನಸ್ಸು ಹ್ಯಾಗೆ ಅವರಲ್ಲಿರುವದೋ ಅದೇ ಪ್ರಕಾರವೇ ಅವರ ಮನಸ್ಸು ತನ್ನಲ್ಲಿರುವ ದೆಂದು ಕಾಮಿ ಪುರುಷನು ತರ್ಕ ಕಟ್ಟುತ್ತಾನೆ; ಇದರಿಂದ ಆತನು, ಉಪ ಹಾಸಕ್ಕೆ ಮಾತ್ರ ಪಾತ್ರನಾಗುತ್ತಾನೆ.

---

* कामं प्रिया न सुलभा मनस्तु तद्भावदर्शनाश्वासि
अकृतार्थेऽपि मनसिजे रतिमुभयप्रार्थना कुरुते ॥ १ ॥

(ಪದ) *

ದಾಟಿ:—(“ ಹರಿಯೇ ಪೋಗುವೆ ನಾನು ಮು- । ನ್ನಿರುತಿರುವೊಬ್ಬನೆ ನೀನು ॥
ತಿರುಕನಾಗಿ ಇರುತಿರುವ ಭೂಸುರನು । ಭರದಲೊದ್ದ ತ। ನ್ನ ಹಿರಿಯುತನೇನು ”)
ಇದರಂತೆ ಇರುತ್ತದೆ.

ಬರಿದೆ ಮೋಹಾನಂದದೊಳ್ ನಾ- ।
ನಿರುವೇನಾಶ್ಚರ್ಯವಿದು ॥
ತರುಣಿಯು ಭಾವಗ- । ಳಿರೆ ಸಹಜಿಕವು ।
ಮರುಳಹೆನೆನ್ನಗೋ- । ಸ್ಕರವೆಂದರಿದು ॥ ಪಲ್ಲ ॥

ಫುಲ್ಲನೇತ್ರೆ ನಿತಂಬದ ಭಾರಕೆ ।
ಮೆಲ್ಲಕೆ ಹೆಜ್ಜೆಗಳಿಡಲು ॥
ಬಳ್ಳಿಲಿ ಸೆರಗನು । ಬಟ್ಟನ ಕುಚಯುಗ- ।
ಳಲ್ಲಿ ಸರಿಸಿ ದೂರ- । ದಲ್ಲಿ ನಿಂದಿರಲು ॥ ೧ ॥

ತನ್ನೊಳು ತಾ ಧ್ಯಾನಿಸುತ ಮ- ।
ತ್ತನ್ಯವಸ್ತುಗಳನ್ನು ॥
ರನ್ನೆ ನೋಡಿ ನಗು- । ವನ್ನೆಗಕಸ್ಮಿಕ ।
ವೆನ್ನನೀಕ್ಷಿಸಿ ಕ್ಷಣ । ಕಣ್ಣುದಪ್ಪಿಸಲು ॥ ೨ ॥

ಬಾಲೆ ತಾ ಪೋಗುವ ವ್ಯಾಳ್ಯದಿ ।
ಕಾಲೊಳು ದರ್ಭವು ನಡಲು ॥
ಕೀಳಿ ತೆಗೆವ ನೆವ- । ಕಾಗಿ ತಾ ನಿಲಲು ।
ತಾಳಿದಳ್ ಮಮತೆ ಎನ್ನೊಳೆಂದರಿದು ॥ ೩ ॥

---

* स्निग्धं वीक्षितमन्यतोऽपि नयने यत्प्रेरयन्त्या तया
यातं यच्च नितम्बयोर्गुरुतया मन्दं विलासादिव
मा गा इत्युपरुद्धया यदपि सा सासूयमुक्ता सखी
सर्वं तत्किल मत्परायणमहो कामी स्वतां पश्यति ॥ २ ॥

ಸಾರಾಂಶ, ಅವಳೇನೇನು ಮಾಡಿದಳೋ ಅದೆಲ್ಲ ನನ್ನಗೋಸ್ಕರವೇ ಮಾಡಿದಳೆಂದು ನಾನು ತಿಳಿಯುತ್ತೇನೆ. ಕಾಮಿಜನರಿಗೆ ಎಲ್ಲವು ತಮ್ಮಂತೆ ಕಾಣಿಸುತ್ತದೆ.

**ವಿದೂಷಕ** – ( ಹಾಗೆಯೆ ನಿಂತುಕೊಂಡು ) ನನ್ನ ವಡ್ಯಾ, ರಾ ರಾ ಮಾಡಾಕ ನನ್ನ ಕೈ ಎತ್ತಾಣಿಲ್ಲ. ಬರೆ ಬಾಯಿಲೇನ ಅಂತೇನ.

**ಅರಸು**—ಏನೋ ಹನುಮನಾಯಕಾ, ಹೀಗ್ಯಾಕಾಯಿತು ನಿನ್ನವಸ್ಥೆ?

**ವಿದೂ**– ಹಃ ! ತಾನ ಬಡದಕ್ಯಾಸಿ, ಮತ್ತ ತಾನ ಅಳತಿ ಯಾಕಂತ ಕೇಳತಾನು!

**ಅರಸು**—ನಿನ್ನ ಮಾತಿನ ಅಭಿಪ್ರಾಯ ನನಗೆ ತಿಳಿಯಬರಲಿಲ್ಲ. ಸ್ಪಷ್ಟ ವಾಗಿ ಹೇಳು.

**ವಿದೂ**—ನನ್ನ ವಡ್ಯಾ, ನದ್ಯಾಗ ಬೆಳದ ನಿಂತ ಹುಲ್ಲು ತನ್ನ ತಾನ ಬಾಗತತ್ತ್ಯೋ? ಏನ್ ನದೀ ಸೆಳವಿಗೊ ?

**ಅರಸು**—ನದೀ ಸೆಳವಿಗೆ.

**ವಿದೂ**—ಕ್ಹಾಂಗ ನೋಡ; ನಾ ಹೀಂಗಾಗೂ ಕಾಣ್ಣಾ ನೀನ.

**ಅರಸು**—ನಾನು ಹ್ಯಾಗೆ?

**ವಿದೂ**—ನೀ ನಿನ್ನ ಕಾರಬಾರನೆಲ್ಲಾ ಬಿಟ್ಟಕ್ಯಾಸಿ ಅಡವೀಚೆಂಚೇರ ಹಾಂಗ ಇಲ್ಲಿ ಬಂದ ಕುಂತಿ; ದಿನಾ ದಿನಾ ನನಗ ಮಿಕಾ ಹೊಡತಾ ಅಂತ ಹೇಳತಿ; ಗುಡದಾಗ ಓಡಿ ಓಡಿ ನನ್ನ ಕೈಕಾಲೆಲ್ಲಾ ಕೀಲಪಪ್ಪಿ ಹೋಗಿ ದಾವು. ಅದೇನರ ಗೊಂತತೆ ನಿನಗ? ವಂದಾರ ದಿನ ನನ್ನ ವೈಬ್ಯಾಡಪಾ ಗುಡದಾಗ. ನಿನ್ನ ಕಾಲಬೀಳತೇನು; ಅಂದರಾರ ಒಂದ ಜರಾ ದಣವಾರಿಸಿ ಕೊಂಡೇನು.

**ಅರಸು**—( ತನ್ನೊಳಗೆ ) ಇವನು ಸಹ ಬೇಟೆಗೆ ಬೇಸತ್ತಿದ್ದಾನೆ ನನಗೂ ಕಣ್ವಮುನಿಗಳ ಕನ್ನಿಕೆಯನ್ನು ನೋಡಿದಾರಭ್ಯ ಮೃಗಯೆ ಆಡು ವದರಲ್ಲಿ ಮನಸು ಹೋಗುವದಿಲ್ಲ.

( ಪದ )

ಧಾಟಿ— ಬಾರೊ ಬಾರೊ ಪ್ರಿಯನೆ ಬಾರೊ ಬಾರೊ । ಎನ್ನ ಮನೆಗೆ । ಎನ್ನ ಜೀವನಿಲ್ಲದು ॥ ಎಂಬ ಪದದಂತೆ.

**ಪೂಡಲಾರೆ ಬಾಣವ ॥ ಮೃಗಗಳನು ॥**
**ಕಾಡಲಾರೆ ಬಿಲ್ಲೊಳು ॥ ಪಲ್ಲ ॥**
**ಯುವತಿಯ ವನದೊಳಿ- । ರುವ ಮೃಗಗಳವಳ ।**
**ತವರಮನೆಯವಾಗಬೇಕು ॥ ನಾ ಪೂಡಲಾರೆ ॥ ೧ ॥**
**ಎಳೆ ಎರಳೆಗಳು ಪ್ರೀ- ಯಳಿಗೆ ಪುಮತೆಯೊಳ್ಚಂ ।**
**ಚಲನೋಟ ಕಲಿಸಿರಬೇಕು ॥ ೨ ॥**
**ಸುಂದರಿಯಾನೆಯು । ಮಂದಗತಿಯು ಬಾಲ್ಯ ।**
**ದಿಂದೆ ತಾ ಕಲಿತಿರಬೇಕು ॥ ೩ ॥**

**ವಿದೂ**—[ ಅರಸನ ಮೋರೆ ನೋಡಿ ] ಎಲಾ ಇವನ! ತನ್ನ ಮನಸಿನಾಗ ತಾ ಮಗನಾಗೀದಾನು! ನನ್ನ ಮಾತಿಗೆ ಉತ್ರಾನ ಇಲ್ಲ! ಏನಪಾ ಇಷ್ಟೊತ್ತನಕ ನಿನ್ನ ಮುಂದ ಹೇಳಿಕೊಂಡದ್ದೇನ ಅಡಿವ್ಯಾಗ ಕುಂತ ಅತ್ರ್ಯಾಂಗೇನ?

**ಅರಸು**—( ನಕ್ಕು ) ಹನಮನಾಯಕಾ, ಮನಸ್ಸಿನಲ್ಲಿ ಮತ್ತೇನೂ ಇಲ್ಲವೊ. ನಿನ್ನ ಮಾತು ಮೀರಬಾರದೆಂತ ಸುಮ್ಮನಿದ್ದೆ; ಇಷ್ಟೆ.

**ವಿದೂ**—ಬಲೆ ನಮ್ಮಪ್ಪ. ಹಂಗರ ರಾಂರಾಂ, ನನ್ನ ವಡ್ಯಾ ಹೊಕ್ಕನ. [ ಹೊರಡುತ್ತಾನೆ. ]

**ಅರಸು**—ಹೋಗಬೇಡವೊ ಸ್ವಲ್ಪ ನಿಲ್ಲು. ನನ್ನ ಮಾತನಾದರೂ ಪೂರಾ ಕೇಳು,

---

※ न नमयितुमधिज्यमास्मि शक्तो
धनुरिदमाहितसायकं मृगेषु
सहवसतिमुपेत्य यैः प्रियायाः
कृत इव मुग्धविलोकितोपदेशः ॥ ३ ॥

**ವಿದೂ**—ಮತ್ತೇನ್ ನನ್ನ ವಡ್ಯಾ ಮಾತು?

**ಅರಸು**—ನೀನು ವಿಶ್ರಮಿಸಿಕೊಂಡ ಬಳಿಕ ನನ್ನದೊಂದು ಮಾತು ಅನಾಯಾಸದಿಂದಾಗತಕ್ಕದ್ದುಂಟು. ಕೇಳುವೆಯಾ?

**ವಿದೂಷಕ**—ಏನಪಾ ಅದು? ಶಾವಿಗೀ ಉಣ್ಣೂದೇನ?

**ಅರಸು**—ಅಡವಿಯೊಳಗೆಲ್ಲಿ ಶಾವಿಗಿಯೊ? ನಿಲ್ಲು ಹೇಳುತ್ತೇನೆ. (ಮುಂದಕ್ಕೆ ನೋಡಿ) ಯಾರವನು ಅಲ್ಲಿ?

**ದ್ವಾರಪಾಲಕ**—(ಮುಂದಕ್ಕೆ ಬಂದು) ಆಜ್ಞಾಪಿಸಬೇಕು ಜೀಯಾ.

**ಅರಸು**—ಎಲೋ ದ್ವಾರಪಾಲಕಾ, ಸೇನಾಪತಿಗೆ ಹೋಗಿ ನಾನು ಕರೆದಿದ್ದೇನೆಂದು ಹೇಳು.

**ದ್ವಾರಪಾಲಕ**—ಮಹದಾಜ್ಞೆ. (ಎಂದು ಹೋಗಿ ಸೇನಾಪತಿಯನ್ನು ಕರೆದುಕೊಂಡು ಬಂದು ಆತನಿಗೆ ಹೇಳುತ್ತಾನೆ.) ಮಹಾರಾಯರು ತಮ್ಮ ದಾರೀ ನೋಡುತ್ತ ಕುಳಿತುಕೊಂಡಿದ್ದಾರೆ. ಮುಂದಕ್ಕೆ ಹೋಗಬೇಕು, ದೇವರು.

**ಸೇನಾಪತಿ**—(ಅರಸನನ್ನು ನೋಡಿ ತನ್ನೊಳಗೆ) ಮೃಗಯೆ ಆಡುವದಕ್ಕೆ ಜನರು ದೂಷಿಸುತ್ತಾರೆ. ಪರಂತು ನಮ್ಮ ಮಹಾರಾಯರಿಗೆ ಅದು ಒಳ್ಳೇ ಗುಣಕಾರಿಯಾಗಿ ಕಂಡು ಬರುತ್ತದೆ.

( ಪದ. )

ದಾಟಿ—ಇಸತನಘನಕೀ ಕೌನ ಬಧಾಯಿ । ದೇಖತ ನಯನೋಮೆ ಮಟ್ಟಿಮಿಲಾಯಿ ॥
ಎಂಬ ಪದದಂತೆ.

**ಮಹಿದೇವಿ ರಮಣಗೀ । ಮೃಗಯದ ಶ್ರಮವು ।**
**ಬಹುಪರಿಯಿಂ ಹಿತಾ । ವಹವಾಗಿರುವದು ॥ ಪಲ್ಲ ॥**
**ಬಿಲ್ಲು ಹಗಲು ಎಲ್ಲ ಜಗ್ಗುತಲಿರಲು ।**
**ಕಲ್ಲಿನೋಲ್ ಭುಜಗಳು ಕಠಿಣವಾಗಿಹವು ॥ ೧ ॥**

**ಕಡುವಿಸಿಲೊಳು ಬೆಮರ್ವನು ಬ್ಯಾಸರನು |**
**ಬಡವಾಗಿರಲು ದೇಹ ಬಲದಿಂ ಹೆಚ್ಚಿಹನು || ೨ ||**
**ಕಾಂತಾರದೊಳು ಮೃಗಕುಲವ ಜಡಿದು ತಾ |**
**ಕುಂತುಕೊಂಡಿಹ ಸಿಂಗನಂತೆ ಶೋಭಿಸನು || ೩ || ***

(ಮುಂದಕ್ಕೆ ಬಂದು) ವಿಜಯೋಸ್ತು ಜೀಯಾ, ಬೇಂಟೀಗೋಸ್ಕರವಾಗಿ ಯಾವತೂ ಸೈನ್ಯವು ಅರಣ್ಯವೆಲ್ಲಾ ಸುತ್ತುಗಟ್ಟಿದೆ. ಇನ್ನೇನು ಕಾರಣದಿಂದಾ ಲಸ್ಯ ಮಾಡೋಣವಾಗಿದೆ?

**ಅರಸು**—ಈ ಹನುಮನಾಯಕನು ಮೃಗಯೆಗೆ ದೂಷಣೆ ಹಚ್ಚಿ ನನ್ನ ಮನಸ್ಸಿನೊಳಗಿನ ಈರ್ಷೆಯೆಲ್ಲಾ ಕೆಡಿಸಿಬಿಟ್ಟಿದ್ದಾನೆ.

**ಸೇನಾಪತಿ**—(ವಿದೂಷಕನಿಗೆ) ಗೆಳೆಯಾ, ನೀನು ಒಳ್ಳೇ ಯೋಗ್ಯ ವಾದ ಕೆಲಸವನ್ನು ಮಾಡಿರುವಿ. ಆದರೆ ಇನ್ನು ಮೇಲೆ ನಿನ್ನ ಮತವು ಮಾತ್ರ ತಿರುಗಿಸಬೇಡ. ನಾನು ಒಂದು ಕ್ಷಣ ಅರಿಸಿನ ಮನಸಿನಂತೆ ಮಾತನಾಡುತ್ತೇನೆ. [ಎಂದು ಅರಸನ ಕಡೆಗೆ ಮೋರೆ ತಿರಿವಿ] ದೊರೆಯೆ, ಈ ಮೂರ್ಖನಿಗೆ ಏನು ಗೊತ್ತುಂಟು? ತನ್ನ ಮನಸಿಗೆ ಬಂದಂತೆ ಬೊಗಳು ತ್ತಾನೆ. ರಾಯರ ಚಿತ್ತಕ್ಕೆ ಬಂದದ್ದೇ ಲೇಸು. ಮೃಗಯೇ ಆಡುವದರಿಂದ ಏನಾಗುತ್ತದೆಂದರೆ, ಹೇಳುತ್ತೇನೆ ಕೇಳಬೇಕು:—

(ಪದ)

ದಾಟಿ—ಯಾರಗೊಡವಿ ನಮಗೇನೆ ಮಾನಿನಿ | ಸೇರದ ಜನರೊಂದಾಡುವರೆ ||
ಎಂಬ ಪದದಂತೆ.

**ಮೃಗಯುದ ಮಾತಿಗೆ ಮರುಳರು ದೂಷಿಸಲ್ |**
**ಮಿಗಲಾದ ವಿಷಯಗಳ್ ಸರಿಬಹವೆ? || ಪಲ್ಲ ||**
**ಭರದಿ ಬ್ಯಾಸರದೆ ಬಿಸಿಲ್ಗಾಳಿಯೊಳ್ತಿರ |**
**ತಿರಗುತಿರಲ್ ಹೊದರ್ ಹೊದರುಗಳೊಳ್ ||**

---

* अनवरतधनुर्ज्यास्फालनक्रूरपूर्वं
रविकिरणसहिष्णु क्लेशलेशैरभिन्नम्
अपचितमपि गात्रं व्यायतत्वादलक्ष्यं
गिरिचर इव नागः प्राणसारं बिभर्ति ॥ ४ ॥

ಕರಗಿ ಮೂಂದ್ಯ ಕೇಳ್ ನ್ಯೆ ಪುಟಚೆಂಡಿನ।
ಸರಿಯಾಗುವದು ಪೇಳ್ವೆನು ನಿನ್ನೊಳ್ ॥ ೧ ॥
ಕಡು ಭಯಂಕರ ಪುಲಿಕರಡೆಗಳ್ ನ್ಯೆಮ್ಯಾ।
ಲಡರಿ ಬರಲ್ ಖಡುಗದಲೆರಡು ॥
ಕಡಿದು ತುಂಡುಮಾಡಲು ಭಯದೊಳು ಮನ।
ಜಡತೆಯು ಗಡ ಕಳೆವದು ನೋಡು ॥ ೨ ॥
ಹಾರುತ್ತಾರುತಲೋಡುವ ಹರಿಣದ ಮ್ಯಾಲ್।
ತೋರುವ ಬಿಳಿ ಚಿಕ್ಕೆಯ ಮ್ಯಾಲೆ ॥
ಪೂರಾ ಗುರಿಯುನಿಟ್ಟದೆ ಹೊಡೆಯಲು ಧನು-।
ರ್ಧಾರಿಗೆ ಬಹುಮಾನವದಲ್ಲೆ ॥ ೩ ॥*

ವಿದೂ—[ ಕ್ರೋಧಾವಿಷ್ಟನಾಗಿ ] ಹೋಗಪಾ ಹೋಗು ಮತ್ತ ನೀ ಯಾವ ಕಡಿಂದ ಬಂದಿ ನಡಬರಕ! ಸುಳ್ಳ ಯಾಕ ವದರ್ಯಾಡಿಕೊಂತಿ? ನಿನ್ನ ಮಾತ ಅಪನಾರ ಪಂದ ಕೇಳಾಕಿಲ್ಲ. ಹೋಗ ನೀ ಒಬ್ಬನ ಅಡಿವೆಡಿವಿ ತಿರಿಗಿಕೊಂತ ಬೇಕಾರ. ಯಾವಲ್ಲಾರ ಒಂದ ಕಡ್ಡಿ ಮನುಸೆರಮೂಗ ಹರದೇನಂತ ಕುಂತಿರತತಿ, ಕದರ ಬಾಯಾಗ ಹೋಗಿ ಬೀಳ ಅಮಾತ..

ಅರಸು—ಸೇನಾಪತಿ, ಈಗ ನಾವು ಮುನಿಗಳಾಶ್ರಮದಲ್ಲಿ ಬಂದಿದ್ದೇವೆ. ಕಾರಣ, ಇಲ್ಲಿ ಬೇಂಟೆಯಾಡುವದು ನನ್ನ ಮನಸಿಗೆ ಚೆನ್ನಾಗಿ ತೋರುವದಿಲ್ಲ.

( ಪದ )

ದಾಟಿ—ಹೇಗಿರಲೇ ನಾನು ಕಾಂತಾ ಎನಗೆ ಎರವಾದನೆ ॥ ಪಲ್ಲ ॥
ಸಣ್ಣವಳೆಂದೆನ್ನ ಬಣ್ಣಿಸಿ ಕರೆದೊಯ್ದು । ಬಣ್ಣದ ಮಾತಾಡಿ ಪೋದನೆ ಎಂಬ ಪದದಂತೆ.

ಬ್ಯಾಂಟೆಯು ಬ್ಯಾಡವೀಗ। ಬಂದಿಹೆವಾಶ್ರಮದಾಗ ॥ ಪಲ್ಲ ॥
ಎರಳೆ ಹಿಂಡುಗಳೆಲ್ಲ । ನೆರಳೊಳ್ ನಿರ್ಭಯದಿಂದ
ನೆರೆದು ಮೆಲಕು ಹಾಕಿ ಕೊಳ್ಳಲಿ ॥ ೧ ॥

---

* मेदश्छेदकृशोदरं लघु भवत्युत्थानयोग्यं वपुः
सत्वानामपि लक्ष्यते विकृतिमच्चित्तं भयक्रोधयोः
उत्कर्षः स च धन्विनां यदिषवः सिध्यन्ति लक्ष्ये चले
मिथ्यैव व्यसनं वदन्ति मृगयामीदृग्विनोदः कुतः ॥ ९ ॥

ಕಾಡುಕೋಣಗಳಿಲ್ಲ ಕೆರೆಯೊಳು ಮನದಣಿ
ಕೋಡನಪ್ಪಳಿಸುತ ಕುಳ್ಳಲಿ || ೨ ||
ಹುದಲೊಳ್ ವರಾಹಗಳ್ಕೆದರಾಡಲೀ ಧನು |
ವೆದೆಯುನುಚ್ಚಲು ಶ್ರಮದೂರಲಿ || ೩ ||
ಸೇನಾಪತಿ—ಪ್ರಭುಗಳ ಚಿತ್ತಕ್ಕೆ ಬಂದಂತೆ ಆಗಲಿ.

ಅರಸು—ಹಾಗಾದರೆ ಹೋಗಿ ಯಾವತ್ತೂ ಅರಣ್ಯವೆಲ್ಲಾ ಸುತ್ತು ಗಟ್ಟಿದಂಥ ಸೈನ್ಯವನ್ನು ಕರೆ ಕಳುಹಿಸು, ಹಾಗೂ ಯಾರೂ ಈ ತಪೋ ವನಕ್ಕೆ ಉಪದ್ರವ ಕೊಡದಂತೆ ಶೀಘ್ರವಾಗಿ ವ್ಯವಸ್ಥೆ ಮಾಡು. ತಪಸ್ವಿಗಳಿಗೆ ತೊಂದರೆಯಾದರೆ ತತ್‌ಕ್ಷಣವೆ ಶಾಪವನ್ನು ಕೊಟ್ಟಾರು ಬಲ್ಲೆಯಾ.

|| ಪದ ||

ಧಾಟಿ—ಮನಸು ಬಾರದು ಮಂಚಾ | ಮೃದು ಆಸನಾ | ಮುನಿಪದನ್ಯಾಕೆನ್ನ ಕಾಂತಾ ||
ಎಂಬ ಪದದಂತೆ.

ವನದೊಳಾಟವು ಸಾಕೈ | ಸೇನಾಪತೆ |
ಮುನಿಗಳು ಮುನಿವಾರೈ || ಪಲ್ಲ ||
ಮನಸಿನೊಳ್ ಪರಮಾತ್ಮನ ಧ್ಯಾನದಿ ಮೌನ |
ವನೆ ತಾಳ್ದಿರೆ ವಿಘ್ನವಾಗುವರೇನಯ್ಯ || ಅನುಪಲ್ಲ ||
ಶಾಂತರಾಗಿರುತಿಹರು | ಕಾಡಿದರೆ ಕೇ- |
ಳಿಂತು ಸೇರರವರು ||
ಸ್ವಂತ ತೇಜವ ಸೂರ್ಯ-ಕಾಂತ ಮಣಿಯು ಬಿಸಿ- |
ಲ್ಗಾಂತ ವ್ಯಾಳ್ಯದಿ ತೋರಿದಂತೆ ಕೋಪಿಸುವರು || ೧ ||
ಕೂಗಲು ವನದೋಳು ಅವರು ಧ್ಯಾನ- |
ದಾಗ ಕುಳ್ಳಿರೆ ಕೆಡಲು ||
ಮೋಘದಿಂದಿಳಿವಂಥ ಮಿಂಚಿನೊಲ್ ಶಾಪವ |
ತಾಗಿಸಿ ನಮ್ಮನು ಈಗಲೆ ಸುಡುವರು || ೨ ||

**ಕಾಮುಕ್ರೋಧಗಳನ್ನು । ತಪಸ್ವಿಗ- ।**
**ಳ್ಕಡಿದು ಬಿಟ್ಟವರಿನ್ನು ।**
**ಕೋಮಲ ಹೃದಯಕೆ ಕಠಿಣವು ತೋರಲು**
**ಭೂಮಿಪತಿಯ ಸಂಗ ಬ್ಯಾಡವೆಂಬುವರಯ್ಯ || ೩ || ***

**ಸೇನಾಪತಿ**—ಪ್ರಭುಗಳ ಆಜ್ಞೆಯ ಮೇರೆಗೆ ಎಲ್ಲಾ ವ್ಯವಸ್ಥೆ ಮಾಡು ತ್ತೇನೆ. ( ಎಂದು ಹೊರಟು ಹೋಗುತ್ತಾನೆ. )

**ವಿದೂ**—ಹೋಗೋ, ಮಂಗ ನನ ಮಗನ, ಹೋಗ. ದಣೇರ ನಿನ್ನ ಮಾತ ವಂದಸುದಾ ಕೇಳಲಿಲ್ಲ.

**ಅರಸು**—( ಸೇವಕ ಜನರನ್ನು ನೋಡಿ ) ನಿಮ್ಮ ಬೇಂಟೇ ವೇಷವೆಲ್ಲಾ ತೆಗೆಯಿರಿ; ರೈವತಕಾ, ನೀನು ನಿನ್ನ ಕೆಲಸಕ್ಕೆ ಹೊರಟುಹೋಗು.

**ಸೇವಕರು**—ಒಳ್ಳೇದು ಜೀಯಾ ( ಎಂದು ಹೊರಟು ಹೋಗುತ್ತಾರೆ.)

**ವಿದೂ**—ಭಲೇ ನಮ್ಮಪ್ಪ. ಎಲ್ಲಾರನು ಕಳಸಿಕೊಟ್ಟೆ. ಇನ್ನ ಬಾ ಇಲ್ಲೆ; ನೋಡವ್ವ ಕೀಗಿಡಕ ಚಪ್ಪರದ್ಹಾಂಗ ಬಳ್ಳಿ ಹಬ್ಬೇತಿ, ಬುಡಕ ಚೌಕಾನ ಕಲ್ಲೂ ಹಾಸೇತಿ, ಇಲ್ಲೇ ಒಂದ ಜರಾ ಕುಂತಕ್ಯಾಸಿ ಆಸರಗಳೂನು.

**ಅರಸು**— ನಡಿ.

( ಇಬ್ಬರೂ ಮುಂದಕ್ಕೆ ಹೋಗಿ ಕುಳಿತುಕೊಳ್ಳುತ್ತಾರೆ. )

**ಅರಸು**—ಹನುಮನಾಯಕಾ, ನಿನ್ನ ಕಣ್ಣುಗಳು ಸಾರ್ಥಕವಾಗ ಲಿಲ್ಲವೊ. ಯಾವತ್ತೂ ಪೃಥ್ವಿಯಲ್ಲಿ ನೋಡತಕ್ಕಂಥಾ ಸುಂದರ ಪದಾರ್ಥ ಗಳಲ್ಲಿ ಅತ್ಯುತ್ಕೃಷ್ಟವಾದಂಥಾದ್ದು ಇನ್ನೂವರೆಗೆ ನೀನು ನೋಡಲಿಲ್ಲ.

**ವಿದೂ**—ನನ್ನ ಒಡ್ಯಾ, ಕಾಮಾಣ್ಣ ಕುಂತ್ಹಾಂಗ ಇದರಿಗೆ ಕುಂತೀದಿ. ನಿನ್ನಕಿಂತಾ ಹೆಚ್ಚಿಂದದ್ಯಾವದತಿ.

---

*शमप्रधानेषु तपोधनेषु
गूढं हि दाहात्मकमस्ति तेजः ।
स्पर्शानुकूला इव सूर्यकान्ता-
स्तदन्यतेजोऽभिभवाद्वमन्ति ॥ ७ ॥

**ಅರಸು—**ತಮ್ಮ ತಮ್ಮ ಪದಾರ್ಥಗಳು ಎಲ್ಲರಿಗೂ ಚೆನ್ನಾಗಿಯೆ ಕಾಣಿಸುತ್ತವೆ. ಆದರೂ ಈ ವನಕ್ಕೆ ಭೂಷಣಳಾಗಿರುವ ಶಕುಂತಲಾ ಎಂಬವಳನ್ನು ಅನುಲಕ್ಷಿಸಿ ನಾನು ಮಾತನಾಡಿದೆ.

**ವಿದೂ**—(ತನ್ನೊಳಗೆ) ಹಾ ಬಂದಿ ಬಾ ಸನ್ಯಾಕ. ನಾ ಇನ್ನಮ್ಯಾಗ ತಿರತಿರವಿ ಕೇಳತೇನೂ, ಮಾತ ಬೆಳೀತಾವು, ಅದೇನ ಪಾಡಲ್ಲ. (ಅರಸನಿಗೆ) ಏನಪಾ ನನ್ನ ವಡ್ಯಾ, ನುಸಿಗೋಳ ಮಗಳಾಕಿ; ಮತ್ತ ಆಕೀ ಹಂತ್ಯಾಕ ನೀ ಹೋಗಾಣಿಲ್ಲ ಮುಟ್ಟಾಣಿಲ್ಲ; ಬರೇ ಮನಸಿಟ್ಟೀನುಪೇಗಾ?

**ಅರಸು**—ಹನುಮನಾಯಕಾ, ಪುರುವಂಶದಲ್ಲಿ ಹುಟ್ಟಿದಂಥ ಜನರ ಮನಸ್ಸು ಯಾವ ಪದಾರ್ಥದಲ್ಲಿ ಅಭಿಲಾಷೆ ಮಾಡತಕ್ಕದ್ದೋ ಅದರಲ್ಲಿಯೇ ಹೋದೀತೆ ಹೊರ್ತು ಅನ್ಯ ಪದಾರ್ಥಗಳಲ್ಲಿ ಎಂದಿಗೂ ಹೋಗಲರಿಯದು.

**(ಪದ)**

ದಾಟಿ—ಬರಲಿಲ್ಲ ನ್ಯಾಕೆನ್ನ ಕಾಂತಾ । ನಿನ್ನ । ಬೆರೆತಕಾರಣದಿ ಬಾಹವಲಲ್ಲೆ ನಿಂತಾ ॥

ಎಂಬ ಪದದಂತೆ.

**ಮುನಿಗಳ ಮಗಳಲ್ಲ ತಿಳಿಯೊ ॥ ದೇವಾಂ-**
**ಗನೆಯಿಂದ ಜನಿಸಿದ ಕನಕಪುತ್ಥಳಿಯೊ ॥ ಪಲ್ಲ ॥**
**ಚಲ್ಲೆಗಂಗಳೆ ಚಾರುಲೀಲೆ । ಪೊಸ-**
**ಮೊಲ್ಲೆಕುಸುಮವೆಕ್ಕೆ ಗಿಡದೆಲೆಮ್ಯಾಲೆ ॥**
**ಚೆಲ್ಲಿದ ತೆರನಂತೆ ಬಾಲೆ । ವನ-**
**ದಲ್ಲಿ ಸಿಲ್ಕಿಹಳೊ ಮುನಿಯ ಕರದಲ್ಲೆ ॥ ೧ ॥**
**ಮಂಜುಳ ಮೃದು ನುಡಿಯುವಳು । ದೇವ-**
**ನಂಜುಂಡ ನಡವಿಯೊಳ್ ಮದನನ ಶುಕಳು ॥**
**ಪಂಜರವಗಲಿ ಬಂದಿಹಳು । ಬಹ-**
**ಳಂಜಿಕೊಂಡಿಹಳೊ ತಾಪಸಕಷ್ಟಕವಳು ॥ ೨ ॥**

---

* सुरयुवतिसंभवं किल मुनेरपत्यं तदुज्झिताधिगतम्
अर्कस्योपरि शिथिलं च्युतमिव नवमालिकाकुसुमम् ॥ ८ ॥

**ಪೊಳೆಯು ಸೆಳವಿನೊಳ್ ಬಂದಿರುವ। ಸಣ್ಣ**

**ಮಳಲೊಳ್ ಸಿಲ್ಕಿಹ ರತ್ನದ್ಹರಳಂತೆ ಪೊಳೆವಾ॥**

**ಚೆಲುವ ಸುದತಿಯುಳ ಇರವ। ನೋಡಿ**

**ಬಳಲುವೆ ಬಲ್ಲವನಿರೆ ಕೇಳ್ಸ್ಪ್ರತ್ಯಯವಾ ॥ ೩ ॥**

**ವಿದೂ**—( ನಕ್ಕು ) ಮನ್ಯಾನ ಅವಗೋಳು ರತುನಾಗಿದಾರ ಒಬ್ಬರ ಕಿಂತ ಒಬ್ಬರು. ಅವರನ್ನೆಲ್ಲಾ ಬಿಟ್ಟ್ಕ್ಯಾಸ ಕಿದ ಯಾವ ದೊಡ್ಡ ಸೊಬಗಿನ ಹೆಣ್ಣಿಂತ ನೀ ಗಂಟಬಿದ್ದಿ? ಛೀ ಬಿಡ, ಅಡವ್ಯಾನ ಮಳ, ಅದನ್ನೇನ ಮಾಡಿ! ಕಜ್ಜೂರ ತಿಂದ ತಿಂದ ಕಣಗೆಟ್ಟ ಹುಣಸೀಹಣ್ಣ ತಿನ್ನವನ್ಹಾಂಗ ಮಾಡತಿ ನೀ.

**ಅರಸು**—ನೋಡಿಲ್ಲೋ ಇನ್ನೂ ನೀನು. ಅದಕ್ಕೆ ಹೀಗನ್ನುತ್ತಿ.

**ವಿದೂ**—ಹಾ ಹೀಗಂತಿ? ಇದ್ದೀತಪಾ! ನಿನ್ನಂತಾವ ಮನಸಿಟ್ಟ ವ್ಯಾಗ ಮತ್ತವಳ ಹಾಂಗ ಹೀಂಗ ಇದ್ದಾಳ ಎಂದಾರ?

**ಅರಸು**—ಹನುಮನಾಯಕಾ, ನಾನು ಎಷ್ಟಂತ ಬಣ್ಣಿಸಲೆಪ್ಪಾ ಅವಳ ಚೆಲ್ವಿಕೆ.

**(ಪದ)**

ದಾಟಿ---ಮನಸು ಬಾರದು ಮಂಚಾ॥ ಮೃದು ಆಸನ। ಮುನಿದನ್ಯಾಕೆನ್ನ ಕಾಂತಾ॥ ಎಂಬ ಪದದಂತೆ.

**ಬಣ್ಣಿಸಲ್ಹ್ಯಾಂಗಿನ್ನು ॥ ನುಡಿಯಲಿ ಲಾ-**

**ವಣ್ಯದ ಖಣಿಯನ್ನು ॥ ಪಲ್ಲ ॥**

**ಕಣ್ಣೊಳು ಕಟ್ಟಿದ ಹೆಣ್ಣಿನ ರೂಪವು**

**ಎನ್ನೊಳನಂಗನ ಸನ್ನಿಧಿಯಂತಿರೆ ॥ ಅನುಪಲ್ಲ ॥**

**ಮೊದಲು ಮನಸುಗೊಟ್ಟು। ವಿಧಿಯು ಚಿತ್ರ।**

**ಮುದದಿಂದೆ ಬರೆದಿಟ್ಟು ॥**

**ಅದರ ನ್ಯೆಯೊಳು ಜೀವದ ಕಳೆಯುನು ತುಂ-**
**ಬಿದ ವ್ಯಾಲಿಳೆಯೊಳಗುದುಭವಿಸಿದಳೇನೋ ॥ ೧ ॥**
**ಕೈ ನಡಗುವದೆಂದು । ವಿಧಾತನು ।**
**ಧ್ಯಾನದೊಳಗೆ ತಂದು ॥**
**ಮೌನದಿಂದತಿಶಯ ಮೋಹದ ರೂಪವ**
**ಧೇನಿಸಿ ಪಡೆದಿಹ ಮಾನಸ ಪುತ್ರಿಯೊ ॥ ೨ ॥**
**ಎಂದಿಗೆ ಬರಬೇಕ್ಕೆ । ಬ್ರಹ್ಮನಿಗಿಂಥ ।**
**ಸುಂದರ ಕೃತಿ ಸಾಕ್ಕೆ ॥**
**ಇಂದಿರಾ ರೂಪವ ಚೆಂದದಿ ಕಲಿತವ-**
**ಳಂದದೊಳಿಳಿಸಿಹ ನಿಂದೀವರಾಕ್ಷಿಯು ॥ ೩ ॥**

**ವಿದೂ**—ಅಬಬ! ಇದೇನ ಕಾಣಾಪಟ್ಟೆ ಹೇಳತಿ ಬಿಡ. ಹೀಂಗಿಷ್ಟ ವ್ಯಾಗ ಅವಳ ಸರಿ ಎಡ್ಡೆ ಹೆಣ್ಣೇ ಇರಾಕಿಲ್ಲ ಭೂಮೀವ್ಯಾಗ.

**ಅರಸು**—ಅವಳ ಸರಿ ಹೆಣ್ಣು ಇರುವ ಮಾತು ಅಸಂಭವವೇ ಸರಿ. ಹನುಮನಾಯಕಾ, ಅವಳು ಮತ್ತೂ ಹ್ಯಾಗಿರುವಳೆಂದರೆ ಹೇಳುತ್ತೇನೆ ಕೇಳು:—

( ಪದ )

ದಾಟಿ—" ಅವನ ನೋಡಿದಂದು ಮೊದಲಾಸೆ ನಟ್ಟದೆ " ಎಂಬ ಚಿಕ್ಕದೇವನ ಪದದಂತೆ.

**ಮಿಸಲು ದೇಹದ ಬಾಲೆ ಮೋಹಿಪ ಲೀಲೆ । ಅವಳು-**
**ಮಾಸುವಳೆಂದೆನ್ನ ಮನಸು ಮುಚ್ಚಿಹದಿಲ್ಲೆ ॥ ಪಲ್ಲ ॥**
**ಮಘಮಘಿಪಾ ಕುಸುಮವ್ಯಾರೂ ಮೂಸೀ ನೋಡಿಲ್ಲಾ ॥ ಅವಳು ।**
**ಉಗುರು ನಾಂಟಿಸದ ಎಳೆಯ ಚಿಗುರು ಕೇಳಯ್ಯ ॥ ೧ ॥**

---

* चित्रे निवेश्य परिकल्पितसत्त्वयोगा
रूपोच्चयेन मनसा विधिना कृता नु
स्त्रीरत्नसृष्टिरपरा प्रतिभाति सा मे
धातुर्विभुत्वमनुचिन्त्य वपुश्च तस्याः ॥ ९ ॥

**ಎಜ್ಜ ವಿಸ್ಕೊ ಮಾಡದಿಹ ಮುತ್ತು ಕಾಣಯ್ಯ || ಎನ್ನ |**
**ಗುಜ್ಜಾರೆ ತಾನಚ್ಚ ಜೇನು ಯಾರೂ ಸವಿದಿಲ್ಲ || ೨ ||**
**ಈ ವಸುಧೆಯೊಳು ಇಂಥ ಪೂರ್ವಪುಣ್ಯದ ಧನ್ಯ ||**
**ನ್ಯಾವನಿಹನೊ ಇವಳ ಪುರುಷ ವಿಧಿಯೆ ತಾ ಬಲ್ಲ || ೩ ||**

**ವಿದೂ**—ನನ್ನ ಒಡ್ಯಾ ನಿನ್ನ ಹೊರ್ತ ಅದಾನ್ಯಾವ ಭೂಮಿಮ್ಯಾಗ ಪುಣಿವಂತಾ? ಏನರ ಹಂಚಿಕಿಮಾಡಿ ಗಡಾ ನಿನ್ನ ಹಂತ್ಯಾಕ ಎಳಕೋ ನೋಡ. ಇಲ್ದಿರಕ ಜಡಿಗೆಲ್ಲಾ ಇಂಗಳೀ ಎಣ್ಣಿ ಬಡಕೊಂಡಕ್ಯಾಸ ತಲಿ ಮಾಸಿದ ನುಸಿ ಯಾವನಾರ ನೆಗವಿಕೊಂಡ ನಡದಾನ. ಹೇಳಿರತೇನ ಮತ್ತೀಗ!

**ಅರಸು**—ಹನುಮನಾಯಕಾ ನೀನಂಬುವದು ನಿಜವೋ; ಆದರೂ ಈ ಮಾತು ಹ್ಯಾಗೆ ಘಟಿಸೀತು? ಅವಳು ಕೇವಲ ಪರಾಧೀನಳು; ಹಾಗೂ ಹಿರಿಯರು ಯಾರೂ ಸಮೀಪದಲ್ಲಿಲ್ಲ.

**ವಿದೂ**—ಒಳ್ಳೇದ; ನಿನ್ನ ಮ್ಯಾಗ ಆಕೀ ನದರ ಹ್ಯಾಂಗತಿ? ಕದ ಒಂದಿಟ ಹೇಳಿಲಿ.

**ಅರಸು**—ತಪಸ್ವಿಗಳ ಹೆಣ್ಣುಮಕ್ಕಳು ಬಹಳ ಅಂಜುಬುರುಕಿಯರೇ ಇರುವರಷ್ಟೇ? ಆದರೂ ಅವಳು ಮನಸ್ಸಿನೊಳಗಿನ ಭಾವಾರ್ಥವನ್ನು ತಿಳುಹಿದಳು.

( ಶಾರ್ದೂಲ ವಿಕ್ರೀಡಿತ. )

**ಎನ್ನಂ ನೋಡಲು ಲಜ್ಜೆಯಿಂ ಬಳಿಗೆ ನಿಲ್ಲಳ್ ತಾಳ್ದಪಳ್**
**ಮೌನವಂ**
**ತನ್ನೊಳ್ ತಾನೆ ನಗುತ್ತಲನ್ಯನೆವದಿಂ ಕಳ್ಳಟ್ಟೆಯಿಂ**
**ನೋಡ್ದಪಳ್ ||**

---

* अनाघ्रातं पुष्पं किसलयमलूनं कररुहै-
रनाविद्धं रत्नं मधुनवमनास्वादितरसम्
अखण्डं पुण्यानां फलमिव च तद्रूपमनघं
न जाने भोक्तारं कमिह समुपस्थास्यति विधिः ॥१०॥

**ಅಣ್ಣಂ ಕಾಮನು ಚೇಷ್ಟೆಯಂಗೊಳಿಸೆ ನ್ಯೆಯೊಳ್**
**ಭಾವಗಳ್ ನೂಡೆ ಕೇಳ್ |**
**ಹೆಣ್ಣುಂ ಮಾನದ ಹಣ್ಣುಮಾತುರತೆಯುಂ ಹತ್ತೊತ್ತಿಹಳ್**
**ತೋರಳ್ಳೈ ||**

**ವಿದೂ**—ಅವಳು ಮತ್ತಿನ್ನೇನ ಮಾಡಬೇಕಂತಿ? ಕಂಡಗಳಿಗ್ಗಿ ಬಂದ ಕ್ಯಾಸ ತೊಡಿಮ್ಯಾಗ ಕುಂತ ಕಸೀ ಬಿಚ್ಚಬೇಕೇನ?

**ಅರಸು**—ಮತ್ತು ಯಾವಾಗ್ಗೆ ನಾವು ಒಬ್ಬರಿಗೊಬ್ಬರು ಬಿಟ್ಟು ಹೋಗಲಾರಂಭಿಸಿದೆವೋ, ಆಗ್ಗೆ ಅವಳು ಒಳ್ಳೇ ಮರ್ಯಾದಶೀಲತ್ವದಿಂದ ತನ್ನ ಮನಸ್ಸಿನೊಳಗಿನ ಭಾವಾರ್ಥವನ್ನು ಪ್ರಕಟಮಾಡಿದಳು.

( ಶಾರ್ದೂಲ ವಿಕ್ರೀಡಿತ. )

**ಬಾಲೇರಿಬ್ಬರ ಕೂಡಲೆನ್ನನು ಅಗಲ್ವಾರನ್ನೆ ಕೇಳ್ಪೋಗಲು |**
**ಕಾಲೋಳ್ದರ್ಭವು ನಟ್ಟಿತೆಂದು ಬರಿದೇ ಕೀಳುತ್ತೆ ತಾಂ**
**ನಿಂದಳು ||**
**ಏಳೆಂಟ್ಟೆಜ್ಜೆಯನಿಟ್ಟು ಕೊಕ್ಕಿಗೆ ಪದರ್ ತಾನೇ**
**ತೊಡರ್ಸಿರ್ದಳು |**
**ಮೇಲೇ ಮೇಲೆ ನೆವಂ ತಳೆರ್ದು ತಿರುಗುತ್ತೆನ್ನನ್ನು ಬಲ್**
**ನೋಡ್ದಳು ||**

**ವಿದೂ**— ಹೋಗೂನ ನಡಿ ಮತ್ತ ಅಲ್ಲಿನ್ನೇನತಿ? ಫಳಾರಗೀಾರ ಸಿದ್ದಾಗಲಿ. ಬಲೆ ನಮ್ಮಪ್ಪಾ ಕುಂತಕುಂತಿರಲಾಕ ವಳೇ ಬ್ಯಾಟಾ ಮಾಡಿದೇಳ. ಋಸಿಗೋಳ ಆಸ್ರಮದಾಗ ಬಂದಕ್ಯಾಸ, ಅವರ ತಪಾ ಮಾಡೋ ವನದಾಗ ನೀ ಗಿಪಾಮಾಡ!

**ಅರಸು**—ಎನಿಕೆ ತಪಸ್ವಿಗಳಿಗೆ ನಾನಿಲ್ಲಿ ಬಂದದ್ದು ತಿಳಿದಿದೆ. ಆದರೆ ಯಾವ ಕಾರಣದಿಂದ ಇಲ್ಲಿ ನಿಲ್ಲೋಣ ಮಾಡಬೇಕು? ಇದಕ್ಕೇನಾದರೂ ಒಂದು ಯುಕ್ತಿ ತೆಗಿ.

**ವಿದೂಷಕ**—ನೀ ಅರಸಲ್ಲೇನಪಾ? ಇನ್ಯಾವ ಯುಗತಿ ಬೇಕಾಗೇತಿ?

**ಅರಸು**—ಅರಸಾದರೇನಾಯಿತೊ? ಏನಾದರೂ ಒಂದು ಉದ್ದೇಶ ಬೇಕೋ ಬೇಡವೊ ಇಲ್ಲಿ ನಿಲ್ಲಲಿಕ್ಕೆ?

**ವಿದೂಷಕ**—ನುಸಿಗೋಳು ವನದಾಗೆಲ್ಲ ಕಾಳುಬಿತ್ತಿಕ್ಯಾಸ ಪುಗಸೆಟ್ಟೆ ಉಣತದಾರು. ಆರನೇ ಪಾಲ ಕಾಳ ಸರಕಾರಕ್ಕೊಪ್ಪಸಬೇಕಂತ ಕುಂತರಾತ.

**ಅರಸು**—ಎಂಥ ಹುಚ್ಚನೋ ನೀನು. ರತ್ನದ ರಾಶಿಗಿಂತಲೂ ಹೆಚ್ಚಾದ ದ್ರವ್ಯವನ್ನು ಋಷಿಗಳು ಅರ್ಪಿಸುತ್ತಿರಲಾಗಿ, ಅವರ ಬಳಿಯಿಂದ ಈ ಧಾನ್ಯವನ್ನು ತೆಗೆದುಕೊಂಡದ್ದರಿಂದ ನಮಗೆ ಏನಾಗತಕ್ಕದ್ದಿದೆ?

( ದ್ರುತವಿಲಂಬಿತ. )

**ಚತುರ ಜಾತಿಗಳೊಳ್ ಮುನಿಗಳ್ ಧನಂ |**
**ಇತರ ಮೂರರಕಿಂತಲು ಕೇಳ್ ಘನಂ |**
**ಸ್ವತಪವಿತ್ರಪರಾರನೆ ಪಾಲನಂ |**
**ಅತಿಶಯಾದುದು ಹೊಂದದು ನಾಶನಂ ||**

[ ಹಿಂದೆ ಶಬ್ದವಾಗುತ್ತದೆ ] ಆ ಹಾ ಹಾ ! ನಾವು ಕೃತಾರ್ಥರಾದಿವಿ.

**ಅರಸು**—ಓಹೊ ! ಶಾಂತಗಂಭೀರ ಸ್ವರವು ಕೇಳಿಬರುತ್ತದೆ. ಯಾರಾದರೂ ತಪಸ್ವಿಗಳು ಬಂದಿರಬಹುದು.

**ದ್ವಾರಪಾಲಕ**—ವಿಜಯೋಸ್ತು, ಜೀಯಾ, ಇಬ್ಬರು ಋಷಿಕುಮಾರರು ಹೊರಗೆ ಬಂದು ನಿಂತಿದ್ದಾರೆ.

**ಅರಸು**—ತೀವ್ರದಿಂದ ಇತ್ತ ಕರೆದುಕೊಂಡು ಬಾ.

**ದ್ವಾರಪಾಲಕ**—ಮಹದಾಜ್ಞೆ. [ ಎಂದು ಹೋಗಿ ಅವರನ್ನು ಕರೆದುಕೊಂಡು ಬರುತ್ತಾನೆ ] ಮಹಾರಾಯರು ಇಲ್ಲಿ ಕೂತಿದ್ದಾರೆ ಹೋಗಬೇಕು.

[ ಋಷಿಗಳು ಅರಸಿನನ್ನು ನೋಡಿ ತಮ್ಮೊಳಗೆ ಮಾತಾಡುತ್ತಾರೆ. ]

**ಒಬ್ಬ ಋಷಿ**—ಏನಯ್ಯಾ, ಈತನ ಶರೀರವು ಇಂಥಾ ತೇಜಃಪುಂಜವಾಗಿರಲಾಗಿಯೂ ನೋಡುವದಕ್ಕೆ ಭೀತಿಯುತ್ಪನ್ನವಾಗುವದಿಲ್ಲ. ಈತನು ರಾಜನಾಗಿದ್ದರೂ ಋಷಿಗಳ ಹಾಗೆ ಕಾಣುತ್ತಾನೆ.

( ದ್ರುತವಿಲಂಬಿತ. )

**ಮುನಿಯುವೊಲ್ ವನದೊಳ್ ಕುಳಿತಿರ್ಪನು |**
**ಮುನಿಯ ರಕ್ಷಣವಕ್ಷಯ ಮಾಳ್ಪನು ||**
**ಮುನಿಯ ಪುಣ್ಯದ ಪಾಲಿಗೆ ಪಾತ್ರನು |**
**ಮುನಿಯೊಲೀತನ ಲೀಲೆಯ ನೋಳ್ಪಿನು ||**

ಅಥವಾ ಋಷಿಗಳಿಗಿಂತಲೂ ಹೆಚ್ಚಾಗಿ ಈತನ ಕೀರ್ತಿಯುಂಟು ಹ್ಯಾಗಂದರೆ:—

( ವಸಂತ ತಿಲಕಾ. )

**ರಾಜೇಂದ್ರನೀತನ ಗುಣಂಗಳ ಮೆಚ್ಚಿದರ್ ನೋಣ್ ।**
**ರಾಜರ್ಷಿಯೆಂದು ಸುರಲೋಕದಿ ಪಾಡುವರ್ ಕೇಳ್ ॥**
**ರಾಜಾಖ್ಯ ಶಬ್ದವು ಋಷಿಂಗಳಿಗೆಲ್ಲಿ ಪೇಳ್ವೈ ।**
**ರಾಜಂ ಋಷಿಂಗಳನು ಗೆಲ್ದನು ಕೀರ್ತಿಯೋಳ್ವೈ** ॥ ೧ ॥

**ಎರಡನೇ ಋಷಿ**—ಎಲೋ ಗೌತಮಾ, ಇಂದ್ರನ ಮಿತ್ರನಾದಂಥಾ ದುಷ್ಯಂತ ರಾಜನು ಈತನೇನೋ?

**ಮೊದಲನೇ ಋಷಿ—**ಹೌದು.

**ಎರಡನೇ ಋಷಿ**—ಅದಕ್ಕಂತಲೇ ಹೀಗೆ ಶೋಭಿಸುತ್ತಾನೆ.

( ಯೂಥಿಕಾ )

**ದೀರ್ಘವಾದಗಸೆ ಬಾಗಿಲ ಹಿಂದಿಹ ।**
**ಅರ್ಗಳಾ, ಎಸೆ ಕರಂಗಳ ತಾಳ್ದಿಹ ॥**
**ಭರ್ಗನಂತಿವನ ಕೀರ್ತಿಯು ಪೃಥ್ವಿಗೆ ।**
**ಸ್ವರ್ಗದೋಳಿವನ ಧೀರತೆ ವಜ್ರಿಗೆ ॥**

**ಋಷಿಗಳು**—( ಮುಂದಕ್ಕೆ ಹೋಗಿ ) ವಿಜಯಸ್ವ ರಾಜನ್.

**ಅರಸು**—( ಆಸನದ ಮೆಲೆಯಿಂದ ಎದ್ದು ) ವಂದನೆ ಮಾಡುತ್ತೇನೆ. ಸ್ವಾಮಿಗಳಿರಾ.

**ಇಬ್ಬರೂ ಋಷಿಗಳು**—ಕಲ್ಯಾಣಮಸ್ತು ರಾಜಾ ( ಎಂದು ಹಣ್ಣುಗಳನ್ನರ್ಪಿಸುತ್ತಾರೆ. )

**ಅರಸು**—(ವಿನಯಪೂರ್ವಕವಾಗಿ ಗ್ರಹಣ ಮಾಡುತ್ತಾನೆ) ಬಂದಂಥ ಕಾರಣವನ್ನು ಆಜ್ಞಾಪಿಸಬೇಕು ಸ್ವಾಮಿಗಳೇ.

**ಋಷಿಗಳು**—ತಾವು ಇಲ್ಲಿ ಬಂದ ವರ್ತಮಾನವು ಋಷಿಗಳಿಗೆ ತಿಳಿದದರಿಂದ ಅವರು ತಮ್ಮನ್ನು ಕುರಿತು, ಒಂದು ಪ್ರಾರ್ಥನೆ ಮಾಡಿಕೊಂಡಿದ್ದಾರೆ.

**ಅರಸು—**ಅವರು ಯಾವ ಕಾರ್ಯದುದ್ದಿಶ್ಯ ಆಜ್ಞಾಪಿಸಿದ್ದಾರೆ?

**ಋುಷಿಗಳು**—ಭಗವಾನ್ ಕಣ್ವ ಋುಷಿಗಳು ಇಲ್ಲಿ ಇಲ್ಲದರಿಂದ ಯಜ್ಞಾದಿ ಕರ್ಮಗಳಿಗೆ ರಾಕ್ಷಸರು ವಿಘ್ನ ಮಾಡುತ್ತಾರೆ; ಕಾರಣ, ಕೆಲವು ದಿವಸಗಳ ಪರಿಯಂತ ತಮ್ಮ ವಸ್ತಿಯ ಲಾಭವಾಗಬೇಕೆಂದು ಪ್ರಾರ್ಥನೆ ಮಾಡಿಕೊಂಡಿದ್ದಾರೆ.

**ಅರಸು**—ಇದು ನನ್ನ ಮೇಲೆ ಅನುಗ್ರಹವೇ ಸರಿ.

**ವಿದೂಷಕ**—( ಅರಸನಿಗೆ ಮೆಲ್ಲಕ್ಕೆ ) ಈ ಮಾತ ನಿನಗ ಈ ಹೊತ್ತಿನ್ಯಾಗ ವಳೇ ಮನಸಿಗೆ ಬಂತ್ಯಾಕ?

**ಅರಸು**—( ಮುಗುಳು ನಗೆಯಿಂದ ) ದ್ವಾರಪಾಲಕಾ, ರಥವನ್ನು ಸಿದ್ಧಮಾಡಿಕೊಂಡು ಧನುಷ್ಯಬಾಣಗಳಿಂದ ಸಹಿತನಾಗಿ ಸಾರಥಿಗೆ ಬರುವದಕ್ಕೆ ಹೇಳು.

**ದ್ವಾರಪಾಲಕ**—ಮಹದಾಜ್ಞೆ. ( ಎಂದು ಹೊರಟುಹೋಗುತ್ತಾನೆ. )

**ಋುಷಿಗಳು**—( ಹರುಷದಿಂದ. )

( ಆಮೃತಧ್ವನೀ. )

**ಚಿಕ್ಕಯ್ಯ ಕೇಳ್ ನಿನಗೆ ತಕ್ಕದ್ದೆ ಕಾರ್ಯವು ಇದಕ್ಕಾಗಿ**
**ನಿವ್ವಿರಿಯರು ।**
**ಸೊಕ್ಕಿರ್ದ ರಕ್ಕಸರ ಕಕ್ಕಾಂಚಿ ಕೊಂದು ನೆಲಕಿಕ್ಕುತ್ತೆ**
**ಬಂದರವರು ॥**
**ಕುಕ್ಕಿಂಗೆ ಬಚ್ಚಿಡುತಲಕ್ಕತ್ರ್ಕಯಿಂ ಬಡವರಂ**
**ಕಾಯ್ವುದೆಜ್ಞವಿದಕೆ ।**
**ದಿಕ್ಕೀಯೆ ಪೌರವ ಕುಲಕ್ಕಿನ್ನದೇಂ ಬಹುದು ಮಿಕ್ಕಾದ**
**ಭೂಪಜನಕೆ ॥**

**ಅರಸು**—ತಾವು ಇನ್ನು ಆಶ್ರಮಕ್ಕೆ ಪ್ರಯಾಣ ಮಾಡತಕ್ಕದ್ದು, ನಾನು ಇದೇ ಬಂದೆನೆಂದು ತಿಳಿಯಿರಿ.

**ಋುಷಿಗಳು**—ವಿಜಯಸ್ವ! ( ಹೊರಟುಹೋಗುತ್ತಾರೆ. )

**ಅರಸು**—ಹನುಮನಾಯಕಾ, ಶಕುಂತಲೆಯನ್ನು ನೋಡುವದು ನಿನ್ನ ಮನಸ್ಸಿನಲ್ಲುಂಟೋ ?

**ವಿದೂಷಕ**—ಮದಲ ಮಾನಾರ ಇತ್ತ ನನ್ನ ವಡ್ಯಾ; ಈ ರಕ್ಕಸರ ಮಾತ ತಗ್ಯಾಣಾ ಎಳ್ಳಾನರ್ದಾಸುದಾ ಉಳೀಲಿಲ್ಲ.

**ಅರಸು**—ಅಂಜಬೇಡ; ನಾನು ನಿನ್ನ ಸಮೀಪದಲ್ಲಿಯೆ ಇರುತ್ತೇನೆ.

**ವಿದೂಷಕ**—ಹಂಗರ ಅವರಪ್ಪಗಸುದಾ ಅಂಜಾಣಿಲ್ಲ.

**ದ್ವಾರಪಾಲಕ**—(ಬಂದು) ಸ್ವಾಮಿ, ರಥವು ಸಿದ್ಧವಾಗಿ ಮಹಾರಾಯರ ವಿಜಯಪ್ರಸ್ಥಾನದ ದಾರೀ ನೋಡುತ್ತದೆ; ಪರಂತು ನಗರದಿಂದ ಅಮ್ಮನವರ ಆಜ್ಞೆ ತಿಳಿಸುವದರಗೋಸ್ಕರ ಒಂಟೀ ಸವಾರನು ಬಂದಿದ್ದಾನೆ.

**ಅರಸು**—(ಸತ್ಕಾರಪೂರ್ವಕನಾಗಿ) ಅಮ್ಮನವರು ಕಳುಹಿಸಿದ್ದಾರೊ?

**ದ್ವಾರಪಾಲಕ**—ಹೌದು ಸ್ವಾಮಿ.

**ಅರಸು**--ಆತನಿಗೆ ಒಳಗೆ ಕರೆದುಕೊಂಡು ಬಾ.

**ದ್ವಾರಪಾಲಕ**—ಮಹಾದಾಜ್ಞೆ. (ಹೋಗಿ ಒಂಟೀ ಸವಾರನ್ನು ಕರೆದುಕೊಂಡು ಬರುತ್ತಾನೆ.) ಮಹಾರಾಯರ ಬಳಿಯಲ್ಲಿ ಹೋಗಬೇಕು.

**ಸವಾರನು**— ವಿಜಯೋಸ್ತು ಜೀಯಾ, ಈಪೊತ್ತಿನಿಂದ ನಾಲ್ಕನೇ ದಿನ ಪುತ್ರಪಿಂಡಪಾಲನವೆಂಬ ಉಪವಾಸವನ್ನು ಅಮ್ಮನವರು ಮಾಡುವವರಿದ್ದಾರೆ. ಕಾರಣ, ಆ ಸಮಯದಲ್ಲಿ ದೀರ್ಘಾಯುಷಿಗಳು ಅವಶ್ಯವಾಗಿ ಬಳಿಯಲ್ಲಿರಬೇಕೆಂದು ಹೇಳಿದ್ದಾರೆ.

**ಅರಸು**—ಇತ್ತ ಅಮ್ಮನವರಾಜ್ಞೆ, ಇತ್ತ ಋಷಿಗಳಾಜ್ಞೆ, ಎರಡೂ ಮೀರಲಿಕ್ಕಾಗದು, ಮುಂದೆ ಮಾಡತಕ್ಕ ಬಗೆ?

**ವಿದೂಷಕ**—ಉಪ್ಪಾರ ತಿಗಟೇಗುಂಡಿನ್ಹಾಂಗ ನಡಬರಕ ಜೋತಾಡ.

**ಅರಸು**—ನನ್ನ ಸುತ್ತ ಒಳ್ಳೇ ಪೀಕಲಾಟ ಬಂತು, ದಾರಿಯಲ್ಲಿ ಗುಡ್ಡವಿರಲಾಗಿ ನದಿಯು ಹ್ಯಾಗೆ ಎರಡು ಮಾರ್ಗದಿಂದ ಹರಿಯಲಾರಂಭಿಸುತ್ತದೋ ಹಾಗೆ ನನ್ನ ಮನಸು ಈಗ್ಗೆ ಒದಗಿದ ಎರಡು ಕಾರ್ಯಗಳಲ್ಲಿ ಹೋಗುತ್ತದೆ.*

(ಮನಸ್ಸಿನಲ್ಲಿ ಸ್ವಲ್ಪ ಹೊತ್ತು ಧ್ಯಾನಿಸಿ) ಹನುಮನಾಯಕಾ, ನಿನ್ನನ್ನು ಅಮ್ಮನವರು ಪುತ್ರನೆಂದು ತಿಳಿದಿದ್ದಾರೆ; ಆದಕಾರಣ ನೀನು ಮನೆಗೆ ಹೊರಟು ಹೋಗು; ತಪಸ್ವಿಗಳ ಕಾರ್ಯಕ್ಕೋಸ್ಕರ ನನ್ನ ಮನಸು ವ್ಯಗ್ರವಾಗಿದೆ ಎಂದು ತಿಳುಹಿಸಿ ಅಮ್ಮನವರಿಗೋಸ್ಕರ ಪುತ್ರ ಕೃತ್ಯವನ್ನು ಮಾಡತಕ್ಕಂಥದು ನೀನು ಮಾಡಿ ಕಾರ್ಯವನ್ನು ತೀರಿಸು; ಅಷ್ಟರಲ್ಲಿಯೆ ನಾನು ಬರುತ್ತೇನೆ.

**ವಿದೂಷಕ**— ರಕ್ಕಸರಿಗೆ ಅಂಜಿದೇನಂತ ನನ್ನ ಕಳಸತಿ ಏನ್ ನೀ?

**ಅರಸು**—( ನಕ್ಕು ) ಛೆ! ನೀನು ಎಂದಾದರೂ ಅಂಜಿವವನೆ?

**ವಿದೂ**—ನಾ ಇಲ್ಲಿಂದ ಹೊಂಟ್ರ ಹುಡಗ ಅರಸನ ತಮ್ಮ ಹೊಂಟಾಂಗ ಹೊಂಡಾವ. ವಬ್ಬನ ಹೋದೇನ ಎಂದಾರ!

**ಅರಸು**—ಬಹಳುತ್ತಮ; ತಪೋವನಕ್ಕೆ ಉಪದ್ರವವಾಗಬಾರದೆಂದು ಯಾವತ್ತೂ ಸೈನ್ಯವನ್ನು ನಗರಕ್ಕೆ ಕಳುಹಿಸತಕ್ಕದ್ದೇ ಇದೆ; ಅದನ್ನು ನಿನ್ನ ಸಂಗಡ ಕೊಡುತ್ತೇನೆ.

**ವಿದೂ**—( ಮೀಸೆಯ ಮೇಲೆ ಕೈ ಹಾಕಿ ) ಹಾ! ಹುಡುಗ ಯುವ ರಾಜದೊರಿ ಬರತಾನಂತಿರಬೇಕ ಊರಾಗೆಲ್ಲಾ.

**ಅರಸು**—( ತನ್ನೊಳಗೆ ) ಈತನು ಬಹು ಧೂರ್ತನಾಗಿದ್ದಾನೆ. ನಾನು ಈತನ ಮುಂದೆ ಹೇಳಿದಂಥ ಕಾಮವಾಸನೆಯ ಮಾತು ಅಂತಃಪುರದ ಹೆಣ್ಣು ಗಳಲ್ಲಿ ಒಡೆದಾನು. ಕಾರಣ, ಇವನ ಮುಂದೆ ಆಡಿದಂಥದು ತಿರುಗಿ ತೆಗೆದು ಕೊಳ್ಳಬೇಕಾಗಿದೆ. ( ವಿದೂಷಕನಿಗೆ ) ಹನುಮನಾಯಕಾ, ಋಷಿಗಳ ಯೋಗ್ಯತೆ ದೊಡ್ಡದಾಗಿರುತ್ತದೆ. ಕಾರಣ, ಅವರ ಕಾರ್ಯಕ್ಕೋಸ್ಕರ ನಾನು ಹೋಗುತ್ತೇನೆ. ಆದರೆ ತಪಸ್ವಿಗಳ ಕನ್ನಿಕೆಯಾದ ಶಕುಂತಲೆಯನ್ನು ಕುರಿತು ನಿನ್ನ ಮುಂದೆ ಮಾತನಾಡಿದ್ದು ನಿಜವೆಂದು ತಿಳಿಯದಿರು ಕಂಡಿಯಾ.

( ದ್ರುತವಿಲಂಬಿತ. )

**ಚಿಗುರೆಯೋಳ್ ಬೆಳೆದಂಥವಳಂಗದೋಳ್ |**
**ಮುಗುಳುದೋರನು ಮನ್ಮಥನಿಂಥವಳ್ ||**
**ಮುಗುದೆಯಲ್ಲಿಯೊ ನಾ ನೃಪನೆಲ್ಲಿ ಮೇಲ್ |**
**ನಗೆಯನಾಡಿದೆ ತಾತ್ವಿಕವಲ್ಲ ಕೇಳ್ ||**

**ವಿದೂ**—ಹಿಂಗೇನ? ಒಳ್ಳೇದ ನನ್ನ ವಡ್ಯಾ, ಮುಜರಿ ಮಾಡತೇನ. ನೀ ಅತ್ತ ಹೋಗು; ನಾ ಇತ್ತ ಹೊಕ್ಕನ. [ ಇಬ್ಬರೂ ಹೊರಟು ಹೋಗು ತ್ತಾರೆ. ]

**( ೨ನೆಯ ಅಂಕವು ಮುಗಿದುದು. )**

---

# ೩ನೆಯ ಅಂಕವು.



( ಕೈಯಲ್ಲಿ ದರ್ಭವನ್ನು ಹಿಡಿದುಕೊಂಡು ಒಬ್ಬ ಋಷಿಶಿಷ್ಯನು ಬರುತ್ತಾನೆ. )

**ಶಿಷ್ಯ**— ಏನಯ್ಯಾ ದುಷ್ಯಂತ ರಾಜನ ಪರಾಕ್ರಮ! ಆಶ್ರಮದಲ್ಲಿ ಅರಸು ಬಂದಕೂಡಲೆ ನಮ್ಮ ಕೃತ್ಯಗಳೆಲ್ಲಾ ನಿರ್ವಿಘ್ನದಿಂದ ನಡೆಯಲಾರಂಭಿಸಿದವು. ಈತನು ಧನುಷ್ಯಕ್ಕೆ ಬಾಣವನ್ನು ಇರಿಸುವ ಪೂರ್ವದಲ್ಲಿಯೆ ಟಂಕಾರ ಧ್ವನಿಗೇ ವಿಘ್ನಗಳೆಲ್ಲಾ ಅಂಜಿ ಓಡಿ ಹೋದವು. ಒಳ್ಳೇದು, ನಾನು ಈ ದರ್ಭವನ್ನು ಯಜ್ಞವೇದಿಯ ಮೇಲೆ ಪಸರಿಸುವದಕ್ಕೋಸ್ಕರ ಋತ್ವಿಜರ ಬಳಿಯಲ್ಲಿ ಒಯಿದು ಕೊಡುತ್ತೇನೆ. ( ಸ್ವಲ್ಪ ಮುಂದಕ್ಕೆ ಹೋಗಿ ಆಕಾಶವನ್ನು ನೋಡುತ್ತ ) ಏ ಪ್ರಿಯಂವದಾ, ಲಾಮಂಚ ಬೇರಿನ ಅನುಲೇಪನವನ್ನೂ ದೇಟಿನಿಂದ ಸಹಿತವಾದಂಥಾ ಕಮಲ ಪುಷ್ಪಗಳನ್ನೂ ಯಾರಿಗೋಸ್ಕರ ಒಯ್ಯುತ್ತಿದ್ದೀಯೆ? ( ಕಿವಿಗೊಟ್ಟು ಕೇಳಿ ) ಏನಂತಿದ್ದಿ? ಬಿಸಿಲು ಜಳ ತಾಕಿ ಶಕುಂತಲೆಯ ಮೈಯಲ್ಲಿ ಸಮಾಧಾನವಿಲ್ಲದ ಕಾರಣ ಅವಳಂಗಕ್ಕೆ ಸೀತೋಪಚಾರದುದ್ದಿಶ್ಯ ಒಯ್ಯುತ್ತಿದ್ದಿಯೋ? ಒಳ್ಳೇದು ಪ್ರಿಯಂವದಾ, ಅವಳನ್ನು ಬಹು ಜತನದಿಂದುಪಚರಿಸು ಕೇಳಿದೆಯಾ; ಅವಳು ಗುರುಗಳ ಪಂಚಪ್ರಾಣಳಾಗಿದ್ದಾಳೆ. ನಾನೂ ಇಷ್ಟರಲ್ಲಿಯೆ ಅವಳಿಗೋಸ್ಕರವಾಗಿ ಯಜ್ಞಶಾಲೆಯಲ್ಲಿ ಹೋಗಿ ಶಾಂತ್ಯುದಕವನ್ನು ಗೌತುಮಮ್ಮನ ಸಂಗಡ ಕಳುಹಿಸಿಕೊಡುತ್ತೇನೆ. ( ಎಂದು ಹೊರಟು ಹೋಗುತ್ತಾನೆ. )

( ಇದು ವಿಷ್ಕಂಭವು, ಎನಲು ಮುಂದೆ ಬರುವ ವೃತ್ತಾಂತಂದ ಸೂಚನೆ. )

( ಆ ಮೇಲೆ ಕಾಮಪೀಡಿತನಾದಂಥ ಅಸರಸು ಬರುತ್ತಾನೆ. )

**ಅರಸು**—[ ಬಹು ಚಿಂತೆಯಿಂದ ಬೆಂದು ಶ್ವಾಸವಿಡುತ್ತ. ]

## ( ಪದ )

ದಾಟಿ—ತಿರುಗಲಿಲ್ಲಿನ್ನಮನ ವನಿತೆಯ ಬಳಿಗ್ಹೋಗಿ । ಮರುಗಿ ಮರುಗಿ ಮರುಗಿ ದಣಿದೆ ನಾನಿದಕಾಗಿ। ಎಂಬ ಪದದಂತೆ.

**ಬಯಲು ಬಯಕೆಯೊಳು ಬಳಲುವೆ ಬಹಳು |**
**ಬಾಲೆಯ ಸಾಧ್ಯವು ಬಲು ಕಠಿಣವಿರಲು || ಪಲ್ಲ ||**

ಕಳುವಿನಿಂದಾಶ್ರಮದೊಳು ಪೊಗಲವಳು |
ತಿಳಿವಳೊ ತಿಳಿಯಳೊ ಕಾಣಳೊ ಕಾಣಲು ||
ಅಳುಕಿ ತಾ ಬಾರಳೊ ಬಲು ಪರಾಧೀನಳು || ೧ ||
ಮೊದಲಿನಂತಿನ್ನೊಮ್ಮೆ ಮುದದಿ ಸಖಿಯರೊಳು |
ಉದಯಿಸಿಯೆನ್ನೊಳು ಮಧುರ ನುಡಿಗಳು ||
ಚದುರೆ ತಾ ನಾಡುತೆ ನೋಳ್ಪಳೆಂಬಾಶೆಯೊಳು || ೨ ||
ತೆಗ್ಗಿನೊಳ್ಬಿದ್ದ ನೀರು ತಿರುಗದಂತೆನ್ನ ಮನ |
ಕುಗ್ಗಿದೆ ಪಸುಳೆಯೊಳ್ ಋಷಿಗಳ ರೋಷನಾ |
ವೆಗ್ಗಳ ಬಲ್ಲವನಿರೆ ಬಿಡೆ ಕಾಮನಾ || ೩ || *

ಹೇ ಭಗವನ್, ಕುಸುಮಾಯುಧಾ, ಮದನಾ, ನಮ್ಮ ಕಾಮಿಜನಕ್ಕೆ ವಿಶ್ವಾಸವೆಂಬುವದು ನಿನ್ನಿಂದಲೆ, ಚಂದ್ರಮನಿಂದಲೆ, ಹಾಗೂ ಮಂದಮಾರುತನಿಂದಲೆ; ಹೀಗಿರಲಾಗಿ ನೀವು ನಮ್ಮನ್ನು ಮೋಸ ಹೊಂದಿಸುತ್ತೀರಿ ಬಲ್ಲಿರಾ.—

( ಪದ )

ಧಾಟಿ—ಮರೆಯಲಾರೆನಾನು | ಮಾನಿನಿಯಾ ಮರೆಯಲಾರೆನಾನು ಮಾನಿನಿ ಮಾಡಿದ ಸುರತಾನಂದದ ಸುಖ ಪರಿಪರಿಯಾ || ಎಂಬ ಪದದಂತೆ

ಮೋಸಗಾರರಯ್ಯಾ | ನೀವೆಲ್ಲಾ || ಪಲ್ಲ ||
ಪೂಶರ ನೀನು ಮ- | ತ್ತಾ ಸಿತಕರನು |
ಗಾಸಿಮಾಡುವ ಮಂದ- | ಗಾಮಿ ಪವನನು || ಅನುಪಲ್ಲ ||
ಕಾಮರಾಯನ ಬಾಣ | ಹೂವೆಂದು ಕೀರ್ತಿಯು |
ತೀವಿ ಸೀಗಲು ವಜ್ರ | ತಾಳಿದೆಯಲ್ಲಯ್ಯ || ೧ ||

---

* जाने तपसो वीर्यं सा बाला परवतीति मे विदितम् ।
अलमास्मि ततो हृदयं तथापि नेदं निवर्तयितुम् ॥ २ ॥

**ಚೆಲುವ ಚಂದಿರ ತನ್ನ | ಬೆಳದಿಂಗಳೊಳು ತಂಪು |**
**ತಿಳಿಸುತ ಕಿಡಿಗಳ | ಸುರಿವನಲ್ಲಯ್ಯ || ೨ ||**
**ಬಿರಿದ ಪುಷ್ಪದ ಗಂಧ | ಬೀರುತ ಮಾರುತ |**
**ಬರುವಾತನುರ | ದುರಿ ಬೆಳಿಸುವನಯ್ಯ || ೩ ||**

ಭಗವನ್ ಕಾಮದೇವನೆ, ನನ್ನ ಮೇಲೆ ದಯ ಹುಟ್ಟುವದಿಲ್ಲವೆ! (ಮದನ ಬಾಧೆಯನ್ನು ತೋರಿ) ನಿನ್ನ ಬಾಣಗಳು ಕುಸುಮಗಳೇ ಇರಲಾಗಿ ಏನು ಕಾರಣದಿಂದಿಷ್ಟು ಬಾಧೆಪಡಿಸುವಿ? ಸೈ ಸೈ! ಹೌದು ನಾನು ತಿಳಿದೆ:—

(ಶಾರ್ದೂಲವಿಕ್ರೀಡಿತ)

**ಇನ್ನುಂ ತಾಂ ಹರಕೋಪವಹ್ನಿ ನಿರುತಂ ಕಾಯ್ದಿಪ್ಪುರ್ದೇಂ ನಿನ್ನೊಳೈ |**
**ಬನ್ನಂ ಬಟ್ಟುದುದಲ್ಲೊ ಕಾಯ ದಹಿಸಲ್ ಭಸ್ಮಾವಶೇಷಾದೆಲೈ ||**
**ಎನ್ನಂ ಕೊಲ್ಲದು ಮೇಣು ತಾನುಳಿಸದೀ ರಕ್ಷಂ ಮನೋಜಾತನೇ |**
**ನಿನ್ನೋಳೆಂತಪರಾಧವುಂ ದಹಿಸಲ್ಯೆ ಪಾಪಕ್ಕೆ ನಾ ಸಿಲ್ಕೆನೆ ||೧||**

ಅಥವಾ ನೀನು ನನ್ನ ಮೇಲೆ ಅನುಗ್ರಹವೆ ಮಾಡುತ್ತಿ ಬಲ್ಲೆಯಾ:—

**(ಪದ)**

ದಾಟಿ—ಜಾರ ಪುರುಷರ ಗುಣ ಬೇರೆ | ಪೂರ್ಣನೆಲೆ ತಿಳಿದವರಾರೆ | ಎಂಬ ಪದದಂತೆ.

**ಮಾರಾ ನಿನ್ನೊಳು ದಯ ಪೂರಾ |**
**ವೀರಾ ನೆನೆವೆ ನಿನ್ನುಪಕಾರಾ || ಪಲ್ಲ ||**
**ಚೆಲುವೆಯೊನ್ನಧಿಪತಿ | ಯುಳನು ಮಾಡುತ ಕಣೆ |**
**ಗಳನಿರಿಯುಲು ಮಧುರಾ || ೧ ||**

---

* तव कुसुमशरत्वं शीतरश्मित्वमिन्दो- |
द्वयमिदमयथार्थं दृश्यते मद्विधेषु ||
विसृजति हिमगर्भैरग्निमिन्दुर्मयूखै |
स्त्वमपि कुसुमबाणान्वज्रसारीकरोषि || ३ ||

**ಅವಳಿಗಾಗಿಯೆ ನಿತ್ಯ | ಬವಣೆ ನಾಗೊಳುವಂತೆ |**
**ಹವಣ ನೀಡೈ ಉದಾರಾ || ೨ ||**
**ಎಲ್ಲ ದೇವತೆಗಳಂ- | ತಲ್ಲ ನೀ ಬಲ್ಲೆನ್ನ |**
**ತಲ್ಲಣೆಯ ಪಾಲುಗಾರಾ || ೩ ||**

ಭಗವನ್, ಕಂದರ್ಪ, ಹೇ ಮಕರಧ್ವಜ, ಇಷ್ಟು ನಾನು ಹೇಳಿಕೊಳ್ಳ ಲಾಗಿಯೂ ನಿನ್ನ ಮನಸ್ಸು ಕರಗುವದಿಲ್ಲವೆ? ಅಯ್ಯೋ! ನಿಷ್ಕರುಣಿಯೆನಿಸು ವದುಚಿತವಲ್ಲ ಕಂಡೆಯಾ!

( ವಿಭಾವರಿ. )

**ಅನುದಿನಂ ಬೆಳೆದು ಎನ್ನೊಳು ಸೌಖ್ಯವ |**
**ಅನುಭವಂ ತೆಗೆದುಕೊಂಡುಪಕಾರವ ||**
**ನೆನೆಯದೇ ಅನುಚಿತಂ ಸಲೆ ಮಾಳ್ಪವೀ |**
**ಕಣೆಗಳಂ ಕಿವಿವರಿಂಗೆಳೆದೆಚ್ಚುವೆ ||**

( ಖಿನ್ನತೆಯಿಂದ ) ಋಷಿಗಳ ಕಾರ್ಯವಂತು ನಾನು ಚನ್ನಾಗಿವ್ಯವಸ್ಥೆ ಗೊಳಿಸಿದೆ, ಪ್ರಯಾಣಕ್ಕೆ ಸಹ ಅವರು ಅಪ್ಪಣೆ ಕೊಟ್ಟಿದ್ದಾರೆ; ಇನ್ನು ಯಾವಲ್ಲಿ ಹೋಗಿ ಆದಂಥ ಶ್ರಮವನ್ನು ಪರಿಹರಿಸುವ? ( ಶ್ವಾಸವಿಡುತ್ತ ) ಅವಳ ದರ್ಶನವೆ ಹೊರ್ತಾಗಿ ವಿಶ್ರಾಂತಿಯೆಲ್ಲಿ ಸಿಗುವದು? ಅವಳು ಯಾವಲ್ಲಿ ರುವಳೋ ನೋಡುವ. ( ಸೂರ್ಯನನ್ನು ನೋಡಿ ) ಪೂರ್ಣ ಮಧ್ಯಾಹ್ನ ವಾಗಿದೆ, ಈ ವೇಳೆಯಲ್ಲಿ ಶಕುಂತಲೆಯು ಬಿಸಲುಗಳೆಯುವದಕ್ಕೋಸ್ಕರ ಬಹ ಳಾಗಿ ತನ್ನ ಸಖಿಯರಿಂದ ಕೂಡಿಕೊಂಡು ಮಾಲಿನೀತೀರದ ಸಮಾಪಕ್ಕೆ ಲತಾಗೃಹದಲ್ಲಿ ಕುಳಿತಿರಬಹುದು, ಅತ್ತಲೇ ಹೋಗುವ. (ಮುಂದಕ್ಕೆ ಹೋಗಿ ನೋಡಿ ) ಈ ಸಣ್ಣ ಸಣ್ಣ ಹೂವಿನ ಗಿಡಗಳ ನಡುವಿನ ದಾರಿಯಿಂದಲೇ ಸುಂದರಿಯು ಇದೆ ಹೋಗಿರಬಹುದೆಂಬಂತೆ ಕಾಣಿಸುತ್ತದೆ.

( ದ್ರುತವಿಲಂಬತ. )

**ಪಸುಳೆ ಹೋಗುವ ವ್ಯಾಳ್ಯದೊಳೆತ್ತಿಹಾ |**
**ಕುಸುಮ ಕೋಶಗಳುಂ ಮುಗುಳ್ದಿಲ್ಲ ಹಾ -||**
**ಲೊಸರಿ ಟೊಂಗೆಗಳಿಂದುದುರುತ್ತಿವೆ |**
**ಕಿಸಲಯಂಗಳು ಕೊಯ್ಯಲು ಪಟ್ಟಿವೆ ||**

( ಸ್ಪರ್ಶ ಸುಖವನ್ನು ತೋರಿ ) ಎನ್ನ ಪ್ರಿಯಳು ಇಲ್ಲಿಯೆ ಇರುವಳೆಂದು ತಿಳಿದ ಕ್ಷಣವೆ ಈ ಸೀತಲವಾದಂಥ ಮಂದಮಾರುತನು ಎಷ್ಟಂತೆ ಸುಖಪಡಿಸುತ್ತಾನೊ ! ಆಹಾಹಾ ! ಕಾಮಜ್ವರದಿಂದ ಸಂತಪ್ತವಾದವಯಯವಗಳಿಂದೆ ಆಲಿಂಗಿಸಲಿಕ್ಕೆ ಈ ವಾಯುವು ಬಹು ಯೋಗ್ಯನಾಗಿದ್ದಾನೆ.

( ವಸಂತತಿಲಕಾ. )

**ಇಂದಿಲ್ಲಿ ನಾಬರಲು ಹೊಂದಿದೆ ತನ್ವಿಗೆಂದು ।**
**ಮಂದಾನಿಲಂ ತಿಳಿದು ಮಾಲಿನಿ ದಾಂಟಿ ಬಂದು ॥**
**ಇಂದೀವರಂಗಳ ಸುಗಂಧನೆ ಕಾಣ್ಕೆಯೆಂದು ।**
**ತಂದಪ್ಪಿದೆನ್ನನು ಕಣಾ ಶರಣಾಗಿ ಬಂದು ॥**

ಆವಳು ಇಲ್ಲಿಯೆ ಯಾವವಾದರೂ ಲತಾ ಮಂಟಪದಲ್ಲಿರಬೇಕು. ( ಸ್ವಲ್ಪ ಮುಂದಕ್ಕೆ ಹೋಗಿ ನೆಲ ನೋಡಿ ) ಓಹೋ ! ನಿಶ್ಚಯವಾಗಿ ಇಲ್ಲಿಯೆ ಇದ್ದಾಳೆ.

( ವಿಭಾವರಿ. )

**ತಳಿತ ಮಂಟಪದ ಬಾಗಿಲ ದಾರಿಯೊಳ್ ।**
**ಬಿಳಿಮಳಲ್ ಪರಪಿರಲ್ ಪೊಸ ಪಾದಗಳ್ ॥**
**ನೆಲಕೆ ಮೂಡಿವೆ ನಿತಂಬದ ಗೌರದಿಂ ।**
**ಕೆಳಗೆ ಹಿಮ್ಮಡಿಗಳೊತ್ತಿವೆ ಭಾರದಿಂ ॥**

ಒಳ್ಳೇದು, ಈ ವೃಕ್ಷದ ಮರೆಗೆ ನಿಂತು ನೋಡುವ. ( ಮುಂದಕ್ಕೆ ಹೋಗಿ ನೋಡಿ ಹರುಷದಿಂದ ) ಆಹಾ! ನೇತ್ರಗಳ ಸಾಫಲ್ಯವಾಯಿತು. ನನ್ನ ಮನೋರಥ ಪ್ರಿಯತಮೆಯು ಶಿಲಾಪಟ್ಟದ ಮೇಲೆ ಹೂವಿನ ಹಾಸಿಕೆಯಲ್ಲಿ ಮಲಗಿಕೊಂಡಿದ್ದಾಳೆ; ಇಬ್ಬರೂ ಸಖಿಯರು ಬಳಿಯಲ್ಲಿ ಕುಳತಿದ್ದಾರೆ; ನಿಃಶಂಕೆಯಿಂದ ಇವರಲ್ಲಿ ಏನೇನು ಮಾತುಗಳು ನಡೆಯುತ್ತವೋ ಕೇಳುವ. ( ಎಂದು ನೋಡುತ್ತ ನಿಲ್ಲುತ್ತಾನೆ. )

( ಇಷ್ಟರಲ್ಲಿ ಮೇಲೆ ಹೇಳಿದ ಸ್ಥಿತಿಯಿಂದ ಶಕುಂತಲೆಯು ಬರುತ್ತಾಳೆ. )

**ಸಖಿಯರು**—(ಗಾಳಿ ಬೀಸುತ್ತ ಸ್ನೇಹದಿಂದ) ಸಖಿಯೆ ಶಕುಂತಲಾ ಈ ಕಮಲಪತ್ರದ ಬೀಸಣಿಕೆಯಿಂದ ಏನಾದರೂ ಸಮಾಧಾನಾಗುವದೇನೆ?,

**ಶಕುಂ**— ಗೆಳತಿಯರಾ ಗಾಳಿ ಬೀಸುತ್ತೀರಾ?

**ಸಖಿಯರು**—( ವಿಷಾದಗೊಂಡು ಒಬ್ಬರಿಗೊಬ್ಬರು ನೋಡುತ್ತಾರೆ. ) ನಾವು ಗಾಳಿ ಬೀಸುವದು ಇವಳ ಲಕ್ಷದಲ್ಲಿಯೆ ಇಲ್ಲ!

**ಅರಸು**— ( ತನ್ನೊಳಗೆ ) ಶಕುಂತಲೆಯ ಮೈಯಲ್ಲಿ ಸಮಾಧಾನ ವಿಲ್ಲೆಂದು ಕಾಣಿಸುತ್ತದೆ. (ಮನಸ್ಸಿನಲ್ಲಿ ವಿಚಾರ ಮಾಡಿ)ಬೇಸಿಗೆಯ ಬಿಸಲಿನಿಂದ ಹೀಗಾಗಿರುವದೋ ಅಥವಾ ನನ್ನ ಮನಸ್ಸಿನಲ್ಲಿದ್ದದ್ದೇ ಇವಳ ಮನಸ್ಸಿನಲ್ಲಿದ್ದು ಬಾಧೆಬಡಿಸುವದೋ? ( ಅಭಿಲಾಷಪೂರ್ವಕವಾಗಿ ನೋಡಿ )ಹೌದು; ನನ್ನಲ್ಲಿ ಬಾಧೆಬಡಿಸುವದೇ ಇವಳಿಗೂ ಕಾರಣವಾಗಿದೆ. ಇದಕ್ಕೆ ಸಂದೇಹವಿಲ್ಲ.

( ಪದ )

ದಾಟಿ—ಮನಸು ಸಿಲುಕದೆ ಅರಿಯದವನೊಳು ಮನಸಿಜಾಗಮದಂದವೇ।
ಕನಸಿನೊಳಗರನಿಮಿಷವಾದರು ಕಾಮತಂತ್ರವ ಬಲ್ಲನೊಳು ಸಾಕು। ಎಂಬ ಪದದಂತೆ.

**ತರುಣಿ ತಾಪಕೆ ಬಳಲಿ ಬೆಂದಿಹ।**
**ಪರಿಯ ನೋಡಲು ಬಿಸಿಲು ಜಳ ತಾ-॥**
**ಕಿರುವ ಚಿಹ್ನಗಳಿಲ್ಲ ಮನುಮಥ-।**
**ನುರಿಯು ಹೃದಯದೊಳುದಿಸುತಿರುವದು ॥ ಪಲ್ಲ ॥**
**ಸಂಪಿಗೆಯ ಮೈಬಣ್ಣ ಬಿಳುಪಿನ।**
**ಛಾಯೆದೋರಿದೆ ಕೆಳದಿ ಸಖಿಯರು ॥**
**ತಂಪುಗಾಳಿಯು ಬೀಸುತಿರಲುರೆ।**
**ತಾಳದಲೆ ತಳಮಳಿಸುತಿರುವಳು ॥ ೧ ॥**
**ಉರದಿ ಚಂದನ ಗಂಧದುಟಣೆಯು।**
**ನೊರಸಿಹಳು ಎಳೆ ಕಮಲನಾಲದಾ-॥**
**ಭರಣಗಳು ಬಿಚ್ಚಿಹವು ಈ ಪರಿ।**
**ಇರಲು ರಮಣೀಯವಾಗಿ ತೋರ್ಪಳು ॥ ೨ ॥**

**ರವಿಯ ತಾಪವು ಸ್ಮರನ ಕೋಪವು |**
**ಸವನೆ ಸರಿಯಾದರು ಯುವತಿಯರ |**
**ಅವಯವಗಳೊಳು ಚೆಲುವಿಕೆಯ ಹೆಚ್ಚಿ |**
**ಸುವ ಚೆಲುವ ತಪ್ಪುಗಾರ ಮಾರನೆ || ೩ ||** *

**ಪ್ರಿಯಂ**—ಅನಸೂಯಾ, ಆ ರಾಜರ್ಷಿಯನ್ನು ಕಂಡತೊಟ್ಟು ಇವಳು ಹೀಗಾಗಿದ್ದಾಳೆ. ಅವನ ದೆಸೆಯಿಂದಲೇ ಇವಳಿಗೆ ಇಂಥಾ ಕಠಿಣಾವಸ್ಥೆಯಾಗಿದ್ದೀತೇನೆ?

**ಅನ**—ನನಗೂ ಹೀಗೇ ತೋರುತ್ತದಪ್ಪ! ಇವಳನ್ನು ನಾನು ಕೇಳಿ ನೋಡುತ್ತೇನೆ. ( ಗಟ್ಟಿಯಾಗಿ ) ಸಖಿಯು, ಶಕುಂತಲಾ, ಮಾತಾಡವ್ವಾ; ಏನಾಗುತ್ತದೆ ನಿನಗೆ!

**ಶಕುಂ**—ಕಟಕಟ ಮಾಡಬೇಡಿರೆ? ಯಾತಕ್ಕೆ ನನ್ನನ್ನು ಕಾಡುತ್ತೀರಿ; ನಾನೊಬ್ಬಳೇ ಬಿದ್ದುಕೊಳ್ಳುತ್ತೇನೆ; ಹೋಗಬಾರದೆ ಇಲ್ಲಿಂದ!

**ಅನ**—ಹೀಗ್ಯಾಕೆ ಮಾಡುತ್ತೀಯೆ ನಮ್ಮವ್ವಾ ಎಲ್ಲಾ ಮಾತಿಗೂ? ಹೀಗೆ ಮಾಡಿದರೆ ಹ್ಯಾಗೆ ನೋಡು? ನಿನ್ನ ಸಂತಾಪವಂತೂ ಅತಿಶಯವಾಗಿ ತೋರುತ್ತದೆ. ನಾವು ನೋಡಿ ಹ್ಯಾಗೆ ಸೈರಿಸಬೇಕು. ಎದ್ದು ಕೂತು ಛಂದಾಗಿ ಮನಸ್ಸಿನಾಗಿನ ಮಾತು ಹೇಳಬೇಕವ್ವ.

**ಶಕುಂ**—( ಹೂಹಾಸಿಗೆಯಿಂದ ತಲೆಯೆತ್ತಿ ಗಲ್ಲವನ್ನು ಅಂಗೈಯಲ್ಲೂರಿ ) ಏನದು ಕೇಳುವದು?

---

* स्तनन्यस्तोशीरं प्रशिथिलमृणालैकवलयं ।
प्रियायाः साबाधं किमपि कमनीयं वपुरिदम् ॥
समस्तापः कामं मनसिजनिदाघप्रसरयो- ।
र्न तु ग्रीष्मस्यैवं सुभगमपराद्धं युवतिषु ॥ ८ ॥

**ಅನ**—ಶಕುಂತಲಾ, ಮದನಪ್ರಕರಣದಲ್ಲಿ ನಮಗೆ ವಿಶೇಷವಾಗಿ ಜ್ಞಾನವಿಲ್ಲ; ಆದರೂ ಪುರಾಣಗಳಲ್ಲಿಯೂ ಕಥೆಗಳಲ್ಲಿಯೂ ಕಾಮಿಜನರ ಅವಸ್ಥೆಯಾದದ್ದು ಕೇಳಿದ್ದೇವೆ. ಅದರಂತೆ ನಿನ್ನ ಅವಯವ ಲಕ್ಷಣಗಳು ತೋರುತ್ತವೆ. ಆದರೆ ಏನೂ ಮನಸ್ಸಿನಲ್ಲಿಡದೆ ಏನುಕಾರಣ ನಿನಗೆ ಸಂತಾಪವಾಗುತ್ತದೆಂಬುದನ್ನು ಹೇಳು; ಕಾರಣವೇನಂದರೆ, ವಿಕಾರವಿದ್ದದ್ದು ಚೆನ್ನಾಗಿ ತಿಳಿಯದೆ ಚಿಕಿತ್ಸೆ ಮಾಡಲಿಕ್ಕೆ ಬರುವದಿಲ್ಲ.

**ಅರಸು**—(ತನ್ನೊಳಗೆ) ಅನಸೂಯಾ ಸಹ ನನ್ನ ಮನಸ್ಸಿನಲ್ಲಿದ್ದಂತೆಯೇ ತರ್ಕ ಮಾಡಿದಳು.

**ಶಕುಂ**—(ತನ್ನೊಳಗೆ) ನನಗಂತು ವಿಕಾರವತಿಶಯವಾಗಿದೆ. ಆದರೂ ಇವರ ಮುಂದೆ ನಾನು ಹ್ಯಾಗೆ ಹೇಳಲಿ?

**ಪ್ರಿಯಂ**—ಸಖಿಯೆ ಶಕುಂತಲಾ, ಅವಳ ಮಾತಿಗೆ ಉತ್ತರವೇ ಇಲ್ಲೇನೇ? ಕೂಸಿನ ಹಾಗೆ ಮಾಡುತ್ತೀಯಲ್ಲೆ! ಪ್ರಾಯಕ್ಕೆ ಬಂದೆವಮ್ಮಾ, ಇನ್ನು ಮೇಲೆ ನಿನ್ನ ಜೀವವನ್ನು ನೀನೇ ಕಾಯಬೇಕು; ನೋಡಿದೆಯಾ, ನಿನ್ನ ಅವಯವಗಳೆಲ್ಲ ಕೃಶವಾಗುತ್ತ ನಡೆದವು; ಒಂದು ಲಾವಣ್ಯ ಮಾತ್ರ ನಿನ್ನನ್ನು ಬಿಟ್ಟಿಲ್ಲ.

**ಅರಸು**—(ತನ್ನೊಳಗೆ) ಶಾಬಾಸ್ ಪ್ರಿಯಂವದಾ! ಯಥಾಸ್ಥಿತವಾದ ಮಾತನಾಡಿದೆ.

**( ಪದ )**

ರಾಗ—ಪೂರ್ವಿ, ಆಟತಾಳ.

ದಾಟಿ—"ಕಣ್ಣೊಳು ಕಟ್ಟಿದವೊಲು ಕಾಣಿಸುತಿಹನೆ | ಬಣ್ಣದುಟಿಯು ಬಲ್ಮೊಲೆಯ ಭಾವೆ ಮೈದೋರಲಕಟಾ" ಎಂಬ ಚಿಕ್ಕದೇವನ ಪದದಂತೆ.
ಅಥವಾ "ಬಂದದ್ದೇನಿದು ಕುಂದು ಪ್ರೀಯನೆ ಮುಂದಗಮನೆಗೆ ಮೆಚ್ಚಿ" ಎಂಬ ಪದದಂತೆ.

**ಕನ್ನೆ ಮಾರನ ರನ್ನದುಂಗರ |**
**ವೆನ್ನಲಂಗಗಳನ್ನು ಸೊರಗಿಸಿ ||**
**ಬನ್ನಬಡಿಸಲನನ್ಯಜನು ಬಳಿ |**
**ಚಿನ್ನದೊಲು ಚೆಲುವನ್ನೆ ತಾಳ್ದಳು || ಪಲ್ಲ ||**

**ಗಲ್ಲಗಳು ಬಾಡಿದವು ಕೆಳದುಟಿ ।**
**ಪಲ್ಲವವು ಒಣಗಿದುದು ಮೊಗಸಿರಿ ॥**
**ಯಲ್ಲಿ ಬೇಸರದೋರಿದುದು ನುಡಿ ।**
**ಬೆಲ್ಲದಂಥವು ಮೆಲ್ಲಗಾದವು ॥ ೧ ॥**
**ಕಣ್ಣುಗಳುದಾಸ್ಯಂ ನೆಗಳ್ದವು ।**
**ತಿಣ್ಣವೊಲೆ ಕಾಠಿಣ್ಯಗಳೆದವು ॥**
**ಸಣ್ಣ ನಡುವಿನ ಹೆಣ್ಣು ನಿಜಲಾ- ।**
**ವಣ್ಯ ಸಿರಿಸಂಪನ್ನೆ ಮೆರೆವಳು ॥ ೨ ॥**
**ಇಂತು ಮಾಧವಿ ಲತೆಯು ವನದಿ ವ- ।**
**ಸಂತ ಮಾರುತನಿಂದೊಣಗಿ ನ್ಯೈ ॥**
**ಕಾಂತಿಯನು ಕಳೆದಿರಲು ಶೋಭಿಸಿ- ।**
**ದಂತೆ ಕಾಣಿಸುತಿಹಳು ಪ್ರಿಯಳು ॥ ೩ ॥**

**ಶಕುಂ**—ಗೆಳತಿಯರಾ ನಿಮ್ಮ ಮುಂದೆ ಹೇಳದಲೆ ಇನ್ನಾರಮುಂದೆ ಹೇಳತಕ್ಕದ್ದಿದೆ? ಆದರೆ ನಾನು ಹೇಳಿದ್ದರಿಂದ ನಿಮಗೆ ಕಷ್ಟಮಾತ್ರವಾದೀತು.

**ಸಖಿಯರು**—ಅದಕ್ಕಂತೇ ನಾವು ಆಗ್ರಹಮಾಡುತ್ತೇವೆ. ಸ್ನೇಹದವರೆಲ್ಲರೂ ಕಷ್ಟವನ್ನು ಹಂಚಿಕೊಂಡರೆ ವೇದನೆ ಕಡಿಮೆಯಾಗಿ ಸಹಿಸಲಿಕ್ಕೆ ಪ್ರಯಾಸವಾಗುವದಿಲ್ಲ.

**ಅರಸು**—(ತನ್ನೊಳಗೆ) ಇನ್ನು ಮೇಲೆ ಇವಳು ಏನು ಹೇಳುತ್ತಾಳೋ ಏನೋ!

---

* क्षामक्षामकपोलमाननमरः काठिन्यमुक्तस्तनं ।
मध्यः क्लान्ततरः प्रकामविनतावंसौ छविः पाण्डुरा ॥
शोच्या च प्रियदर्शना च मदनक्लिष्टेयमालक्ष्यते ।
पत्राणामिव शोषणेन मरुता स्पृष्टा लता माधवी ॥ ९ ॥

## ( ಪದ )

ರಾಗ—ಶಂಕರಾಭರಣ, ಅಟತಾಳ.

ಧಾಟಿ— " ಸಕ್ಕರೆಯೊಳಗಿನ ಚೂರೆ ರುಕ್ಮಿಣಿ । ಸೀತಾಳತ್ತರೆ ಸತ್ಯಭಾಮೀಸೀ " ಎಂಬ ಪದದಂತೆ.

ಏನೆಂದು ದೇವಿ ನುಡಿವಳಯ್ಯೋ । ಕೇಳು-
ವಾನಂದ ವಲ್ಲದಂಜುವೆನಯ್ಯೋ ॥ ಪಲ್ಲ ॥
ಚಾಲುವರಿವರು ಬಳಿಯನಿಂದು । ಜೀವ-
ದೋಲುತಿಳಿವ ಗೆಳತಿಯರಿಂತು ॥
ಪೇಳದಿರಳು ಮನಸಿನ ಮಾತು । ಇನ್ನು
ಮೇಲೆನ್ನ ದೈವವು ತಿಳಿದೀತು ॥ ೧ ॥
ಕಣ್ಣಿನಿಂದಲೆ ಮಮತೆಯ ದೋರಿ । ಭಾವ-
ವನ್ನ ಕಾಣಿಸಿಹಳೊ ಒಯ್ಯಾರಿ ॥
ಇನ್ನೇನೆಂಬುವಳೊ ಲಜ್ಜೆಯ ಮೀರಿ । ಮನ-
ಸಿನ್ನು ಬಿಡದು ಸಂಶಯ ಭಾರಿ ॥ ೨ ॥
ಅಲರಂಬುಗಣೆಯ ಮೇಲಿಹೆ ನಿಂದು । ಎಡ-
ಬಲದೊಳು ದುಃಖ ಸುಖದ ಸಿಂಧು ॥
ತಿಳಿಯೆನಿವಳ ನುಡಿಗಳು ಬಂದು । ಎನ್ನ
ಎಲರಿನೋಲೆತ್ತ ನೂಕುವದಿಂದು ॥ ೩ ॥ *

**ಶಕುಂ**—ತಪೋವನದ ರಕ್ಷಣೆ ಮಾಡುವಂಥ ಆ ರಾಜರ್ಷಿಯನ್ನು ನೋಡಿದಂದಿನಿಂದ ( ಮುಂದೆ ಮಾತು ಮುಗಿಸುವದಕ್ಕೆ ಲಜ್ಜೆಗೊಳ್ಳುತ್ತಾಳೆ )

---

* प्रष्टा जनेन समदु:खसुखेन बाला ।
नेयं न वक्ष्यति मनोगतमाधिहेतुम् ॥
दृष्टो विवृत्य बहुशोऽप्यनया सतृष्ण- ।
मत्रान्तरे श्रवणकातरतां गतोऽस्मि ॥ १० ॥

**ಸಖಿಯರು**—ಪೂರಾ ಹೇಳು; ಇಷ್ಟೇ ಮಾತನಾಡಿದರೆ ನಾವು ಹ್ಯಾಗೆ ತಿಳಿಯಬೇಕು.

**ಶಕುಂ**—ಅಂದಿನಿಂದ ಅವನಲ್ಲಿ ಆಶೆ ನಟ್ಟು ಈವೊತ್ತಿಗೆ ನನ್ನವಸ್ಥೆ ಹೀಗಾಗಿದೆ.

**ಅರಸು**—(ಹರುಷದಿಂದ) ಕೇಳತಕ್ಕದ್ದೇ ಕೇಳಿದೆ. ಮಧ್ಯಾಹ್ನ ಕಾಲದಲ್ಲಿ ಆಕಾಶವು ಮೇಘದಿಂದ ಆಚ್ಛಾದಿತವಾಗಿರಲು ದಾಹವನ್ನು ಪಡಿಸುವಂಥ ಭಾಸ್ಕರನು ಸಂಧ್ಯಾಕಾಲದಲ್ಲಿ ಪರ್ಜನ್ಯದಿಂದ ದೇಹವನ್ನು ತಾನೇ ಶಾಂತಗೊಳಿಸುವವನಂತೆ ಈ ಬಾಧೆ ಬಡಿಸುವಂಥ ಮನ್ಮಥನು ಈಗ ತಾನೇ ದಯದೋರಿದನು.

**ಶಕುಂ**—ಆದರೆ ಆ ರಾಜರ್ಷಿಯು ನನ್ನ ಮೇಲೆ ದಯಮಾಡುವಂತೆ ಏನಾದರೂ ಹಂಚಿಕೆ ಮಾಡಿರಿ. ಇಲ್ಲದಿದ್ದರೆ ನನ್ನ ಹೆಸರಿನಿಂದ ನಿಶ್ಚಯವಾಗಿ ತಿಲೋದಕವನ್ನು ಬಿಟ್ಟುಬಿಡರಿ.

**ಅರಸು**—ಈ ಭಾಷಣದಿಂದಂತೂ ಸಂಶಯವೆಲ್ಲಾ ನಿಷ್ಫೇದನವಾಗಿ ಹೋಯಿತು.

**ಪ್ರಿಯಂ**—(ಮೆಲ್ಲಗೆ) ಅನಸೂಯಾ, ಇವಳ ಮನ್ಮಥವ್ಯಥೆಯು ಬಹು ದೂರ ಹೋಗಿದೆ, ಆದ್ದರಿಂದ ಕಾಲವಿಲಂಬವನ್ನು ಸಹ ಸಹಿಸಲಾರಳು, ಇನ್ನು ಮೇಲೆ ತೀವ್ರವಾಗಲಿಕ್ಕೇಬೇಕು ಬಲ್ಲಿಯಾ. ಯಾವಾತನ ಮೇಲೆ ಇವಳ ಪ್ರೀತಿ ನಟ್ಟಿದೆಯೋ ಆತನು ಪೌರವಕುಲಲಲಾಮನಾಗಿದ್ದಾನೆ. ಇವಳ ಅಭಿಲಾಷೆ ಸ್ತುತ್ಯವೆಂದು ತಿಳಿಯತಕ್ಕದ್ದು ಬಲ್ಲೆಯಾ.

**ಅನ**—ನೀನೆಂಬುವದು ನಿಜ.

**ಪ್ರಿಯಂ**—ಸಖಿಯೆ, ಇವಳ ಆಶೆ ಯೋಗ್ಯಪುರುಷನಲ್ಲಿ ನಟ್ಟಿದೆ. ಸಾಗರವನ್ನು ಬಿಟ್ಟು ಮಹಾನದಿಯೆಲ್ಲಿ ಹೋದೀತೆ? ಆಮ್ರವೃಕ್ಷದ ಹೊರ್ತು ಕಿಸಲಯಗಳಿಂದ ಶೋಭಾಯಮಾನವಾದಂಥಾ ನವಮಲ್ಲಿಕಾವಲ್ಲಿಯನ್ನಂಗೀಕರಿಸಲಿಕ್ಕೆ ಯಾವದು ಯೋಗ್ಯವಾಗಿದೆ?

**ಅರಸು**—(ತನ್ನೊಳಗೆ) ವಿಶಾಖಾ ನಕ್ಷತ್ರಗಳು ಶಶಾಂಕನನ್ನು ಅನುಲಕ್ಷಿಸಿಯೇ ನಡೆದರೆ ಅಲ್ಲಿ ಆಶ್ಚರ್ಯವೇನು?

**ಅನ**— ಸಖಿಯೆ, ಇವಳ ಮನೋರಥವು ವಿಲಂಬವಾಗದಲೆಯೂ ಯಾರಿಗೂ ತಿಳಿಯದಲೆಯೂ ಪೂರ್ಣವಾಗುವಂಥಾ ಉಪಾಯವಾವದನ್ನು ಯೋಚಿಸತಕ್ಕದ್ದು?

**ಪ್ರಿಯಂ**—ವಿಲಂಬವಾಗಬಾರದೆಂಬುವದು ಸುಲಭವಾದ ಮಾತು. ಯಾರಿಗೂ ತಿಳಿಯಬಾರದೆಂಬುವದು ಮಾತ್ರ ಕಠಿಣ.

**ಅನ**—ಅದು ಹ್ಯಾಗೆ?

**ಪ್ರಿಯಂ**—ಆ ರಾಜರ್ಷಿಯು ಒಳ್ಳೇ ಸ್ನೇಹಯುಕ್ತನಾಗಿ ಇವಳನ್ನು ನೋಡಿ ನೋಡಿ ತನ್ನ ಅಭಿಲಾಷೆಯನ್ನು ಪೂರ್ಣವಾಗಿ ಪ್ರಕಟ ಮಾಡಿದ್ದಾನೆ, ಇದಂತು ಬಿಡು, ಚಿಂತಾಜಾಗರಣೆಯಿಂದ ಆತನು ಕೃಶನಾಗಿ ಹೋಗಿದ್ದಾನೆ, ಇದನ್ನ ನಾವು ಪ್ರತ್ಯಕ್ಷ ನೋಡುತ್ತೇವೆ.

**ಅರಸು**—( ತನ್ನ ಶರೀರವನ್ನು ನೋಡಿಕೊಂಡು ) ನಾನು ನಿಜವಾಗಿ ಕೃಶನಾಗಿದ್ದೇನೆ.

( ಶಾರ್ದೂಲವಿಕ್ರೀಡಿತ. )

**ತೊಂಗಲ್‌ತುಂಗಕುಚಂಗಳಿಂ ಗತಿಯೊಳೊಂಗೊಂಬೀ**
**ಕುರಂಗಾಕ್ಷಿಯಂ- ।**
**ಸ್ನಂಗೈ ಕಂಗಳಿಗಿಕ್ಕಿ ಧೇನಿಸಿ ನಿಸಿಂಗಳ್ವಂಗಜಾಂಗಾರದಿಂ ॥**
**ಕೆಂಗಣ್ಣೀರತರಂಗಮುಂಗರಿಯೆ ರಂಗುಂಗುಂದಿತೆನ್ನುಂಗುರಂ ।**
**ಮುಂಗೈ ಹೊಂಗಡೆಯಂಗ ಕುಂಗಿರಲು ತಾಂ ಹಿಂಜಾರಿ**
**ಮುಂಬಪ್ಪುದು ॥**

**ಅನ**— ( ಪ್ರಿಯಂವದೆಗೆ ) ಇದೆಲ್ಲಾ ನಿಜ ಮುಂದೆ ಮಾಡತಕ್ಕ ಉಪಾಯವೇನು ?

**ಪ್ರಿಯಂ**—( ಸ್ವಲ್ಪ ಧೇನಿಸಿ ) ಆತನಿಗೆ ಪ್ರೀತಿಯುಕ್ತವಾದ ಮದನ ಲೇಖವನ್ನು ಬರೆಯತಕ್ಕದ್ದು. ಅದನ್ನು ನಾನು ದೇವರ ನಿರ್ಮಾಲ್ಯವೆಂಬ ನಿಮಿತ್ತದಿಂದ ಹೂವಿನಲ್ಲಿ ಮುಚ್ಚಿ ಆತನಿಗೆ ತಲ್ಪಿಸುತ್ತೇನೆ.

**ಅನ**—ಈ ಉಪಾಯವು ಬಹು ಚನ್ನಾಗಿ ಕಾಣಿಸುತ್ತದೆ; ಇದರ ಮೇಲೆ ಶಕುಂತಲಾ ಏನೆಂಬುವಳೋ ?

**ಶಕುಂ**—ಸಖಿಯರ ಯುಕ್ತಿಯಲ್ಲಿ ಮತ್ತೇನು ಸಂಶಯ ತೆಗೆಯು ತಕ್ಕದ್ದು?

**ಪ್ರಿಯಂ**—ಹಾಗಾದರೆ ನಿನ್ನ ಮನಸ್ಸಿನೊಳಗಿನ ಭಾವಗಳನ್ನೆಲ್ಲಾ ಸ್ವಲ್ಪದರಲ್ಲಿ ಕಾಣಿಸಿ ಒಂದು ಮನೋಹರವಾದಂಥಾ ಪದ್ಯವನ್ನು ರಚಿಸು.

**ಶಕುಂ**—ಹೌದು ನಾನು ರಚಿಸುತ್ತೇನೆ. ಆದರೆ, ಅತ್ತಕಡೆಯಿಂದ ಅನಾದರ ಬಂದೀತಲ್ಲಾ ಎಂದು ನನ್ನ ಹೃದಯ ಭಯಪಡುತ್ತದೆ.

**ಅರಸು**—(ಹರುಷದಿಂದ ತನ್ನೊಳಗೆ)

( ಪೃಥ್ವೀ ವೃತ್ತ. )

**ಅನಾದರದ ಭೀತಿ ಯಾತಕೆಲೆ ಮುಗ್ಧೆ ಕೇಳ್ ಸುಮ್ಮನೆ ।**
**ಮನಂ ನಿರುತ ನಿನ್ನನೇ ನೆನೆಯೆ ಬಂದು ನಿಂದಿಪ್ಪೆನೆ ॥**
**ವಿನಂತಿಪಗೆ ಲಕ್ಷ್ಮಿಬಾರಳು ಬಹಳ್ ಮನಂ ಬಂದೊಡೆ ।**
**ಮನುಷ್ಯನವಳಿಂಗೆ ದುರ್ಲಭನೆ ತಾನೆ ಮೆಚ್ಚಿದೊಡೆ ॥**

**ಸಖಿಯರು**—ನಿನ್ನ ಗುಣಕ್ಕೆ ನೀನೇ ಅಪಮಾನ ಮಾಡಿಕೊಳ್ಳುತ್ತಿಯವ್ವ. ಶರೀರವನ್ನು ಶಾಂತಗೊಳಿಸುವ ಶರತ್ಕಾಲದ ಬೆಳದಿಂಗಳು ಅನಾಯಾಸದಿಂದ ಮೈಮೇಲೆ ಬೀಳುತ್ತಿರಲಾಗಿ ಕೊಡೆಹಿಡಿದು ಮರೆಯಾಗುವರುಂಟೆ ಯಾರಾದರು?

**ಶಕುಂ**—( ಮುಗುಳುನಗೆಯಿಂದ ) ಒಳ್ಳೇದು. ಹಾಗಾದರೆ ನಿಮ್ಮ ಹೇಳಿಕೇಪ್ರಕಾರ ಮಾಡುತ್ತೆನೆ ( ಮನಸ್ಸಿನಲ್ಲಿ ಪದ್ಯರಚನೆಯನ್ನು ಕುರಿತು ಧೇನಿಸುತ್ತಾಳೆ. )

**ಅರಸು**—ಪ್ರಿಯಳ ಮುಖವನ್ನು ನೋಡಲಾಗಿ ಕಣ್ಣೆವೆಗಳು ಸಹ ಮುಚ್ಚಲಿಕ್ಕೆ ಮರೆಯುತ್ತವೆ.

**( ಪದ )**

ರಾಗ-ಭೈರವಿ, ರೂಪಕ.

ದಾಟಿ— " ಮೋರೆದೋರನು ಹರಿಯು ಪರಮ ಜಾರಾ " ಎಂಬ ಪದದಂತೆ.

**ಪದವ ರಚಿಸುತಿಹಳು ಚಂದಿರವದನೆ ಮನದೊಳು ।**
**ಹೃದಯುದಾಸೆದೋರಲು ಬಲು । ಹೆದರಿ । ಬೆದರಿ । ಚದುರಿ ।**
**ಮಧುರಿ ॥ ಪಲ್ಲ.॥**

ಕರದಿ ಗಲ್ಲವಿರಿಸಿ ಒಂದೆ ಕಡೆಗೆ ನೋಡುತಾ ।
ಬೆರಳಿನಿಂದ ಮೆಲ್ಲನೆ ಮೃದು ತಾಳ ಮೆಟ್ಟುತಾ ॥
ಸಿರವನೊಲಿಯೆ ಫಣಿಯೊಳು ಕರಿ-
ಸುರುಳುಗುರುಳು ಉರುಳುತಿರಲು ॥ ೧ ॥
ತವಕದಿಂದಲುಚಿತ ಸೂಚಿಸಿರಲು ಹಿಗ್ಗುತಾ ।
ಕವನರಸದಿ ಕೆನ್ನೆಯೊಳು ಮುಳ್ಳು ನಾಟುತಾ ॥
ಕವಿಯೆ ಬಾಷ್ಪ ಕಣ್ಣೊಳುಕ್ಕು- ।
ತಿವೆ ತನುವತಿ ನವತ ಯುವತಿ ॥ ೨ ॥
ಒಂದೆ ಭ್ರೂಲತೆಯು ಬಾಲೆ ಮೇಲಕೆತ್ತುತಾ ।
ಹೊಂದಿಬರಲು ರಚನೆ ಸಣ್ಣ ಸ್ವರದಿ ನುಡಿಯುತಾ ॥
ಬಂಧನ ಸೌಂದರಿಯುದಾ-
ನಂದದಿಂದ ಮಿಂದು ಬಂದು ॥ ೩ ॥ *

ಇವೆಲ್ಲ ಲಕ್ಷಣಗಳು ನನ್ನ ಮೇಲೆ ಪೂರ್ಣವಾಗಿ ಅನುರಾಗವಿದ್ದಂತೆ ತೋರಿಸುತ್ತವೆ.

**ಶಕುಂ**—ಗೆಳತಿಯರಾ, ನಾನು ಒಂದು ಪದವನ್ನು ಮನಸ್ಸಿನಲ್ಲಿ ರಚಿಸಿದ್ದೇನೆ. ಆದರೆ ಅದನ್ನು ಬರೆಯತಕ್ಕ ಸಾಧನಗಳಿಲ್ಲಲ್ಲ!

**ಪ್ರಿಯಂ**—ಇಕ್ಕೋ ನೋಡು, ಗಿಳಿಯ ಹೊಟ್ಟೆಯ ಹಾಗೆ ಕಮಲ ಪತ್ರವಿಲ್ಲಿ ಬಿದ್ದಿದೆ. ಇದರ ಮೇಲೆ ಉಗುರಿನಿಂದ ಲೇಖಿಸು.

**ಶಕುಂ**—(ಬರೆಯಲಾರಂಭಿಸುತ್ತಾಳೆ) ಗೆಳತಿಯರಾ, ಕೇಳಿರಿ. ಇದರ ಅರ್ಥ ಸಂಗತಿಯು ಚನ್ನಾಗಿ ಕೂಡಿದೆಯೊ ಅಥವಾ ಇಲ್ಲವೋ ನೋಡಿ.

**ಸಖಿಯರು**—ಹಾ! ಓದು ನಾವು ಕೇಳುತ್ತೇವೆ.

(ಶಕುಂತಲೆ ಸ್ವಲ್ಪ ನಾಚುತ್ತಾಳೆ.)

**ಸಖಿಯರು**—ನಾಚು; ಎಷ್ಟು ಮುಖಹೀನತನ! ಓದಬಾರದೆ?

**ಶಕುಂ**—(ಓದುತ್ತಾಳೆ.)

---

* उन्नमितैकभ्रूलतमाननमस्याः पदानि रचयन्त्याः ।
कण्टकितेन प्रथयति मय्यनुरागं कपोलेन ॥ १४ ॥

( ಪದ )

ದಾಟಿ— " ಹೇಗಿರಲೆ ನಾನು ಕಾಂತಾ ಎನಗೆ ಎರವಾದನೆ " ಎಂಬ ಪದದಂತೆ.

ಬಾ ಬಿಡಿಸೊ ಮೋಹನ್ನಾ । ಅಂಗಜ ತಾಪದಿಂದೆನ್ನಾ ॥ ಪಲ್ಲ ॥
ಮನಸು ನಿನ್ನದು ತಿಳಿಯದು ಹಗಲಿರುಳೊಳು ।
ಮನಸಿಜನುರಿ ತಾಳಲಾರೆನೊ ॥ ೧ ॥
ಬಿನ್ನಹ ಮಾಡುವೆ ಮನುಮಥಗೆನೆ ಮನ ।
ನಿನ್ನ ಪಾದಕೆ ಸಿಲುಕಿ ಹೋಯಿತೊ ॥ ೨ ॥
ಚಿತ್ತ ನಿನ್ನೊಳು ಕಳಿದಿಹೆನೆಂದು ಚಿತ್ತಜ ।
ನತ್ಯಂತ ಕೋಪವ ತಾಳ್ದನೋ ॥ ೩ ॥

ಅರಸು—(ಶೀಘ್ರದಿಂದ ಮುಂದಕ್ಕೆ ಹೋಗಿ)

( ಪದ )

ಬಂದೆ ಕಾಮಿನಿ ಮಣಿಯೆ । ಕುಸುಮ ಬಾಣಕೆ ನೊಂದ
ಜಾಣೆಯೆ ॥ ಪಲ್ಲ ॥
ಚದುರೆ ನಿನ್ನನುತಾಪ ಬಡಿಸುವ ನಿಷ್ಠುರ ।
ಮದನನೆನ್ನನು ದಹಿಸುವನೆ ॥ ೧ ॥
ತಮೋಪಹನು ಚೆಲುವ ಕುಮುದಿನಿಗಿಂತ ಚಂ- ।
ದ್ರಮನ ಕೇಳ್ ಕಳೆಗುಂದಿಸುವನೆ ॥ ೨ ॥
ಸಮದುಃಖಿಗಳು ನಾವು ಸಖಿಯೆ ಕೂಡಿದೆವಿನ್ನು ।
ಸುಮಶರನನು ಸೋಲಿಸುವೆವೆ ॥ ೩ ॥

ಸಖಿಯರು—( ಹರುಷದಿಂದ ಎದ್ದು ನಿಲ್ಲುತ್ತಾರೆ ) ನಮ್ಮ ಸಖಿಯಳ ಮನೋರಥವಲ್ಲಿಯ ಫಲವು ಶೀವ್ರದಿಂದಲೇ ಉಂಟಾಯಿತು

---

* तव न जाने हृदयं मम पुनः कामो दिवापि रात्रावपि ।
निर्घृण तपति बलीयस्त्वयि वृत्तमनोरथान्यङ्गानि ॥ १९ ॥

तपति तनुगात्रि मदनस्त्वामनिशं मां पुनर्दहत्येव ।
ग्लपयति यथा शशाङ्कं न तथा हि कुमुद्वतीं दिवसः ॥ १६ ॥

**ಶಕುಂ**—( ಅರಸನನ್ನು ನೋಡಿ ಏಳಲಾರಂಭಿಸುತ್ತಾಳೆ. )

**ಅರಸು**—ಸಾಕು ಸಾಕು; ಏಳುವ ಶ್ರಮವ್ಯಾತಕ್ಕೆ ?

## ( ಪದ )

ದಾಟಿ—" ಮಾತಡದಾ ಬಗೆಯೇನು ಏನು ? । ನಿನ್ನ । ಪ್ರೀತಿಗೊಲಿದ ಪ್ರಾಣನಾಥನೊಡನೆ " ಎಂಬ ಪದದಂತೆ.

**ಆಯಾಸವನು ಪಡಬ್ಯಾಡೆ ಬ್ಯಾಡೆ || ಪಲ್ಲ || ನಿನ್ನ-**
**ಕಾಯಸೇವಕನಿವ ಕೇಳು ಏಳುವಾಯಾಸ || ಅನುಪಲ್ಲ ||**
**ಮೈಯೊಳು ಸಂತಾಪ । ಬಹಳಿರೆ**
**ಮಾಡಿರಲನುಲೇಪ | ಸುಮನದ**
**ಶಯ್ಯೆಯೊಳ್ಮಲಗಿರಲೊಯ್ಯನೊಯ್ಯನಾಯಾಸ || ೧ ||**
**ಕುಸುಮದ ಸೌಗಂಧಾ । ತಾಳಿದ**
**ಮಿಸುನೆವಣ್ಣದ ಸ್ತನದ | ಭಾರಕೆ**
**ಕಿಸಲಯ ಕರಗಳನೂರಿ ಮೀರಿದಾಯಾಸ || ೨ ||**
**ಬಡನಡು ಬಳುಕುತಿರೆ । ನಯದೊಳು**
**ಉಡುಗೆಯ ತಿದ್ದದಿರೆ | ಸಾಬರೆ**
**ಒಡೆಯಳು ಎನಗೆಂದು ತಿಳಿವೆ ಚಲುವೆ ಆಯಾಸ ||೩|| ***

**ಶಕುಂ**—( ತನ್ನಷ್ಟಕ್ಕೆ ) ಹೃದಯವೆ, ಇನ್ನು ಹ್ಯಾಗೆ ಮಾಡುತ್ತಿ ? ಈವೊತ್ತಿನವರೆಗೂ ಕಷ್ಟವೆಂಬ ಕತ್ತಲೆಯಲ್ಲಿ ಇದ್ದ ನನ್ನ ಕಣ್ಣುಗಳು ಈಗ್ಗೆ ಪೌರವ ಕುಲದೀಪಕರನ್ನು ನೋಡಲಿಕ್ಕೆ ಅಂಜುತ್ತವೆ.

**ಅನ**—ಮಹಾರಾಯರೆ, ಅವಳು ಮಲಗಿರುವ ಮೃದು ಶಿಲಾತಲದ ಮೇಲೆ ತಾವು ಸ್ಥಿತರಾಗಬೇಕು.

**ಶಕುಂ**—( ಮಗ್ಗಿಲಾಗಿ ಸ್ವಲ್ಪ ಸರಿದು ಆತನಿಗೋಸ್ಕರ ಸ್ಥಳ ಮಾಡುತ್ತಾಳೆ. )

---

* संदष्टकुसुमशयनान्याशुत्रिमर्दित मृणालवलयानि ।
गुरुपरितापानि न ते गात्राण्युपचारमर्हन्ति ॥ १७ ॥

**ಅರಸು**— ( ಅವಳ ಬಳಿಯಲ್ಲಿ ಕುಳಿತುಕೊಂಡು ಮುಖವನ್ನು ನೋಡುತ್ತ ) ಮೈಯಲ್ಲಿ ಸ್ವಲ್ಪಾದರೂ ದಾಹಕ್ಕೆ ಉಪಶಮನವುಂಟೊ ?

**ಶಕುಂ**— ( ಲಜ್ಜಿತಳಾಗಿ ಕೈಗಳಿಂದ ಮುಖವನ್ನು ಮುಚ್ಚಿಕೊಳ್ಳುತ್ತಾಳೆ. )

**ಪ್ರಿಯಂ**—( ಮುಗುಳುನಗೆಯಿಂದ ) ಮಹಾರಾಜರೆ, ತಾವು ಬಂದಿರೆಲ್ಲಾ ಇದೇ ಔಷಧ ತೆಗೆದುಕೊಂಡಿದ್ದಾಳೆ. ಇನ್ನು ಮೇಲೆ ಉಪಶಮನವಾದೀತು. ತಮ್ಮ ಉಭಯತರ ಪರಸ್ಪರ ಪ್ರೀತಿಯು ಮೇಲೇಯೇ ಕಂಡುಬರುತ್ತದೆ. ಆದರೂ ಸಖಿಯಳಲ್ಲಿದ್ದ ನನ್ನ ಸ್ನೇಹವು ಅವಳ ವಿಷಯದಲ್ಲಿ ಮಾತನಾಡದೆ ಬಿಡುವದಿಲ್ಲ.

**ಅರಸು**—ಹೇ ಭದ್ರೆ ಆಡತಕ್ಕದ್ದನ್ನು ಆಡಿಬಿಡಬೇಕಲ್ಲದೆ ಮನಸ್ಸಿನಲ್ಲಿಡಬಾರದು. ಹೊತ್ತಿಗೆ ಹೇಳದಿದ್ದರೆ ಮುಂದೆ ಹಳಿಹಳಿಯಾಗುತ್ತದೆ.

**ಪ್ರಿಯಂ**—ಹಾಗಾದರೆ ನನ್ನ ಮಾತು ನಡಿಸುತ್ತೇವೆಂದು ತಾವು ನಮ್ಮ ಸಖಿಯುಳಾಣೆ ಕೊಡಬೇಕು.

**ಅರಸು**—ಅವಳಾಣೆ ಯಾತಕ್ಕೆ ? ನನ್ನ ಕೊರಳಾಣೆ ಎಂದರೂ ನಿಮ್ಮ ಮಾತು ನಡಿಸುತ್ತೇನೆ.

**ಪ್ರಿಯಂ**—ಒಳ್ಳೇದು. ಪ್ರಜೆಗಳ ದುಃಖವನ್ನು ಪರಿಹಾರ ಮಾಡುವದು ರಾಜರ ಧರ್ಮವಷ್ಟೆ.

**ಅರಸು**—ಅದಕ್ಕೆ ಸಮಾನವಾದ ಧರ್ಮವು ಇನ್ನು ಯಾವದೂ ಇಲ್ಲ.

**ಪ್ರಿಯಂ**—ಹಾಗಾದರೆ ನಮ್ಮ ಸಖಿಯು ತಮ್ಮ ಚರಣದಲ್ಲಿ ಪ್ರೀತಿ ಇಟ್ಟದ್ದರಿಂದ ಮದನನು ಅವಳನ್ನು ಈ ಅವಸ್ಥೆಗೆ ತಂದಿದ್ದಾನೆ. ಶರಣಾಗತಳನ್ನು ಸ್ವೀಕರಿಸಿ ಬದುಕಿಸಿಕೊಳ್ಳಬೇಕು.

**ಅರಸು**—ಉಭಯತರಲ್ಲಿಯೂ ಇದೇ ಪ್ರಣಯವುಂಟು. ಆದರೂ ತಾವು ಈ ಮಾತಿಗೆ ಅನುಮತಿಯನ್ನು ಕೊಟ್ಟದ್ದು ನಮ್ಮ ಮೇಲೆ ಅನುಗ್ರಹವೇ ಸರಿ.

**ಶಕುಂ**—(ಪ್ರಿಯಂವದೆಯನ್ನು ನೋಡಿ) ಸಖಿಯೇ, ಅಂತಃಪುರದ ಹೆಣ್ಣುಗಳ ವಿರಹದಿಂದ ಪರ್ಯುತ್ಸುಕರಾದ ರಾಜರ್ಷಿಗಳನ್ನು ಅಡವಿಯಲ್ಲಿ ಯಾಕೆ ತಡೆಯುತ್ತಿ ?

**ಅರಸು**—ಅಯ್ಯೋ !

( ಪದ )

ವಾಟಿ—"ಮುದ್ದು ಬಾಲೆ ಬಾರೆ ಬಾರೆ ಬಾ ‖ ಪಲ್ಲ ‖ ನಿನ್ನ ಮುಖದ ಲಾವಣ್ಯವನ್ನು ನೋಡಿ ಹುಣ್ಣಿವೆ ದೊರೆಯು ಸಣ್ಣನಾಗಿ ಶಿವನ ಸೇರಿದಾ" ಎಂಬ ಪದದಂತೆ.

**ನುಡಿಯಿಂದ ನೋಯಿಸ ಬೇಡವೆ ‖ ಪಲ್ಲ ‖**
**ನಿನ್ನ ಸೇವೆಗಾಸೆಗೊಂಡು**
**ಯೆನ್ನ ನಗರವನ್ನು ಬಿಟ್ಟು**
**ವನ್ಯನಂತೆ ತೊಳಲುತಿಹೆನೆ ‖ ೧ ‖**
**ಇರುಳು ಹಗಲು ನಿನ್ನ ಧ್ಯಾನ**
**ಮರೆಸಿತೆಲ್ಲ ಕಾರ್ಯಗಳನು**
**ಎರಳೆಗಣ್ಣೆ ನಿನ್ನೊಳಾರ್ತನೆ ‖ ೨ ‖**
**ಸ್ಮರನು ತನ್ನ ಶರದಿ ಪೊಡಲೆ |**
**ಮರುಗಿಸಲರೆಜೀವಿಯಾದೆ |**
**ಮರಳಿಯೆನ್ನ ಕೊರಳಗೊಯ್ವರೆ ‖ ೩ ‖ ***

**ಅನ**— ಮಹಾರಾಜರೆ, ಅರಸರಿಗೆ ಅನೇಕ ವಲ್ಲಭೆಯರಿರುವರೆಂದು ಕೇಳುತ್ತೇವೆ. ನಾವು ಅನುಮತಿಯನ್ನು ಕೊಟ್ಟುದರಿಂದ ಮುಂದೆ ನಮ್ಮ ಗೆಳತಿಯ ಹಿರಿಯರು ಅವಳವಸ್ಥೆಯನ್ನು ಕೇಳಿ ಮರುಗುವಂತೆ ಮಾತ್ರ ಮಾಡಬಾರದು.

**ಅರಸು**—ಹೇ ಭದ್ರೇ, ಬಹಳ ಮಾತುಗಳಿಂದ ಏನು ಪ್ರಯೋಜನ? ನಾನು ಇಷ್ಟೇ ಹೇಳುತ್ತೇನೆ ಕೇಳು.

---

* इदमनन्यपरायणमन्यथा हृदयसंनिहिते हृदयं मम
यदि समर्थयसे मदिरेक्षणे मदनबाणहतोऽस्मि हतः पुनः ॥१८॥

## ( ಪದ )

ದಾಟಿ—" ಪರರಿಂದ ಮಾತು ಕೇಳಬ್ಯಾಡೆ ಪ್ರಾಣನಾಯಕಿ " ಎಂಬ ಪದದಂತೆ.

**ಬಿಡು । ಚಿಂತೆಮನದ । ಭ್ರಾಂತಿಗಳೆದು । ಶಾಂತಳಾಗಿರೆ॥ಪಲ್ಲ॥**

**ಬಹು । ಮಡದಿರಿರುವ । ಗೊಡಿವೆಯಾಕೆ**

**ಕಡಲು ಸೀರೆಯು ।**

**ಈ । ಪೊಡವಿ ಮತ್ತೀ । ಹುಡುಗೆ ಮೂರನೆ ।**

**ಒಡೆಯುಳಿಲ್ಲವೆ ॥ ೧ ॥**

**ಅರ । ವಿಂದ ಮುಖಿಯು । ಮುಂದೆ ಹೇಳ**

**ದೊಂದು ಮಾಡೆಸೆ**

**ಇವ । ಳೆಂದ ಮಾತು । ಹೊಂದಿಸಲಾ-**

**ನಂದ ಬಡುವೆಸೆ ॥ ೨ ॥**

**ಕ । ಸ್ತುರಿಯುನೊಯ್ದು । ಎರೆಯು ಮಣ್ಗೊಳು**

**ಬೆರಿಸುತಿರುವರೆ ।**

**ಎವೆ । ಎರಡು ಕಣ್ಣಿನ । ಪೊರೆವ ತೆರದಿ**

**ನಿರುತ ಕಾಯುವೆ ॥ ೩ ॥ ***

**ಸಖಿಯುರು**—ಇನ್ನು ಮೇಲೆ ನಾವು ನಿಶ್ಚಿಂತರಾದೆವು.

**ಶಕುಂ**—( ಮನಸಿನೊಳಗಿನ ಆನಂದವನ್ನು ಮುಚ್ಚುವದಕ್ಕೆ ವ್ಯರ್ಥ ಪ್ರಯತ್ನ ಮಾಡುತ್ತಾಳೆ. )

**ಪ್ರಿಯಂ**—( ಅನಸೂಯೆಗೆ ಮೆಲ್ಲನೆ ) ನೋಡಿದೆಯೇನೆ ನಮ್ಮ ಸಖಿಯನ್ನು ? ಬೇಸಗೆಯ ಬಿಸಿಲಿನಿಂದ ಶ್ರಮಿಸಲ್ಪಟ್ಟ ಮಯೂರಿಯು ಮುಂಗಾರಿಯ ಮಳೆಯಿಂದ ಮೆಲ್ಲಮೆಲ್ಲನೆ ಅವಸಾನವನ್ನು ಹೊಂದುವಂತೆ ಇವಳ ಮುಖದಲ್ಲಿ ಕಲೆಗಳು ಕ್ಷಣಕ್ಷಣಕ್ಕೆ ಹೆಚ್ಚಾಗುತ್ತವೆ !

---

* परिग्रहबहुत्वेऽपि द्वे प्रतिष्ठे कुलस्य मे
समुद्ररसना चोर्वी सखी च युवयोरियम् ॥ १९ ॥

**ಶಕುಂ**—ಗೆಳತಿಯರಾ, ನಾನು ನಿಮಗೆ ಏನಾದರೂ ಕೆಟ್ಟ ಮಾತ ನಾಡಿದ್ದು ಮನಸಿಗೆ ಮಾತ್ರ ಹಚ್ಚಿಕೊಳ್ಳಬೆಡಿರಮ್ಮ; ಕ್ಷಮಿಸಿರಿ. ಅತಿಸ್ನೇಹ ವಿರುವದರಿಂದ ಒಂದು ವೇಳೆ ಬಿರುಸು ಮಾತುಗಳು ಬರುತ್ತವೆ.

**ಪ್ರಿಯಂ**—ಯಾರಾದರೂ ತಪ್ಪು ಮಾಡಿದರೆ ಅರಸರೇ ಕ್ಷಮಿಸತಕ್ಕ ವರು. ಅವರಿಗೇ ಹೇಳಿಕೊಳ್ಳವ್ವ. ನಾವೆಷ್ಟರವರು?

**ಶಕುಂ**— ಕ್ಷಮಿಸುವರೆಂದು ನಾನು ನಂಬುತ್ತೇನೆ.

**ಅರಸು**—(ಮುಗುಳು ನಗೆಯಿಂದ) ನಿನ್ನ ಅವಯವಗಳಿಂದ ಒತ್ತ ಲ್ಪಟ್ಟಂಥ ಪುಷ್ಪಶಯ್ಯೆಯಲ್ಲಿ ನಿನ್ನ ಸಖಿಯರಂತೆ ನನ್ನನ್ನು ಕೂಡಗೊಟ್ಟರೆ ನಾನು ಕ್ಷಮಿಸುತ್ತೇನೆ.

**ಪ್ರಿಯಂ**—(ನಗುತ್ತ) ಚಂದಾಗಿ ಅವರನ್ನು ಕೂಡಿಸಿಕೊಳ್ಳಬಾರ ದೇನೆ? ಬಿಸಿಲಿನಲ್ಲಿ ದಣಿದು ಬಂದಿದ್ದಾರೆ. ದೇಹಕ್ಕೆ ಸ್ವಲ್ಪ ಶಾಂತಿಯಾಗಲಿ!

**ಶಕುಂ**— ಏನೇ ಕೆಟ್ಟ ಹುಡುಗೆ, ಹೋಗತ್ತ! ನನ್ನ ಮೈಯ್ಯಲ್ಲಿ ನೆಟ್ಟಗಿಲ್ಲದಾಗ ಸಹ ಛೇಡಿಸುತ್ತಾಳೆ.

**ಪ್ರಿಯಂ**— (ಅನಸೂಯೆಗೆ ಕಣ್ಣುಸನ್ನೆಮಾಡಿ) ಅನಸೂಯಾ, ಅಕ್ಕೋ ನೋಡಿದೆಯಾ, ಆ ಹರಿಣಬಾಲಕವು ತನ್ನ ಮಾತೆಯನ್ನು ಹುಡುಕುತ್ತದೆ. ಅದನ್ನು ಅದರ ಹತ್ತರ ಒಯ್ದು ಮುಟ್ಟಿಸುವ. (ಎದ್ದು ಹೋಗಲಾರಂಭಿಸುತ್ತಾಳೆ.)

**ಅನ**—ಒಬ್ಬಳಿಗೇ ಸಿಗಲಿಕ್ಕಿಲ್ಲವ್ವ, ನಾನೂ ಬರುತ್ತೇನೆ. (ಅವಳೂ ಏಳುತ್ತಾಳೆ.)

**ಶಕುಂ**—ಇಬ್ಬರೂ ಹೋಗುವಿರೇನೆ? ಒಬ್ಬರಾದರೂ ನನ್ನ ಬಳಿಯಲ್ಲಿ ಇರಬಾರದೆ?

**ಸಖಿಯರು**—ಪೃಥ್ವಿಯನ್ನೇ ಸಂರಕ್ಷಿಸುವಂಥ ಸಮರ್ಥರು ನಿನ್ನ ಬಳಿಯಲ್ಲಿ ಇರಲಿಕ್ಕೆ ಎರಡನೆಯವರಿಂದ ಏನು ಪ್ರಯೋಜನ? (ಹೊರಟು ಹೋಗುತ್ತಾರೆ.)

**ಶಕುಂ**— ಎಂಥವರೇ ನಮ್ಮವ್ವಗಳಿರಾ! ನನ್ನೊಬ್ಬಳನ್ನೇ ಬಿಟ್ಟು ಹೋದಿರೇನೇ?

**ಅರಸು**— ಹೋಗಲಿ ಏನೂ ಚಿಂತೆಯಿಲ್ಲ. ಈ ಸೇವಕನು ಸೇವೆ ಗೋಸುಗ ಸಮೀಪದಲ್ಲಿಯೆ ಸಿದ್ಧನಾಗಿದ್ದಾನೆ.

( ಪದ )

ದಾಟಿ—"ಬೇಡರ ಬ್ಯಾಡೋ ಮದನಸುಂದರಾ । ಆ ಸಖಿಯ ಭಯದಿ ॥ ಬೆದರ ಬ್ಯಾಡೋ ಪ್ರಿಯಾ । ಚದುರೆಯ ಕಡೆಯವರು ಎನ್ನ । ಸದನದ ಕಡೆ ಸುಳಿಯುದಿಲ್ಲ । ಮದನ ಕದನದೋಳು ಮನದಿ" ಎಂಬ ಪದದಂತೆ.

ಬೆದರಬ್ಯಾಡೆ ಮದಿರಲೋಚನೆ । ನಾ ಬಳಿಯಲಿರಲು ॥ಪಲ್ಲ॥
ಬೆದರಬ್ಯಾಡೆ ಕೇಳ್ ಸಖಿಯರ
ಬದಲು ಸೇವೆಗಾಸೆಗೊಂಡು
ಎದುರಿನೊಳ್ ಕೈ ಜೋಡಿಸಿ ನಾ ।
ಬದಿಯಲಿ ನಿಲುತಲಿ, ಹಲುಬುವೆ ॥ ಅನುಪಲ್ಲ ॥
ಚೆಲುವೆ ನಿನ್ನ ಶರೀರ ತಾಪ ।
ಗಳೆಯುವೆ ನಾ ತೊಡೆಯೊಳಿಟ್ಟು ।
ನಳಿನದಳದ ತಾಲವೃಂತ ।
ದೆಳೆ । ಸುಳಿ । ತಿಳಿ । ಚಳಿ । ಯೊಲ । ರಿಲಿ ॥ ೧ ॥
ಮನಕೆ ಬಂದರರುಣ ಪದುಮ
ಪೋಲ್ವ ಹಿಮ್ಮಡಿಗಳನು ಕೈಯೊ
ಳೆನಗೆ ನೀಡೆ ಮೆಲ್ಲನೊತ್ತುವೆ
ಮನ । ಸಿನ । ಘನ । ವಿನತಿ । ಗೆಣತಿ ॥ ೨ ॥
ನಯದಿ ಬೇಡಿಕೊಂಬೆ ಯೆನ್ನೊಳು
ದಯವ ಮಾಡೆ ಮಾನೆ ನಿನ್ನಯ
ಬಯಕೆಯಂತೆ ನಡೆವೆ ಹರಿಣ
ನಯ । ನೆ ಎ । ನ್ನಯ । ಬಯಲ್ । ಭಯವ್ಯಾಕೆ ॥ ೩ ॥

---

* किं शीतलैः क्लमविनोदिभिरार्द्रवातान्संचारयामि नलिनीदलतालवृन्तैः
अङ्के निधाय करभोरु यथा सुखं ते संवाहयामि चरणावुत पद्मताम्रौ ॥ २० ॥

**ಶಕುಂ**— ನಾನು ಸನ್ಮಾನವನ್ನು ಕೊಡತಕ್ಕಂಥವರಿಗೆ ಅಪಮಾನ ವನ್ನು ಮಾಡಿ ಹ್ಯಾಗೆ ಅಪರಾಧಿಯಾಗಲಿ? (ಎದ್ದು ಮೆಲ್ಲನೆ ಶ್ರಮದಿಂದ ಹೋಗಲಾರಂಭಿಸುತ್ತಾಳೆ.)

**ಅರಸು**—ಹೇ ಸುಂದರಿ, ನೀನು ಈ ಅವಸ್ಥೆಯಲ್ಲಿ ಇಂಥ ಬಿಸಿಲಿನಲ್ಲಿ ಎಲ್ಲಿ ಹೋಗುತ್ತಿ?

**( ಪದ )**

"ರಾಗ—ಸಾರಂಗ"

**ಸಖಿಯೇ ಪೋಗುವದೊಳಿತಲ್ಲಾ**
**ಬಲು ಬಿಸಿಲೊಳು ಮಳಲು ಕಾಯ್ದಿರೆ || ಪಲ್ಲ ||**
**ತಳರ್ದ ಲತೆಯೊಳನೆಳಲನೆ**
**ನಳಿನ ದಳದ ತಾಲಸೆ ||**
**ಹಳಿದಲರಿನ ಶಯನದಿಂ-**
**ದಿಳಿದು ಬಲು ಜಳದೊಳು ಬಳಕುತ || ೧ ||**

( ಹೀಗೆಂದು ಕೈ ಹಿಡಿದು ಹಿಂತಿರುಗಿಸುವನು. )

**ಶಕುಂ**—ಬಿಡಿರಿ ಬಿಡಿರಿ! ಇನ್ನೊಮ್ಮೆ ನನ್ನ ಸಖಿಯರನ್ನು ಕ ಬರುತ್ತೇನೆ. ನಾನು ಕಾಮಾಗ್ನಿಯಿಂದ ಸಂತಪ್ತಳಾಗಿದ್ದರೂ ಯಾವದಾದ ರೊಂದು ಕಾರ್ಯವನ್ನು ಮಾಡಲಿಕ್ಕೆ ಸ್ವತಂತ್ರಳಲ್ಲ.

**ಅರಸು** –( ತಳ್ಳೊಳಗೆ) ಇವಳ ಸಮ್ಮತಿಯಿಲ್ಲದೆ ಮನಸ್ಸು ಅಂಜುತ್ತದೆ.

**ಶಕುಂ**—( ಆತನಿಗೆ ಕೇಳಿಸುವ ಹಾಗೆ ತನ್ನಷ್ಟಕ್ಕೆ ) ಇವರಂತೂ ನನ್ನನ್ನು ಬಿಡಲೊಲ್ಲರು. ಐ ನನ್ನ ದೈವವೆ! ಈ ವೇಳೆಯಲ್ಲಿ ಸಖಿಯರೂ ಬಳಿಯಲ್ಲಿರಬಾರದೆ?

**ಅರಸು**—ನಿನ್ನ ದೈವವು ಎದುರಿನಲ್ಲಿ ಕೈಮುಗಿದುಕೊಂಡು ನಿಂತಿ ರಲು ಅದಕ್ಕೇನು ಕಾರಣ ದೂಷಣವಿಡುತ್ತಿ?

---

**ಸಾಹಿತ್ಯ**—ನೀ ಸ ರೀ ರೀ ಪ ಮ ರೀ ಸಾ । ರೀ ಸಾ । ನಿ ಸ ರಿ ನಿ ಸ ರಿ ನಿ ಸ ರಿ ಸಾ ನಿ ಪಾ ||ಪಲ್ಲ||
ರಿ ರಿ ಮ ರಿ ಮ ಪ ನಿ ಮ ಪ ನಿ ಸ । ರಿ ನಿ ಸ ರಿ ಮ ರಿ ಸ ರಿ ಸ । ರಿ ರಿ ಸಾ ಸಾ ನಿ
ನಿ ಪ ಮ ಪ ಸಾ ಸಾ ನಿ ನಿ ಪ ನಿ ಮ ಪ ಪ ಮ ರಿ ಮ ರಿ ಸ ||

**ಶಕುಂ**—ಈ ವೇಳೆಯಲ್ಲಿ ಅವು ನನ್ನನ್ನು ಸ್ವತಂತ್ರಳನ್ನು ಮಾಡಲಿಲ್ಲಲ್ಲವೆ? ಅದಕ್ಕೆ ನಾನು ದೂಷಣವಿಡುತ್ತೇನೆ.

**ಅರಸು**— (ತನ್ನೊಳಗೆ)

( ಪದ )

ದಾಟಿ—"ಕದವನಿಕ್ಕಿದಳಿವಕೋ । ಗಯ್ಯಾಳಿ ಮೂಳಿ" ಎಂಬ ಪದದಂತೆ.

**ಹೆಣ್ಣಿನ ಗುಣಗಳಿವೇ ॥ ಚಿಕ್ಕ ಪ್ರಾಯದ ॥ ಪಲ್ಲ ॥**
**ತನ್ನೊಳಗಾರ್ತಿಹ । ನನ್ನು ಕೂಡದೆ ಪ್ರೀತಿ ।**
**ಯನ್ನೆದೋರುತ ವ್ಯಾಳ್ಯ । ವನ್ನೆಗಳೆವರಯ್ಯಾ ॥ ೧ ॥**
**ಕಣ್ಣಿನ ಪ್ರೇಮದಿಂ । ಹೊನ್ನು ಸೋಲಿಸುವ ಲಾ—**
**ವಣ್ಯದಾಶೆಯೊಳಾಂಕಿ । ಹಣ್ಣು ಮಾಡುವರಯ್ಯಾ ॥ ೨ ॥**
**ಕಮ್ಮಗೋಲನ ಬಾಧೆ । ತಮ್ಮೊಳು ಹೆಚ್ಚಲು ।**
**ದಮ್ಮನೆದಣಿವರು । ಸುಮ್ಮನಿರುವರಯ್ಯಾ ॥ ೩ ॥**
**ಸುಮಶರನ ಭಯದಿ । ಸಮೊಪಿಸಿದನುಕೂಲ ।**
**ಸಮಯದೊಳಂಗಜ । ಸಮರಕಂಜುವರಯ್ಯ ॥ ೪ ॥**

**ಶಕುಂ**—(ಹೋಗಲಾರಂಭಿಸುತ್ತಾಳೆ.)

**ಅರಸು**—(ತನ್ನೊಳಗೆ) ಈ ಹೊತ್ತಿನಲ್ಲಿ ಇವಳನ್ನು ಬಿಡಬಾರದು. (ಬೆನ್ನುಹತ್ತಿ ಹೋಗಿ ಸೆರಗು ಹಿಡಿಯುತ್ತಾನೆ.)

**ಶಕುಂ**— ಪೌರವರಾಯರೆ, ವಿನಯವಿರಲಿ; ಇದೇನು ಚಂದ? ತಪೋವನದ ನಾಲ್ಕೂ ದಿಕ್ಕಿನಲ್ಲಿ ಋಷಿಗಳು ಸಂಚರಿಸುತ್ತಾರೆ.

**ಅರಸು**—ಇಷ್ಟು ಯಾತಕ್ಕೆ ಅಂಜುವದು? ಹಿರಿಯರ ಭಯ ಸಾಕು ಇನ್ನು! ಋಷಿಗಳು ಈ ವಿಷಯದಲ್ಲಿ ನಿನಗೇನೂ ದೋಷವಿಡಲಾರರು. ಅವರು ಎಲ್ಲ ಧರ್ಮಗಳನ್ನು ಬಲ್ಲಂಥವರಿದ್ದಾರೆ.

( ಪದ )

ದಾಟಿ—ನಿನಗೇತಕನು ಮಾನಾ । ಜಾಣಾನೆ ॥ ಪಲ್ಲ ॥ ಮಾತಿಲಿ ಮಧುರಾ । ನೀತಿಲಿ ಚದುರಾ । ಸೋತುಬಂದೆನೋ ಮನಪೂರಾ । ಧೀರಾ ॥ ಎಂಬ ಪದದಂತೆ.

**ನಿನಗ್ಯಾತಕೆ ಅನುಮಾನ । ಬಾ ಬಾರೆ ॥ ಪಲ್ಲ ॥**
**ಮುನಿತನುಜೆಯರೊಳ್ । ಮನಕೆ ಬಂದವರ ।**
**ನ್ನನುಸರಿಸಿ ಬಾಳ್ದವರಿಲ್ಲೇ । ಬಲ್ಲೆ ॥ ೧ ॥**

**ಗಾಂಧರ್ವವಿಧಿ । ಯಿಂದ ಕೂಡಿದರೆ**
**ಹಿಂದೆ ಕೋಪಿಸಿದರಾರು । ಭೀರು ॥ ೨ ॥**
**ಈ ಪರಿಯಲಿ ಸಂ । ತಾಪದೊಳಿರೆ ನಾ ।**
**ನೀ ಪೋಗ ಪೇಳಲಿಬ್ಯಾಡೆ । ಕೂಡೆ ॥ ೩ ॥**
**ಆ ಕುಲಪತಿ ನಿ- । ನ್ನೀ ಕೆಲಸಕೆ ತಾ ।**
**ನ್ಯಾಕುಲನಾಗಾಭಯವ್ಯಾಕೆ । ಸಾಕೆ ॥ ೪ ॥**

( ದೈನ್ಯದಿಂದ ) ಬಾರೆ, ಬರುವದಿಲ್ಲೆ ?

**ಶಕುಂ**—ಇಲ್ಲ.

**ಅರಸು**—ಹಾಗಾದರೆ ನಾನು ಹೋಗುತ್ತೇನೆ. ( ನಾಲ್ಕು ಹೆಜ್ಜೆ ಹೋಗಿ ಹಿಂತಿರುಗಿ ನೋಡುತ್ತಾನೆ. )

**ಶಕುಂ**—( ತಾನೂ ನಾಲ್ಕೈದು ಹೆಜ್ಜೆ ಹೋಗಿ ಹಿಂದೆ ನೋಡುತ್ತಾಳೆ ) ನಾನು ತಮ್ಮ ಮಾತು ಕೇಳಿದಿದ್ದರೂ ಇಷ್ಟು ಮಾತಾಡಿದ ಸ್ನೇಹವನ್ನು ಮಾತ್ರ ಮರೆಯಬಾರದು.

**ಅರಸು**—ಪ್ರಿಯೆ, ನಾನು ಹ್ಯಾಗೆ ಮರೆಯಲಿ? ಸಂಧ್ಯಾಕಾಲದಲ್ಲಿ ವೃಕ್ಷದ ಛಾಯೆಯು ಎಷ್ಟು ದೂರದಲ್ಲಿ ಹೋದರೂ ಮೂಲವನ್ನು ಹೇಗೆ ಬಿಡುವದಿಲ್ಲವೊ ಹಾಗೆ ನನ್ನಿಂದ ನೀನು ಎಷ್ಟು ದೂರ ಹೋದರೂ ಈ ಹೃದಯವನ್ನು ಬಿಡಲಾರೆ ಬಲ್ಲೆಯಾ ?

**ಶಕುಂ**—( ತನ್ನೊಳಗೆ ) ನನ್ನ ಹೆಜ್ಜೆಗಳೇ ಮುಂದಕ್ಕೆ ಸಾಗಲೊಲ್ಲವು. ಈ ಕುರುವಕ ವೃಕ್ಷದ ಹಿಂದೆ ಅಡಗಿಕೊಂಡು ಇವರು ವಿರಹದಿಂದ ಏನೇನು ಮಾತನಾಡುತ್ತಾರೋ ಕೇಳುವೆ. ( ಅಡಗಿಕೊಳ್ಳುತ್ತಾಳೆ. )

**ಅರಸು**—( ತನ್ನೊಳಗೆ ) ಶಕುಂತಲೆ, ಹೋದೆಯಾ! ಅನುರಾಗದಲ್ಲಿ ಏಕರಸನಾದಂಥವನನ್ನು ಬಿಟ್ಟು ನಿರಪೇಕ್ಷೆಯಿಂದ ಹೋದೆಯಾ! ಇದು ನಿನಗುಚಿತವೇ ? ಅಯ್ಯೊ! ಹೆಣ್ಣಿನ ರೂಪವು ಇಷ್ಟು ಮೃದುಲವಾಗಿದ್ದರೂ ಅವರ ನಿರ್ದಯ ಹೃದಯವು ಶಿರೀಷಕುಸುಮದ ದೇಂಟಿನಂತೆ ಕಠಿನವಾಗಿರುವದಲ್ಲ! ಶಕುಂತಲಾ, ಹೋದೆಯಾ!

**ಶಕುಂ**—(ತನ್ನೊಳಗೆ) ಈ ಮಾತುಗಳನ್ನು ಕೇಳಿ ನಾನು ಹೇಗೆ ಹೋಗಲಿ!

**ಅರಸು**—(ತನ್ನೊಳಗೆ) ಪ್ರಿಯಳಿಂದ ರಹಿತವಾದ ಈ ಶೂನ್ಯಲತಾ ಮಂಡಪದಲ್ಲಿ ನಾನು ಏನು ಮಾಡತಕ್ಕದ್ದಿನ್ನು? (ಆನಂದದಿಂದ) ಇಕೋ, ಇಲ್ಲಿ ಅವಳ ಕೈಯ್ಯೊಳಗಿನ ಮೃಣಾಳವಲಯ ಬಿದ್ದಿದೆ. (ಅದನ್ನು ಬಹುಮಾನದಿಂದ ಎತ್ತಿಕೊಳ್ಳುತ್ತಾನೆ.)

**ಶಕುಂ**—(ಕೈನೋಡಿಕೊಳ್ಳುತ್ತ ತನ್ನೊಳಗೆ) ಅಯ್ಯ; ನನ್ನ ಕೈಯ್ಯಲ್ಲಿಯ ಕಮಲನಾಲದ ಕಂಕಣವು ಬಿದ್ದು ಹೋಗಿದೆ!

**ಅರಸು**—(ಕಂಕಣವನ್ನು ತನ್ನ ಹೃದಯಕ್ಕೆ ಹಚ್ಚಿಕೊಂಡು ತನ್ನೊಳಗೆ) ಇದರ ಸ್ಪರ್ಶವಾದರೂ ಬಹು ಸಮಾಧಾನವನ್ನು ಕೊಡುತ್ತದೆ. ಪ್ರಿಯೆ, ನಿನ್ನ ಕೈಯ್ಯಲ್ಲಿಯ ನಿರ್ಜೀವಿಯಾದ ಲೀಲಾಭರಣವುಸಹ ನನ್ನನ್ನು ಸಂತೋಷಪಡಿಸುತ್ತದೆ ಬಲ್ಲೆಯಾ?

**ಶಕುಂ**—(ತನ್ನೊಳಗೆ) ನಾನು ಇನ್ನು ಇದೇ ನೆವದಿಂದ ಅವರ ಮುಂದೆ ಹೋಗುವೆನು. (ಅಡಗಿದ್ದವಳು ಮೆಲ್ಲನೆ ಆತನ ಬಳಿಗೆ ಹೋಗುತ್ತಾಳೆ.)

**ಅರಸು**—(ನೋಡಿ ಆನಂದದಿಂದ) ಅಹಾ! ನನ್ನ ಪ್ರಾಣದರಸಿಯು ತಿರುಗಿ ಬಂದಳು. ತೃಷೆಯಿಂದ ಗಂಟಲೊಣಗಿದ ಚಾತಕಪಕ್ಷಿಯ ಬಾಯಿಯಲ್ಲಿ ಮೇಘದಿಂದ ನೂತನವಾದ ಹನಿಗಳು ಬಿದ್ದಂತೆ ಇವಳಿಗಾಗಿ ಹಲಬುತಿರುವ ನನಗೆ ದೈವವು ಪುನಃ ದಯಮೋರಿತು.

**ಶಕುಂ**—(ಪ್ರಕಾಶವಾಗಿ) ಆರ್ಯರೆ, ನಾನು ಪರ್ಣಕುಟಿಯ ಅರ್ಧ ದಾರಿಯ ವರೆಗೆ ಹೋದ ಮೇಲೆ ನನ್ನ ಕೈಯಲ್ಲಿಯ ಮೃಣಾಲವಲಯವು ಉಚ್ಚಿಬಿದ್ದದ್ದು ಕಂಡೆ. ನೀವೇ ಅದನ್ನು ತೆಗೆದುಕೊಂಡಿರಬಹುದೆಂದು ನನ್ನ ಮನಸ್ಸು ಹೇಳುತ್ತದೆ. ಅದನ್ನು ಮಾತ್ರ ದಯಮಾಡಿ ಕೊಡಬೇಕು. ಮುನಿಜನರಿಗೆ ತಿಳಿದರೆ ನನ್ನ ಮಾನ ಉಳಿಯಲಿಕ್ಕಿಲ್ಲ.

**ಅರಸು**—ನನ್ನದೊಂದು ಮಾತುಂಟು; ಅದನ್ನು ನಡಿಸಿದರೆ ಸೈ, ನಾನು ತಿರುಗಿ ಕೊಡುತ್ತೇನೆ.

**ಶಕುಂ**—ಅದು ಯಾವದು?

**ಅರಸು**—ನಾನೇ ಕೈಯಲ್ಲಿಡಿಸುವವನು.

**ಶಕುಂ**—ಯಾರು ಬ್ಯಾಡೆನ್ನುವರು ? ( ಮುಂದಕ್ಕೆ ಬರುತ್ತಾಳೆ. )

**ಅರಸು**—ಇದನ್ನು ಇಡಿಸಬೇಕಾದರೆ ನಾವು ಮೊದಲೆಲ್ಲಿ ಕುಳಿತಿದ್ದೆವೊ ಅಲ್ಲಿಯೇ ಹೋಗಬೇಕು.

**ಶಕುಂ**--ಈ ಹೊತ್ತಿನಲ್ಲಿ ನೀವು ಹ್ಯಾಗೆ ಹೇಳುತ್ತೀರಿ ಹಾಗೆ ಕೇಳಬೇಕು. ಉಪಾಯವೇನು? ( ಇಬ್ಬರೂ ಲತಾಮಂಟಪದಲ್ಲಿ ಹೋಗಿ ಕುಳಿತು ಕೊಳ್ಳುತ್ತಾರೆ. )

**ಅರಸು**—( ಕೈಹಿಡಿದು ) ಆಹಾ ಸ್ಪರ್ಶವೇ! ಹರಕೋಪಾಗ್ನಿಯಿಂದ ದಗ್ಧನಾದಂಥ ಮನ್ಮಥನನ್ನು ದೇವತೆಗಳು ಅಮೃತವೃಷ್ಟಿಗೈದು ಪುನಃ ಜೀವಿಸಿ ಕೊಂಡಂತೆ ಈ ಕಾಮಲತೆಯನ್ನು ಪೋಲುವ ಮುಂಗೈಯು ಶೋಭಿಸುತ್ತದೆ. ನೋಡಿದೆಯಾ ಸುಂದರಿ?

**ಶಕುಂ**—ಆರ್ಯಪುತ್ರರೆ, ತೀವ್ರದಿಂದ ಇಡಿಸಿರಿ; ಎಷ್ಟು ಹೊತ್ತು ?

**ಅರಸು**--( ಆನಂದದಿಂದ ತನ್ನೊಳಗೆ) ಆರ್ಯಪುತ್ರನೆಂಬುವ ಸಂಬೋಧನೆಯಿಂದ ತಮ್ಮ ಪತಿಗೆ ಮಾತ್ರ ಕರೆಯುವದುಂಟು. ( ಪ್ರಕಾಶವಾಗಿ ) ಹೇ ಸುಂದರೀ, ಈ ಮೃಣಾಳವಲಯವು ನಿನ್ನ ಕೈಗೆ ಬಹಳ ಸಡಿಲಾಗುತ್ತದೆ. ಅದನ್ನು ಹಾಳತಾಗಿ ಮಾಡುತ್ತೇನೆ.

**ಶಕುಂ**--( ಮುಗುಳುನಗೆಯಿಂದ ) ತಮ್ಮ ಮನಸಿಗೆ ಹ್ಯಾಗೆ ಬರತಮೋ ಹಾಗೆ ಆಗಲಿ.

**ಅರಸು**—( ಕೈಯಲ್ಲಿಡಿಸಿ ) ಹೇ ಸುಂದರಿ ನೋಡಿದೆಯಾ, ಈಗ ಈ ಮೃದುಲವಾದ ಮೃಣಾಳವಲಯವು, ಬಿದಿಗೆಯ ಚಂದ್ರನು ನಿನ್ನ ಸೌಂದರ್ಯಕ್ಕೆ ನಾಚಿ ಅಂಬರದಿಂದಿಳಿದು ನಿನ್ನ ಕರಭೂಷಣನಾಗಿದ್ದಾನೆಂಬಂತೆ ಕಾಣಿಸುತ್ತದೆ.

**ಶಕುಂ**—( ಕಣ್ಣು ತಿಕ್ಕುತ್ತ ) ನನಗೆ ಕಾಣಿಸುವದಿಲ್ಲ. ಕಣ್ಣಲ್ಲಿ ಕಮಲದ ಎಸಳು ಬಿತ್ತು. ಹಾಯ್! ಉರಿಯುತ್ತದೆ.

**ಅರಸು**—( ಮುಗುಳುನಗೆಯಿಂದ ) ನನಗೆ ಅಪ್ಪಣೆಕೊಟ್ಟರೆ ಮೆಲ್ಲನೆ ಊದಿ ತೆಗೆಯುತ್ತೇನೆ.

**ಶಕುಂ**—ನನ್ನ ಮೇಲೆ ದಯಮಾಡಿದಂತಾದೀತು. ಆದರೂ ತಮ್ಮ ವಿಶ್ವಾಸವಿಲ್ಲ.

**ಅರಸು**—ಅಂಜುವದೇತಕ್ಕೆ ? ನೂತನ ಸೇವಕನು ತನ್ನ ಯಜಮಾನತಿಯ ಕೂಡ ಕಪಟಮಾಡಲಾರನು.

**ಶಕುಂ**—ಈ ಅತ್ಯಾದರವೇ ಅವಿಶ್ವಾಸವನ್ನು ತೋರಿಸುತ್ತದೆ.

**ಅರಸು**—( ತನ್ನೊಳಗೆ ) ಈ ಹೊತ್ತಿನಲ್ಲಿ ಸಾಧಿಸದೆ ಬಿಡಬಾರದು. ( ಮುಖವನ್ನು ಎತ್ತಿ ಚುಂಬಿಸಲಿಕ್ಕೆ ಪ್ರವೃತ್ತನಾಗುತ್ತಾನೆ. ಶಂಕುತಲೆಯು ಮೆಲ್ಲನೆ ಮುಖವನ್ನು ತಪ್ಪಿಸುತ್ತಾಳೆ. ) ಹೇ ಮೃಗಾಕ್ಷಿ, ನನ್ನ ಅವಿನಯ ಶಂಕೆಯಿಂದ ಅಂಜಬೇಡ. (ಶಂಕುತಲೆಯು ಮುಖವನ್ನು ಒಮ್ಮೆ ಮೇಲೆ ಮಾಡುತ್ತಾಳೆ ಒಮ್ಮೆ ಕೆಳಗೆ ಮಾಡುತ್ತಾಳೆ; ಅರಸು ಮುಖವನ್ನು ನೋಡುತ್ತ) ಏನು ಅಧರವಣ್ಣಾ ಇದು !

**ಶಕುಂ**—ವಚನಕೊಟ್ಟದ್ದನ್ನು ಮುರಿಯುತ್ತೀರೆಂಬಂತೆ ಕಾಣಿಸುತ್ತದೆ.

**ಅರಸು**—ಹೇ ಸುಂದರಿ, ನಿನ್ನ ನೇತ್ರಗಳು ಉತ್ಪಲಪುಷ್ಪಗಳೆಂದು ನನಗೆ ಭ್ರಾಂತಿಯು ಉತ್ಪನ್ನವಾಗುತ್ತದೆ. ( ಮೆಲ್ಲನೆ ಊದುತ್ತಾನೆ. )

**ಶಕುಂ**—ಹೋಯಿತು. ಈಗ ತಣ್ಣಗಾಯಿತು. ಆರ್ಯಪುತ್ರರು ತಮ್ಮ ವಚನವನ್ನು ಮುರಿಯದಲೆ ಶ್ರಮೆಪಟ್ಟದ್ದಕ್ಕೆ ಪ್ರತ್ಯುಪಕಾರವನ್ನು ಏನು ಮಾಡಬೇಕೆಂಬುವದು ತಿಳಿಯದ ನನಗೆ ನಾಚಿಕೆ ಬರುತ್ತದೆ. ಸಖಿಯರನ್ನು ಕೇಳಿ ಬರುತ್ತೇನೆ. ಬಿಡಬೇಕು.

**ಅರಸು**—ಆ ಮೇಲೆ ಬಿಡುತ್ತೇನೆ.

**ಶಕುಂ**—ಏನಾದ ಮೇಲೆ ?

**ಅರಸು**—

**ಪದ.**

**ದಾಟಿ**—" ರಾಜಕುಲ ತಾರಾ ಶಶಾಂಕ ಮನೋಜಾ ಸುಂದರಾ ನೋಡೈ " ಎಂಬ ಪದದಂತೆ.

**ಆಮ್ಯಾಲೆ ಬಿಡುವೆ । ಮನೋಹರ ।**
**ಕೋಮಲತರ ತನುವೆ ॥ ಪಲ್ಲ ॥**

ಕಾಮಿನಿ ಕಡು ಎಳೆ । ರೋಮಗಳಿಹ ಮೃದು |
ಹೇಮಲತೆಯು ಚಿಗು— | ರೀ ಮೊಸಲು ದುಟಿ |
ಕಾಮಬಾಧೆಗತಿ | ಶಾಮಕೆಂದು ಸಂ—
ಪ್ರೇಮದಿ ಸವಿಯಲು | ನಾಸುನದಣಿದು || ಅನುಪಲ್ಲ ||
ಅರೆಬಿರಿದರವಿಂದದ । ಸರಿಗಂಧದ ಬಳ್ಳಿಯೆ | ಕನ್ನಡಿ—
ಸರಿ ಮಿರಿಮಿರಿ ಮಿಂಚುವ ಬಹುಸೊಬಗಿನ ಗಲ್ಲಿಯೆ ||
ಸ್ಫುರಿಸಿರೆ ಸರಿವ ಮುಟ್ಟಲ ಮುರಕಿಯವೊಲ್ ಮಳ್ಳಿಯೆ |
ಫಣಿಯೊಳು |
ಕರಿಗುರುಳುರುಳುವ ಕಿರಿನಗೆ ಹೊಳಪಿನ ಪಲ್ಲಿಯೆ ||
ಎರಳೆಗಣ್ಣೆನೀ | ಕೊರಳತಿರುವ ಬ್ಯಾ-
ಡರುಣಸಖದ ಕೈ | ಬೆರಳಿನಿಂದ ಮು-
ಚ್ಚಿರುವ ಗಲ್ಲವಂ | ತೆರೆಯಲೊಮ್ಮೆ ಚ-
ಪ್ಪರಿಪತಿ ಮದನಾ | ತುರ ತೃಷೆಗಳೆದು || ೧ ||
ಹೊಳೆಯೊಳು ಬೆಳೆದ ಪುಳಿನದೊಲು ಜಘನದ ಬಾಲೆಯೆ |
ಎಳೆಯಕದಳಿ
ಸುಳಿ ತಿಳಿ ಪೊಟ್ಟೆಯನುಪ್ಪೊಡೆ ಒಳಬಾಳೆಯೆ ||
ನಳಿನಳಿಪೆಳೆ ನಳಿನದ ಮೊಗ್ಗೆಯ ಮೊಲೆಯಾಳಿಯೆ |
ಮೃಣಾಲದ
ಬಳೆಗಳು ಥಳಥಳಿಸುವ ದುಂಡೊನಪಿನ ದೋಳಿಯೋ ||
ಎಳೆಯ ಕನ್ನೆ ನಿ| ನ್ನೊಳು ನೀ ಮುದುಡದಿ-
ರಲರ ಕಂಪನಂ | ತಳೆದ ಕುಚದ ಮೊನೆ-
ಗಳನು ಮೆಲ್ಲನೆದೆ | ಯೊಳಗೆ ಹೊಂದು ತೊ-
ತ್ತಲು ಮನಸಿಜನುರೆ । ಗಳೆಯುವೆ ಮುನ್ನ || ೨ ||
ವನಜನಯನೆ ಮೊರುವಳಲ್ಲೆನುತಲೆ ನಂಬುವೆ | ನೀನೀ
ಕ್ಷಣವನು ಅನುಕೂಲಾಗದೆ ಕೆಡಿಸದಿರೆಂಬುವೆ ||
ಅನುದಿನ ನೆನೆದ ಬಗೆಯ ನಾನೀಗಲು ಕಾಂಬುವೆ | ಪರಿಪರಿ |
ಮನಸಿನ ಘನ ಬಯಕೆಯ ಹೊಂದಲು ಸುಖವುಂಬುವೆ ||

**ತನುವ ತನುವಿನೊಳ್ | ಮನಸು ಮನಸಿನೊಳ್**
**ಅನಗು ಸುಖದ ಸವು | ಕೊನರಿಪಂತಿರಸಿ |**
**ಎನಗೆ ನೀನರಸಿ | ನಿನಗೆ ನಾನರಸು |**
**ಎನಲಸುನಯುಕೀ | ದಿನ ಮೊದಲೆನೆಸಿ || ೩ || ***

( ಚುಂಬನಕ್ಕೆ ಪ್ರಯತ್ನ ಮಾಡುತ್ತಾನೆ. ಶಕುಂತಲೆಯು ಅನುಕೂಲ ಳಾಗುವದಿಲ್ಲ. )

( ತೆರೆಯಲ್ಲಿ— ಹೇ ಚಕ್ರವಾಕ ಸ್ತ್ರೀಯೆ, ರಾತ್ರಿಯು ಸಮೀಪಿಸಿತು. ನಿನ್ನ ಕಾಂತನನ್ನು ತೀವ್ರದಿಂದ ಕರೆದು ಏಕಾಂತವಾಡುವದನ್ನು ಶೀಘ್ರದಿಂದ ಮುಗಿಸು. )

**ಶಕುಂ**—( ಗಾಬರಿಯಿಂದ ) ಆರ್ಯಪುತ್ರರೆ, ನನ್ನ ಶರೀರಪ್ರಕೃತಿಯ ಸಮಾಚಾರವನ್ನು ತೆಗೆದುಕೊಳ್ಳುವದಕ್ಕಾಗಿ ಗೌತಮಮ್ಮನು ಇಲ್ಲಿಯೇ ಬರುತ್ತಾಳೆ; ಇದಕ್ಕೆ ಸಂದೇಹವಿಲ್ಲ. ಆದ್ದರಿಂದ ಆಚೆಯ ಕಡೆಯಲ್ಲಿರುವ ಲತಾಗೃಹದಲ್ಲಿ ಅಡಗಿಕೊಳ್ಳಬೇಕು.

**ಅರಸು**-- ಒಳ್ಳೇದು, ( ತೀವ್ರದಿಂದ ಹೋಗಿ ಅಡಗಿಕೊಳ್ಳುತ್ತಾನೆ. )

( ಇಷ್ಟರಲ್ಲಿ ಗೌತಮಮ್ಮನು ಒಂದು ಪಾತ್ರೆಯನ್ನು ಹಿಡಿದುಕೊಂಡು ಬರುತ್ತಾಳೆ. )

**ಗೌತಮಮ್ಮ**--( ಶಕುಂತಲೆಯ ಹತ್ತರ ಹೋಗಿ ) ಮಗುವೆ, ಮೈಯ್ಯಲ್ಲಿಯ ಉರಿಯು ಸ್ವಲ್ಪಾದರೂ ಶಾಂತವಾಯಿತೊ? ನೋಡು; ನಾನು ಕುಶೋದಕವನ್ನು ತಂದಿದ್ದೇನೆ. ಇದರಿಂದ ನಿನ್ನ ಶರೀರದ ಬಾಧೆಯೆಲ್ಲ ದೂರವಾಗುವದು. ನಿನ್ನ ಗೆಳತಿಯರು ನಿನ್ನನ್ನು ಈ ಅವಸ್ಥೆಯಲ್ಲಿ ಅದೃಶ್ಯವಾದ ದೇವತೆಗಳೇ ಸಂರಕ್ಷಣೆ ಮಾಡಲೆಂದು ಬಿಟ್ಟು ಹೋಗಿದ್ದಾರೊ? ಎಲ್ಲಿದ್ದಾರವರು?

**ಶಕುಂ**--ಅವರಿಬ್ಬರೂ ಕೂಡಿ ಇದೇ ಮಾಲಿನೀ ತೀರಕ್ಕೆ ಹೋಗಿದ್ದಾರೆ.

**ಗೌತಮಮ್ಮ**—( ಮಂತ್ರೋದಕವನ್ನು ಅವಳ ಮೇಲೆ ಚಿಮ್ಮಡಿಸಿ ) ಮಗುವೆ, ಈಗ ಶಾಂತವಾಯಿತೊ? ( ಕೈಹಿಡಿದು ನೋಡುತ್ತಾಳೆ. )

---

* अपरिक्षत कोमलस्य यावत्कुसुमस्येव नवस्य षट्पदेन
अधरस्य पिपासता मया ते सदयं सुन्दरि गृह्यते रसोस्य ॥ २३ ॥

**ಶಕುಂ**—ಅಮ್ಮಯ್ಯಾ ? ಸ್ವಲ್ಪ ಶಾಂತವಾಯಿತು.

**ಗೌತಮಮ್ಮ**—( ಮೈಮೇಲೆ ಕೈ ಎಳೆದು ) ಉದಂಡಾಯುಷ್ಯವಂತೆ ಯಾಗು ನನ್ನವ್ವಾ ! ಏಳು ಸಂಜೆಯಾಯಿತು ಪರ್ಣಕುಟಿಗೆ ಹೋಗುವ.

**ಶಕುಂ**—( ತನ್ನೊಳಗೆ ) ಎಲೆ ಹೃದಯವೆ, ಮೊದಲು ನಿನ್ನ ಮನೋರಥವಂತೆ ಭಾಗ್ಯವು ನಿನ್ನ ಬಳಿಯಲ್ಲಿ ಕೈಮುಗಿದುಕೊಂಡು ನಿಂತಿತ್ತು. ಆಗ ನೀನು ನಿನ್ನ ಭೀರು ಸ್ವಭಾವದಿಂದ ಅದರ ಸ್ವಾದವನ್ನು ತೆಗೆದುಕೊಳ್ಳದೆ ಬಿಟ್ಟು ಬಿಟ್ಟೆ. ಈಗ ಅದೇ ಸಿಟ್ಟಿನಿಂದ ಭಾಗ್ಯವು ನಿನಗೆ ಪ್ರತಿಕೂಲವಾಗಿ ಹೋಯಿತು ಬಲ್ಲೆಯಾ ? ಇನ್ನುಮೇಲೆ ಪಶ್ಚಾತ್ತಾಪದಿಂದ ಏನುಫಲ ? ( ಸ್ವಲ್ಪ ಮುಂದಕ್ಕೆ ಹೋಗಿ ನಿಂತು ಪ್ರಕಾಶವಾಗಿ ) ಲತಾಮಂಟಪಾ, ಸಂತಾಪಹಾರಕಾ, ಪುನಃ ನಿನ್ನ ಬಳಿಯಲ್ಲಿ ಸೌಖ್ಯಾನುಭವಕ್ಕಾಗಿ ತಿರುಗಿ ಬರುತ್ತೇನೆ ಕೇಳಿದೆಯಾ ? ಗೌತಮಮ್ಮನ ಹಿಂದಿನಿಂದ ಅತಿ ಪಶ್ಚಾತ್ತಾಪದಿಂದ ಹೊರಟು ಹೋಗುತ್ತಾಳೆ.)

**ಅರಸು**—( ಅಡಗಿದ ಸ್ಥಳದಿಂದ ಪೂರ್ವಸ್ಥಳಕ್ಕೆ ಬಂದು ನಿಟ್ಟುಸಿರು ಬಿಟ್ಟು ) ಅಯ್ಯೊ ! ಯಾವದಾದರೂ ಮನಸಿನ ವಾಂಛಿತಾರ್ಥವು ಸಿದ್ಧಿಗೆ ಹೋಗಬೇಕಾದರೆ ಎಷ್ಟು ವಿಘ್ನಗಳು ಮಧ್ಯದಲ್ಲಿ ಬರುತ್ತವಯ್ಯಾ ?

( ಪದ )

"ಪಾಟಿ—ಬಲ್ಲದಿರುವ ಬಗೆಯೇನಮ್ಮಾ । ಎನ್ನ । ನಲ್ಲ ಈ ಬುದ್ಧಿಯ ನೆಲ್ಲೀ ಕಲಿತನಮ್ಮಾ" ೦ಬ ಪದದಂತೆ.

**ಚುಂಬಿಸಲಿಲ್ಲ । ಇಂಥ ವಾಳ್ಯದೊಳು । ನಾ-**
**ಬಿಂಬಾಧರೆಯು ಪೋಗ । ಳೆಂಬ ನಂಬಿಕೆಯೊಳು ॥ ಪಲ್ಲ ॥**
**ಮೆಲ್ಲನೆ ನೀತಿ ನುಡಿಯಾಡುತಲಿ । ಮೃದು-**
**ಬಳ್ಳಿಗಳಿಂದಧರ ಮುಚ್ಚುತಲಿ । ರೀತಿ-**
**ಯಲ್ಲವೆನ್ನುತಾನನದಿರವುತಲಿ ।**
**ನಲ್ಲೆ ಕಟಾಕ್ಷದಿ ನೋಡಿದ ಸಮಯದೊಳ್ ॥ ೧ ॥**
**ಬಳಿಯಲ್ಲಿ ಬಂದು ಹೊಂದಿ ಕುಳ್ಳಿರಲು । ಕೈ-**
**ಯೊಳು ನಾ ಚೆಲುವ ಮುಖ ಪಿಡಿದಿರಲು । ಅರ-**
**ಗೆಲಸಮಾಡಿದೆ ಪೂರಾ ನಾ ಮರುಳು ।**
**ತಿಳಿಯೆ ನೀ ವಾಳ್ಯದೊಳೆಲ್ಲಿ ಪೋದಿತೊ ಮತಿ ॥ ೨ ॥**

ತಿರುಗಿ ತರುಣಿಯು ತಾ ಬರಬಹುದು ನಾ-
ನರೆಕ್ಷಣ ಗಳೆಯೆನಾಗಲು ಮರೆದು । ಈ-
ಪರಿಯೆನ್ನ ಹೃದಯ ನಿಶ್ಚಯಿಸುವದು ।
ತೆರಳಿರಲು ಪ್ರಸಂಗ ಮರುಗುತಿಹುದು ವ್ಯರ್ಥ ॥ ೩ ॥ *

ಇನ್ನುಮೇಲೆ ಎಲ್ಲಿಗೆ ಹೋಗಲಿ? ನನ್ನ ಪ್ರಾಣಪ್ರಿಯಳಿಂದ ಕೆಲ ಹೊತ್ತು ಉಪಭೋಗಿಸಲ್ಪಟ್ಟ ಈ ಲತಾಮಂಟಪದಲ್ಲಿ ಇರುವದೇ ಉತ್ತಮ.

( ಪದ )

ದಾಟಿ—" ಯಾಕೆ ಪ್ರಾಯವು ಬಂತಮ್ಮಾ ಚಿಕ್ಕವಳು ನಾ ಹ್ಯಾಗೆ ತಾಳಲೆ ಹೆತ್ತಮ್ಮಾ ॥ ಮದಗಜಗಮನೆಯರು ಮಲಗುವವೇಳೆ ಸದನಕ್ಕೆ ಕರೆದೊಯ್ವರು " ಎಂಬ ಪದದಂತೆ.

ಎಲ್ಲಿ ಪೋಗಲಿ ನಾನಿನ್ನಾ । ಲತಾಗ್ರಹ
ದೊಳ್ ಬಿಟ್ಟು ಪೋದಳಿನ್ನ ॥ ಪಲ್ಲ ॥
ಫುಲ್ಲನೇತ್ರೆಯು ಬಿಳಿಯ ಹಾಸಿಗೆ ।
ಗಲ್ಲ ವ್ಯಾಲ್ಪಸರಿಸಿದ ಮೃದುತರ ।
ಫುಲ್ಲ ಸುಮಶಯ್ಯದಲಿ ಮಲಗಿದ ।
ಳಿಲ್ಲೆ ದೃಷ್ಟಿಯನಿಟ್ಟುಕೊಳ್ಳಲೊ ॥ ಅನುಪಲ್ಲ ॥
ಬಾಡಿದ ಕುಸುಮಗಳು । ಬಿದ್ದಿವೆ ಹೆಚ್ಚೆ
ಮೂಡಿವೆ ಮಳಲಿನೊಳು ॥
ಕೂಡಿದ ಭ್ರಮರಗಳು । ಲತೆಯ ಪೊರ ।
ಗಾಡುತಿಹವು ಸುತ್ತಲು ॥
ಗಾಢಿಕಾರ್ತಿಯು ಬೇಗನೆನ್ನನು ।
ಕೂಡದಲೆ ಮನುಮಥನ ಮಾಯದ ।
ಬೇಡಿಗೊಳಿಸೀ ಮಂಟಪವ ಸೆರೆ ।
ಮಾಡಿಪೋದಳು ಕರುಣ ಹೀನಳು ॥ ೧ ॥
ನಳಿದೋಳಿನಾಭರಣ । ಮೃಣಾಲದ-
ವಲಯವಿಲ್ಲಿಹುದರುಣ ॥
ನಲಿನೀಪತ್ರದ ಮದನ । ಲೇಖವನುಗು-
ರಿಲಿ ಬರೆದಿಹಳಿದನ ।

---

* मुहुरङ्गुलि संवृता धरोष्ठं प्रतिषेधाक्षरविक्लवाभिरामम्
मुखमंसविवर्ति पक्ष्मलाक्ष्याः कथमप्युन्नमितं न चुम्बितंतु ॥ २४ ॥

ಕೆಳಗೆ ನೋಡಲು ದೃಷ್ಟಿ ತೆಗೆಯೆಸು |
ನಳಿನ ಶರನಗ್ನಿಯೊಳು ನಾನತಿ |
ಬಳಲುತಿರಲಿವಳೊಡನೆ ಸ್ನೇಹವು |
ತಿಳಿಯು ತೈಲದೊಲಾಯ್ತುಬಳಿಕ || ೨ ||
ಇನ್ನೊಮ್ಮೆ ಬರುವಿಯೇನೆ | ಎನ್ನಯುಪ್ರಾಣ-
ವನ್ನುಳುಹುವಿಯೇನೆ ||
ಅನ್ಯಪದಾರ್ಥವನ್ನೆ | ಹೆಸರುಗೊಂಡು-
ಸನ್ನೆ ಮಾಡಿದೆಯೆ ಜಾಣೆ ||
ನಿನ್ನ ಮಾತಿನ ಮೇಲೆ ಧೀರತೆ |
ಯನ್ನೆ ತಾಳ್ದೀ ಕುಸುಮುಶಯುನದಿ |
ಹೊನ್ನು ಕಲಶದ ಮೊಲೆಗಳೊತ್ತಿಹ |
ಚಿಹ್ನ ನೋಡುತ ವ್ಯಾಳ್ಯಗಳೆವೆ || ೩ ||

ತೆರೆಯಲ್ಲಿ—ರಾಜನ್.

( ಶಾರ್ದೂಲವಿಕ್ರೀಡಿತ ವೃತ್ತ )

ಸಂಧ್ಯಾಕಾಲದೊಳಗ್ನಿಗಾಹುತಿಯಿಡಲ್ಕಾಕಾಶದೊಳ್ ಸುತ್ತಲುಂ |
ಬಂದಿರ್ದೀ ಪಿಶಿತಾಶನರ್ ಕೆಡಪಿದರ್ ಕೃಷ್ಣಾಭ್ರದೋಲಂಧ ಕಾ||
ರಂ ದುಷ್ಟಾತ್ಮರ ಬಾಧೆಯಿಂ ಕಡುಭಯುಂ ಗೊಂಡಿರ್ಪೆವೈ ನಿನ್ನನೆ |
ಹೊಂದಿರ್ಪೆಮ್ಮನು ಕಾಯ್ದುದಯ್ಯ ದಯುದಿಂ ದುಷ್ಯಂತ
ಭೂಪಾಲನೇ ||

**ಅರಸು**—ಹಾ! ಬಂದೆ ಬಂದೆ ಅಂಜಬೇಡಿರಿ. ( ಅವಸರದಿಂದ ಹೊರಟು ಹೋಗುತ್ತಾನೆ. )

---

* तस्याः पुष्पमयी शरीरलुलिता शय्या शिलायामियं
क्लान्तो मन्मथलेख एष नलिनी पत्रे नखैरर्पितः
हस्ताद्भ्रष्ट मिदं बिसाभरणमित्यासज्य मानेक्षणो
निर्गन्तुं सहसा न चेत सगृहादीशोऽस्मि शून्यादपी || २९ ||

( ೩ನೆಯ ಅಂಕವು ಮುಗಿದುದು. )

# ೪ನೆಯ ಅಂಕವು.

( ತೋಟದಲ್ಲಿ ಹೂವುಗಳನ್ನು ಎತ್ತುತ್ತ ಸಖಿಯರು ಬರುತ್ತಾರೆ. )

**ಅನ**—ಸಖಿಯೆ ಪ್ರಿಯಂವದೆ, ಶಕುಂತಲೆಗೆ ಗಾಂಧರ್ವವಿವಾಹದಿಂದ ಅನುರೂಪನಾದ ಪತಿಯು ದೊರೆತದರಿಂದ ಅವಳು ಕಲ್ಯಾಣವನ್ನು ಹೊಂದಿದಳು. ಆದ್ದರಿಂದ ನನ್ನ ಮನಸ್ಸು ಸಮಾಧಾನ ಹೊಂದಿದ್ದರೂ ಒಂದು ಮಾತಿನ ವಿಷಯಕ್ಕೆ ನನಗೆ ಬಹು ಚಿಂತೆಯುಂಟಾಗಿದೆ.

**ಪ್ರಿಯಂ**—ಯಾವ ಮಾತಿನ ಚಿಂತೆ?

**ಅನ**—ಇವತ್ತು ಇಷ್ಟಿಯು ಸಮಾಪ್ತವಾಯಿತು. ರಾಜರ್ಷಿಯು ಋಷಿಗಳ ಅಪ್ಪಣೆ ತೆಗೆದುಕೊಂಡು ನಗರಕ್ಕೆ ಹೊರಟುಹೋದನು. ಇನ್ನು ಆತನು ಅಂತಃಪುರದ ಹೆಣ್ಣುಗಳಕೂಡ ರಮಮಾಣನಾದ ಮೇಲೆ ಆ ಲೋಲಾಟದಲ್ಲಿ ಇತ್ತಕಡೆಯ ಸ್ಮರಣೆಯು ಇರುವದೋ ಅಥವಾ ಮರೆತುಬಿಡುವನೋ ಎಂಬದಾಗಿ ನಾನು ಚಿಂತೆಮಾಡುತ್ತೇನೆ.

**ಪ್ರಿಯಂ**—ಈ ಮಾತಿನ ವಿಷಯಕ್ಕೆ ನೀನು ನಿಶ್ಚಿಂತಳಾಗಿರು. ಅಂಥ ಪುರುಷನಲ್ಲ ಈ ಸಂಶಯವನ್ನು ತೆಗೆದುಕೊಳ್ಳುವದಕ್ಕೆ ಕಾರಣವಿಲ್ಲ. ನನಗೆ ಇನ್ನೊಂದು ಮಾತಿನ ಭಯವುಂಟು. ಇವಳ ತಂದೆಗೆ ಈ ಮಾತು ತಿಳಿದರೆ ಏನಾದೀತು?

**ಅನ**—ಅತ್ತಕಡೆಯಿಂದಲೂ ಭಯವಿಲ್ಲ. ಈ ಮಾತು ನಮಗೆ ಹ್ಯಾಗೋ ಹಾಗೆ ಆತನಿಗೆ ಅನುಮತವೇ ಆದೀತು.

**ಪ್ರಿಯಂ**—ಅದು ಹ್ಯಾಗೆ?

**ಅನ**—ಗುಣವಂತನಾದವನಿಗೆ ಮಗಳನ್ನು ಕೊಡಬೇಕೆಂದು ಆತನ ಸಂಕಲ್ಪ. ಇದು ತಾನೇ ದೈವವಶದಿಂದ ಸಿದ್ಧಿಯಾದ ಮೇಲೆ ಶ್ರಮವಿಲ್ಲದಲೆ ಕೃತಾರ್ಥನಾದೆನೆಂದು ಸಂತೋಷಪಡನೆ?

**ಪ್ರಿಯಂ**—( ಹೂವಿನ ಪಾತ್ರೆಯನ್ನು ನೋಡಿ ) ಸಖಿಯೆ ಹೂವುಗಳು ಪೂಜೆಗೆ ಸಾಕಾಗುವಷ್ಟು ಆದವು; ನಡೆ ಇನ್ನು.

**ಅನ**—ಇವತ್ತು ಶಕುಂತಲೆಯ ಸೌಭಾಗ್ಯವೃಧ್ಯರ್ಥವಾಗಿ ಮಂಗಲ ಗೌರಿಯ ಪೂಜೆಮಾಡತಕ್ಕದ್ದಲ್ಲವೇನೆ? ಇನ್ನೊಂದಿಷ್ಟು ಬೇಕಾದಾವು.

**ಪ್ರಿಯಂ**—ಅಹುದಹುದು. ( ಮತ್ತೂ ಕೊಯ್ಯಲಾರಂಭಿಸುತ್ತಾರೆ. )

( **ತೆರೆಯಲ್ಲಿ**—ಹಂ! ನಾನು ಬಂದಿದ್ದೇನೆ ಯಾರೂ ನೋಡುವದಿಲ್ಲವೆ? )

**ಅನ**—( ಕಿವಿಗೊಟ್ಟು ) ಸಖಿಯೆ, ಯಾರೋ ಅತಿಥಿಗಳು ಬಂದ ಹಾಗೆ ಕಾಣುತ್ತದೆ.

**ಪ್ರಿಯಂ**--ಪರ್ಣಕುಟಿಯಲ್ಲಿ ಶಕುಂತಲೆಯು ಕೂತುಕೊಂಡಿದ್ದಾಳಷ್ಟೆ?

**ಅನ**—ಆದರೂ ಅವಳ ಚಿತ್ತವು ಅವಳ ಬಳಿಯಲ್ಲಿ ಎಲ್ಲಿದೆ? ಅದು ತನ್ನ ರಾಜರ್ಷಿಯ ಬಳಿಗೆ ಹೋಗಿದೆ. ಹೂವುಗಳು ಸಾಕು. ನಡೆ ಇನ್ನು ಹೋಗುವ.

( **ತೆರೆಯಲ್ಲಿ**—ಎಲೇ ಅತಿಥಿಗಳನ್ನು ಅನಾದರದಿಂದ ದುಃಖಪಡಿಸುವವಳೆ, ನಾನು ಬಂದಿರಲಿಕ್ಕೆ ನೋಡುವದಿಲ್ಲವೆ? ಹಿಡಿ ನನ್ನ ಶಾಪವಚನಗಳನ್ನು )

( ಶಾರ್ದೂಲವಿಕ್ರೀಡಿತ ವೃತ್ತ. )

**ಆತಿಥ್ಯಂಗೊಳಲೀ ತಪೋಧನನಿದಿರ್ನಿಂತಿರ್ದು ಪೊತ್ತಾಗಿರಲ್ ।**
**ನಾಥನ್ನೇ ನೆನೆಯುತ್ತಸಾದರದೊಳೆನ್ನಂನೋಡ್ದುದಿಲ್ಲಿನ್ನು ಕೇಳ್ ॥**
**ಈ ತಪ್ಪಿಂಗುರೆ ಶಾಸನಂ ಮರೆವನಾತಂ ನಿನ್ನನೇಹಂ ಪೆರರ್ ।**
**ಮಾತಂ ನಂಬನು ಪೇಳ್ದೊಡೆಚ್ಚರಿದಮುದ್ಯಪ್ರಾಶನಂ ಗೈದನೊಲ್ ॥**

**ಪ್ರಿಯಂ**—ಅಯ್ಯೋ. ಅಯ್ಯೋ! ಕೇಡಾಯಿತಾ! ಶಕುಂತಲೆಯ ಚಿತ್ತವು ಸ್ಥಿರವಾಗಿಲ್ಲದ್ದರಿಂದ ಪೂಜಾಸತ್ಕಾರಕ್ಕೆ ಯೋಗ್ಯನಾದ ಯಾವ ಮಹಾಪುರುಷನ ಅಪರಾಧವು ಅವಳಿಂದ ಘಟಿಸಿತೋ! ( ಸ್ವಲ್ಪ ಮುಂದಕ್ಕೆ ಹೋಗಿ ) ಅಕ್ಕೋ, ನೋಡಿದೆಯಾ! ಇದು ಸಾಮಾನ್ಯ ಪುರುಷನ ಅನಾದರವಾಗಲಿಲ್ಲ ಕಂಡೆಯಾ! ಈತನು ಶೀಘ್ರಕೋಪಿಯಾದ ದೂರ್ವಾಸ ಋಷಿಯು; ಅತಿ ತಪ್ತನಾದ ವ್ಯಾಕ್ಯದಲ್ಲಿ ಶಾಪವನ್ನು ಕೊಟ್ಟು ಕಾಲುಗಳನ್ನಪ್ಪಳಿಸುತ್ತ ವೇಗದಿಂದ ಹಿಂತಿರುಗಿ ಹೋಗುತ್ತಿದ್ದಾನೆ. ಅಗ್ನಿಯು ಹೊರ್ತು ದಹಿಸಲಿಕ್ಕೆ ಯಾರು ಸಮರ್ಥರಾಗಿದ್ದಾರಮ್ಮಾ? ಇನ್ನು ಈತನ ಎದುರಿನಲ್ಲಿ ಹೋಗುವದಕ್ಕೆ ಪ್ರಾಜ್ಞವುಳ್ಳವರು ಯಾರು?

**ಅನ**—ಹೋಗು ಹೋಗು; ಆತನ ಚರಣಗಳಿಗೆರಗಿ ಕ್ಷಮೆಯನ್ನು ಬೇಡಿ ಕರೆದುಕೊಂಡು ಬಾ. ಅಷ್ಟರಲ್ಲಿ ನಾನು ಅರ್ಘ್ಯೋದಕವನ್ನು ತೆಗೆದು ಕೊಂಡು ಬರುತ್ತೇನೆ.

**ಪ್ರಿಯಂ**—ಒಳ್ಳೆಯದು. ( ಅವಸರದಿಂದ ಹೋಗುವಳು. )

**ಅನ**—( ಎರಡು ಹೆಜ್ಜೆ ನಡೆದು ಕಾಲೆಡವಿ ) ಅವ್ವಯ್ಯಾ! ಶೀಘ್ರ ದಿಂದ ಹೋಗುವಾಗ ಸೀರೆಯು ಕಾಲಿನಲ್ಲಿ ಸಿಲುಕಿ ಕೈಯೊಳಗಿನ ಹೂವಿನ ಬುಟ್ಟಿಯು ಕೆಳಗೆ ಬಿದ್ದು ಹೂವೆಲ್ಲ ಚೆಲ್ಲಿ ಹೋದವು. ( ಹೂಗಳನ್ನು ಆರಿಸುತ್ತಾಳೆ. )

**ಪ್ರಿಯಂ**—( ಹಿಂತಿರುಗಿ ಬಂದು ) ಆತನ ಸ್ವಭಾವವೇ ಕೆಟ್ಟದು. ಅನ್ಯರ ಮಾತು ಕೇಳುವವನೆ? ಆದರೂ ನಾನು ಆತನ ಮನಸಿನಲ್ಲಿ ಸ್ವಲ್ಪ ದ್ರವಹುಟ್ಟಿಸಿದೆ.

**ಅನ**—( ಸ್ವಲ್ಪ ಸಂತೋಷದಿಂದ ) ಆತನಲ್ಲಿ ಇಷ್ಟು ಸಂಭವಿಸಿದ್ದೇ ಹೆಚ್ಚಿನದು. ಅವನಿಗೂ ನಿನಗೂ ಏನು ಮಾತುಗಳಾದವು ಹೇಳು ನೋಡೋಣ?

**ಪ್ರಿಯಂ**—ನಾನು ಎಷ್ಟು ಹೇಳಿಕೊಂಡರೂ ಬರದಾದ ಮೇಲೆ ಆತನ ಮುಂದೆ ಹೋಗಿ ಅಡ್ಡಬಿದ್ದು ಗಟ್ಟಿಯಾಗಿ ಕಾಲುಗಳನ್ನು ಹಿಡಿದು, "ಭಗವನ್ ಅವಳು ತಮ್ಮ ಹೊಟ್ಟೆಯ ಮಗಳಸರಿಯಾಗಿದ್ದಾಳೆ; ತಮ್ಮ ತಪಶ್ಚರ್ಯದ ಸಾಮರ್ಥ್ಯವನ್ನು ತಿಳಿದವಳಲ್ಲ; ಇದೇ ಮೊದಲು ತಪ್ಪು ಮಾಡಿದ್ದಾಳೆ. ಒಂದು ಸಾರೆ ಕ್ಷಮಿಸತಕ್ಕದ್ದು" ಎಂದು ಹೇಳಿಕೊಂಡೆನು.

**ಅನ**—ಮುಂದೆ?

**ಪ್ರಿಯಂ**—ಆಮೇಲೆ "ನನ್ನ ವಚನಗಳು ಎಂದಿಗೂ ಸುಳ್ಳಾಗವು. ಆದರೂ ಏನಾದರೂ ಗುರುತಿನ ಅಲಂಕಾರವನ್ನು ತೋರಿಸಿದಲ್ಲಿ ನನ್ನ ಶಾಪವು ನಿವೃತ್ತಿಯಾಗುವದು." ಎಂದು ನುಡಿಯುತ್ತ ನುಡಿಯುತ್ತಲೇ ಕಾಲುಗಳನ್ನು ಕೊಸರಿಕೊಂಡು ಒಂದೆರಡು ಹೆಜ್ಜೆ ಹೋಗಿ ಅದೃಶ್ಯನಾದನು.

**ಅನ**—ಇಷ್ಟಾದರೂ ಆಯಿತೆ? ಇನ್ನು ಮೇಲೆ ಎಷ್ಟೋ ಧೈರ್ಯ. ಹ್ಯಾಗೂ ಆ ರಾಜರ್ಷಿಯು ಹೋಗುವ ಸಮಯದಲ್ಲಿ ತನ್ನ ಕೈಯೊಳಗಿನ

ಉಂಗುರವನ್ನು ಶಕುಂತಲೆಗೆ ಕೊಟ್ಟು ಹೋಗಿದ್ದಾನೆ. ಈ ಉಪಾಯವು ಅವಳ ಸ್ವಾಧೀನದಲ್ಲಿದೆ.

**ಪ್ರಿಯಂ**—ಸಖಿಯೆ ನಡಿ ಇನ್ನು. ಮಂಗಳಗೌರಿಯ ಪೂಜೆ ಮಾಡುವದಕ್ಕೆ ಹೋಗೋಣ. ( ಇಬ್ಬರೂ ಹೋಗಲಾರಂಭಿಸುತ್ತಾರೆ. )

**ಪ್ರಿಯಂ**—( ನೋಡುತ್ತ ) ಅನಸೂಯೆ, ನೋಡಿದೆಯಾ ; ನಮ್ಮ ಜೀವದ ಗೆಳತಿಯು ಹ್ಯಾಗೆ ಸುಮ್ಮನೆ ಕುಳಿತುಕೊಂಡಿದ್ದಾಳೆ.

( ಪದ )

ದಾಟಿ—" ಜಾಣೇ ನೀ ಕರೆಯೆ ಮುಖ್ಯ ಪ್ರಾಣನಾಥನಾಣೆಯನ್ನ " ಎಂಬ ಪದದಂತೆ.

**ನೋಡೇ ಚಿಂತೆಯೊಳಾರ | ಗೂಢಮಾತನಾಡದವಳ || ಪಲ್ಲ ||**
**ಪಲ್ಲವಗೈಯ್ಯಲ್ಲಿ ಮಿದುವು | ಗಲ್ಲವಿರಿಸಿ ಪುಲ್ಲಶರನ**
**ಮಲ್ಲಯುದ್ಧದಲ್ಲಿ ಗೈದ | ನಲ್ಲನ ಕೃತಿಯೆಲ್ಲ ನೆನೆದು || ೧ ||**
**ಕೆಂಬಲ್ಲಿಲಿ ಬಿಂಬದುಟಿಯ | ಸುಂಬುವನಿಂಗೆ ತುಂಬ ಮನದೊಳ್**
**ಇಂಬುಗೊಟ್ಟು ಹಂಬೆಚಿತ್ರದ | ಗೊಂಬೆಯಂತೆ ಕಾಂಬುತಿಹಳ ||೨||**
**ಶರೀರವಿಲ್ಲಿ ಹರಣವಲ್ಲಿ | ಹೆರವರ ಪರಿವಿರುವದೆ? ಈ**
**ಪರಿಯಲಿರಲು ದುರುಳ ಋಷಿಯು | ತ್ವರದಿ ಶಾಪವ**
**ನಿಂದನವ್ವಯ್ಯಾ || ೩ ||**

**ಅನ**—ಪ್ರಿಯಂವದೆ; ಅವಳಿಗೆ ಈ ವಾರ್ತೆಯನ್ನು ತಿಳಿಸಬಾರದು ಬಲ್ಲೆಯಾ! ಅವಳು ಬಹು ಕೋಮಲವಾದ ಅಂತಃಕರಣವುಳ್ಳವಳಿದ್ದಾಳೆ.

**ಪ್ರಿಯಂ**—ಮಲ್ಲಿಗೆಯ ಹೂವಿನ ಮೇಲೆ ಬಿಸಿನೀರು ಚಿಮ್ಮಿಡಿಸುವದುಂಟೆ?

( ಇಬ್ಬರೂ ಹೋಗುತ್ತಾರೆ. )

**ಇತಿ ವಿಷ್ಕಂಭಕಃ.**

( ಒಬ್ಬ ಋಷಿಶಿಷ್ಯನು ಕಣ್ಣು ತಿಕ್ಕಿಕೊಳ್ಳುತ್ತ ಬರುತ್ತಾನೆ. )

**ಶಿಷ್ಯ**—ನಮ್ಮ ಗುರುಗಳಾದ ಕಣ್ವ ಮಹಾಮುನಿಗಳು ಪ್ರವಾಸದಿಂದ ನಿನ್ನಿನ ದಿವಸ ಬಂದರು. ರಾತ್ರಿಯು ಇನ್ನೂ ಎಷ್ಟಿದೆಯೋ ನೋಡೆಂದು

ಹೇಳಿದ್ದಾರೆ. ಆ ಮೇರೆಗೆ ಹೊರಗೆ ಹೋಗಿ ನೋಡುವಾ. (ಮುಂದಕ್ಕೆ ಹೋಗಿ ಮೇಲೆ ನೋಡುತ್ತ) ಓಹೋ! ಬೆಳ್ಳಗೆ ಬೆಳಗಾಗಿ ಹೋಗಿದೆ. ರಾತ್ರಿ ಎಲ್ಲುಂಟೇಗ? ಅಹಾ! ಪ್ರಾತಃಕಾಲವು ಏನು ರಮಣೀಯವಾಗಿ ತೋರುತ್ತದಯ್ಯ.

## (ಪದ)

ಧಾಟಿ—“ಬೆಳಗಾಗ ಬಂತು ಬಿಡೆನ್ನಾ। ನಾಳೆ ತಡೆಯದೆ ಬರುವೆನೂ ಕೇಳೊ ಮೋಹನ್ನಾ” ಎಂಬ ಪದದಂತೆ.

ಬೆಳಗಾಯಿತು ಮೂಡಲಲ್ಲಿ। ತಿಂ-
ಗಳನಸ್ತನಾದನು ಪಶ್ಚಿಮದಲ್ಲಿ ॥ ಪಲ್ಲ ॥
ತಾರಾಪತಿಯು ಮುಳಗಿರಲು। ಮೇಲ
ಕೇರುತ ಮೆಲ್ಲನೆ ದಿನಮಣಿ ಬರಲು ॥
ಈ ರೀತಿ ಲಯಉದಯಗಳು। ಪ್ರಭೆ-
ಗಾರ ಜನರಿಗೂ ಉಂಟೆಂಬುವ ಓಲು ॥ ೧ ॥
ಅಕ್ಕರದಿಂ ಕಮಲಿನಿಗೆ। ಪೂರ್ವ-
ದಿಕ್ಕೆಂಬ ಅಂಗನೆ ಪತಿ ಬಂದಿಹ ಬಗೆ ॥
ನಕ್ಕು ನಾಚಿಸಿ ಪೇಳ್ವ ಹಾಗೆ। ಚೆಲ್ವ
ಚಿಕ್ಕಮೋಡದ ಕೆಂಪು ಎಸೆಯೆ ವಸುಧೆಗೆ ॥ ೨ ॥
ಸಿತಕಿರಣನು ಪೋದನೆಂದು। ಕುಮು-
ದ್ವತಿಯು ಬಾಡಿದಳಯ್ಯೋ ಮನದೊಳು ನೊಂದು ॥
ಪತಿಗಳ ವಿರಹಿತವೊಂದು ಕ್ಷಣ-
ಸತಿಯರಿಗತಿಶಯ ದುಃಖದ ಸಂದು ॥ ೩ ॥ *

---

* यात्येकतोऽस्तशिखरं पतिरोषधीना-
माविष्कृतोरुणपुरःसर एकतोऽर्कः
तेजोद्वयस्य युगपद्व्यसनोदयाभ्यां
लोको नियम्यत इवात्मदशान्तरेषु ॥ १ ॥

## ( ಪದ )

ದಾಟಿ—" ಉದಯರಾಗ ಸಂಪದ ನೋಡಿದರೆನ್ನದೆ ಭುಗಿಲೆಂಬೋದೆ ಭಾಮಿನಿ "
ಎಂಬ ಪದದಂತೆ.

ಉದಯಕಾಲವಾಯಿತು ಜಗವೆಲ್ಲ ಸಮ್ಮುದವಾಗಲು ಮೆಲ್ಲನೆ ||
ಕದಪಿಂಗೆ ಕದಪನಿಟ್ಟೊಂದಾಗಿ ಮಲಗುವ
ನಿದೆ ಹೊತ್ತಿಗಿಲ್ಲದ ಮದಯೌವನೆಯ ಬಿಟ್ಟು || ಪಲ್ಲ ||
ಸತಿಪತಿಗಳ ತೆಕ್ಕೆ ಬಿಗಿವಂತೆ ಸೀತ ಮಾ-
ರುತನು ಮೊದಲು ಬಂದು ಕದುಕಿಸಲು |
ಸಿತಕಿರಣನು ತನ್ನ ಸತಿಯೊಳ್ಬೆಳಗಿ ನುಪ-
ರತಿ ಗೂಡುವಂತೆ ಕೆಳಗೆ ಬರಲು |
ಹಿತದಿಂದೆ ಗಲರವಗೈದು ನಲಿದು ಪಾರಾ-
ವತಗಳು ಬಿಡದೆ ಚುಂಬನವಾಡಲು |
ಮಿತಿಮೀರಿ ಮುದ್ದುಗಳಿಡಲು ಬ್ಯಾಸರದೆ ದಂ-
ಪತಿಗಳು ಮರಳಿ ಸುರತವಾಡುತಿರಲಾಗಿ || ೧ ||
ಇರುಳು ಪೋಯಿತು ಪೋಗಿರೆಂದು ತಾರೆಗಳನ್ನು |
ಕರುಣಿಸಿ ಕಳುಹುವ ವಿಧುವೆನಲು |
ತರುಣಿಯರೆಲ್ಲರು ತಮ್ಮತಮ್ಮ ಮನೆಯೊಳು
ಉರಿವದೀಪಗಳ ಸರಿಸುತಿರಲು |
ತರುವಿಂದೆ ತರುವಿಗೆ ಪಾರುತೆ ಪಕ್ಷಿಗಳ್ |
ಸರಸ ಮಂಜುಳ ರವಗಳ ನೀಯುಲು |
ನಿರಿಯ ಸಾವರಿಸಿ ಜೋಲ್ಮುಡಿಯ ತಿದ್ದುತೆ ಹಿಮ-
ಕರವದನೆಯರು ಬಾಗಿಲ ತೆರೆಯಲಾಗಿ || ೨ ||
ಪೃಥಿವಿದೇವಿಯು ದಿನಪತಿಗಾಗಿ ಮುತ್ತಿನಾ |
ರುತಿಯ ಹರುಷದಿಂದೆ ಪಿಡಿದವೋಲು |
ಅತಿರಮ್ಯವಾದ ಇಬ್ಬನಿಗಳು ವೃಕ್ಷದೊ |
ಳತಿಶಯವಾಗಿ ಶೋಭಿಸುತಿರಲು ||

**ಲತೆಗೈಯಿಂ ಸಾರಿಸಿ ಲಲಿತಾಂಗಿಯರು ಮತ್ತೆ ।**
**ಮಿತದಿಂ ರಂಗೋಲೆಯಿಕ್ಕಿಗಳಿಡಲು ।**
**ಹಿತದಿಂ ರವಿಯು ಸೆರಗಿನೊಳಿಪ್ಪ ಕುಚಗಳ್ ಭ-**
**ಕುತರಾದ ಚಕ್ರವಾಕಗಳೆಂದು ಕರವಿಡಲುದಯ** ॥ ೩ ॥

**ಅನ**—( ಬಂದು ) ನನಗಂತೂ ಪ್ರಪಂಚದಲ್ಲಿ ಏನೂ ಜ್ಞಾನವಿಲ್ಲ, ನಿಜ. ಆದರೂ ಆ ರಾಜರ್ಷಿಯು ನಮ್ಮ ಶಕುಂತಲೆಯನ್ನು ಮೋಸಮಾಡಿದ್ದು ನನಗೆ ತಿಳಿಯುತ್ತದೆ.

**ಶಿಷ್ಯ**— ಈಗ ಹೋಮದ ವೇಳೆಯಾಯಿತೆಂದು ಗುರುಗಳಿಗೆ ತಿಳಿಸುವೆನು. ( ಹೋಗುತ್ತಾನೆ. )

**ಅನ**— ಒಳ್ಳೇದು ಮಾಡತಕ್ಕದ್ದೇನು?

**( ಪದ )**

ದಾಟಿ—ಯಾಕೆ ತಡೆದಾನು ಪೇಳೆ । ಏ ಸಖಿಯೇ ಕೇಳವನ್ಯಾಕೆ ॥ ಪಲ್ಲ ॥ **ಲೋಕ**ದಲ್ಲಿ ನಾನು ಮಾಡಿದನೇಕ ಅಪರಾಧವನ್ನು ನಾಕು ಮಂದಿ ಮುಂದೆ ನಿಂತು ನಾಚಿಸಿ ಪೋಗೆಂದು ಪೇಳಮ್ಮ ॥ ಅನುಪಲ್ಲ ॥ ಎಂಬ ಪದದಂತೆ.

**ಮೋಸಮಾಡಿ ಪೋದನಮ್ಮಾ । ಆ ರಾಜಋಷಿಯು**
**ಮೋಸಮಾಡಿ ಪೋದನಮ್ಮಾ** ॥ **ವನವಾಸಿ ನಮ್ಮ** ॥ ಪಲ್ಲ ॥
**ಈ ಸಖಿಯಳ ಮೊರೆವ ಭರದ**
**ಮೀಸಲು ಯೌವನವ ಕಂಡು ।**
**ಆ ಸಮಯಕೆ ತನ್ನ ಕೆಲಸ**
**ತಾಸಾಧಿಸಿಕೊಂಡು ಎಮ್ಮೊಳು** ॥ ಅನುಪಲ್ಲ ॥
**ಅಂತು ತಿಳಿಯಲಿಲ್ಲವಾತನ । ಮಲ್ಲಿಗೆಯ ಹೂವಿ—**
**ನಂಥ ಜೀವದ ಗೆಳತಿಯನ್ನಾ । ಒಪ್ಪಿಸಿದೆವಿನ್ನಾ** ॥

---

अन्तर्हिते शशिनि सैव कुमुद्वती मे
दृष्टिं न नन्दयति संस्मरणीय शोभा
इष्टप्रवासजनितान्यबलाजनस्य
दुःखानि नूनमतिमात्रसुदुःसहानि ॥ २ ॥

**ಚಿಂತೆಯೊಳಗೆ ವ್ಯೈಮರೆದಲೆ ।**
**ಭ್ರಾಂತಳಾಗಿ ಕುಳಿತವಳ ।**
**ನ್ನೆಂತು ನೋಡಲೆಮ್ಮ ಇವಳ ।**
**ಕಾಂತನು ಕರೆಕಳುಹಲಿಲ್ಲ ॥ ೧ ॥**
**ಮನೆಯ ಕೆಲಸ ಮಾಡಲಾರೆಲೆನೆ । ಇವಳೊಳಗೆ ಪೊಕ್ಕು**
**ಮನಸಿಜನೀ ಕೃತಿಯುಗೈದನೇ । ಇನ್ನಾರೆ ತಾನೆ ॥**
**ಇನಿತು ಕೃತಕತನವಿಲ್ಲದೆ ।**
**ತನುವ ನೀಡಿ ಕೂಡಿದವಳ ।**
**ನೆನಹುದೋರುವಂತೆ ಅವನ ।**
**ಮನದಿ ಜಾಗ್ರತನಾಗಲೆಮ್ಮ ॥ ೨ ॥**
**ದುರುಳ ಋಷಿಯು ಮೂಲವಾದನೆ । ಬ್ಯಾರಿಂಥ ಪ್ರೌಢ**
**ಪುರುಷನಿವಳ ಮರೆಯುಲಾಪನೆ । ಆತುರದಿ ತಾನೆ ॥**
**ಸುರತಸಮಯದೊಳಗಿರಿಸಿದ ।**
**ಬೆರಳುಂಗುರವನವನ ಬಳಿಗೆ ।**
**ಹಿರಿಯರಿವರೆಂತ ಮೊದಲೆ ।**
**ತ್ವರದಿ ತಲ್ಪಿಸುವರಿನ್ನಾರು ॥ ೩ ॥**

ಇನ್ನೇನು ಮಾಡತಕ್ಕದ್ದು? ಈ ಕೆಲಸದಲ್ಲಿ ಗೆಳತಿಯ ದೋಷವೆಂದು ಸುಮ್ಮನೆ ಇರಬೇಕೇ? ಅದು ಯೋಗ್ಯವಲ್ಲ. ಕಾಶ್ಯಪ ಋಷಿಗಳು ಪ್ರವಾಸ ದಿಂದ ಬಂದಿದ್ದಾರೆ. ಅವರ ಮುಂದೆ ದುಷ್ಯಂತ ರಾಜನೊಡನೆ ಗಾಂಧರ್ವ ವಿವಾಹದಿಂದ ಕೂಡಿ ಇವಳು ಗರ್ಭಿಣಿಯಾಗಿದ್ದಾಳೆಂದು ಹೇಳಬೇಕೆ? ಅದಕ್ಕೂ ಧೈರ್ಯ ಸಾಲುವದಿಲ್ಲ. ಎಂಥ ಮಾತಾಯಿತು! ಹ್ಯಾಗೆಮಾಡಲಿನ್ನು?

**ಪ್ರಿಯಂ**—( ಬಂದು ಹರುಷದಿಂದ ) ಸಖಿಯೇ ನಡೆ, ನಡೆ ಬೇಗ; ಶಕುಂತಲೆಯು ಇವತ್ತೇ ಹೊರಡುತ್ತಾಳೆ. ಪ್ರಸ್ಥಾನ ಸಮಾರಂಭವನ್ನು ನೋಡುವ.

**ಅನ**—ಅವ್ವಯ್ಯಾ! ಇದು ಏನು ಹೇಳಿದೆಯೇ! ಏನೇನಾಯಿತು ಹೇಳು ನೋಡೋಣ.

**ಪ್ರಿಯಂ**—ಇದೇ ನಾನು ಶಕುಂತಲೆಯ ಬಳಿಗೆ ನಿನ್ನೆ ರಾತ್ರಿ ನಿದ್ದೆ ಹತ್ತಿತ್ತೇ ಹ್ಯಾಗೆಂದು ಕೇಳುವದಕ್ಕೆ ಹೋಗಿದ್ದೆನು.

**ಅನ**—ಅಲ್ಲಿಂದ?

**ಪ್ರಿಯಂ**—ಅಷ್ಟರಲ್ಲಿಯೇ ಕಣ್ವತಾತನು ಬಂದದ್ದು ಕೇಳಿ ಶಕುಂತಲೆಯು ಅತಿ ಲಜ್ಜಿತಳಾಗಿ ಅಧೋಮುಖಿಯಾಗಿ ಕುಳಿತುಕೊಂಡಿದ್ದಳು. ಆತನು ಸಂತೋಷದಿಂದ ಶಕುಂತಲೆಯನ್ನು ಅಪ್ಪಿ, "ಮಗುವೇ, ಏನೂ ಚಿಂತೆ ಮಾಡಬೇಡ. ಯಾಜಕನ ನೇತ್ರಗಳು ಹೊಗೆಯಿಂದ ಮುಚ್ಚಿರಲಾಗಿಯೂ ಆತನ ಕೈಯೊಳಗಿನ ಆಹುತಿಯು ಹ್ಯಾಗೆ ಅಗ್ನಿಮುಖದಲ್ಲಿಯೇ ಬೀಳುತ್ತದೋ ಅದೇ ಪ್ರಕಾರ ಈ ಕಾರ್ಯವಾಗಿದೆ. ಹೇ ವತ್ಸೇ, ಈ ಮಾತಿನ ಸಿಟ್ಟು ನನಗೆ ತಿಲಮಾತ್ರವಿಲ್ಲ ಕಂಡೆಯಾ! ಉತ್ತಮನಾದ ಶಿಷ್ಯನಿಗೆ ವಿದ್ಯವನ್ನು ಕಲಿಸಿದ್ದರಿಂದ ಹ್ಯಾಗೆ ಖೇದವಾಗುವದಿಲ್ಲವೊ ಅದರಂತೆ ಯೋಗ್ಯನಾದ ಪುರುಷನ ಕೂಡ ನಿನ್ನ ಯೋಗವಾದದ್ದರಿಂದ ನನಗೆ ಖೇದವಾಗುವದಿಲ್ಲ. ಇವತ್ತೇ ನಾನು ನಿನ್ನನ್ನು ಪತಿಯ ಮಂದಿರಕ್ಕೆ ಕಳುಹಿಸಿಕೊಡುತ್ತೇನೆ. ಚಿಂತೆ ಮಾಡಬೇಡ" ಎಂದು ಹೇಳಿದನು.

**ಅನ**— (ಆಶ್ಚರ್ಯದಿಂದ) ಈ ಮಾತು ಕಣ್ವತಾತನ ಮುಂದೆ ಯಾರು ಹೇಳಿದರು?

**ಪ್ರಿಯಂ**—ಆತನು ಅಗ್ನಿಗೃಹಕ್ಕೆ ಹೋಗುವಾಗ ಛಂದೋಮಯೀ ಆಕಾಶವಾಣಿಯಾಯಿತು.

**ಅನ**—ಆಕಾಶವಾಣಿ ಏನೆಂದಾಯಿತು?

**ಪ್ರಿಯಂ**—ಹೇಳುತ್ತೇನೆ ಕೇಳು. "ಹೇಬ್ರಹ್ಮನ್

ಕಂದ || **ಶಮಿಯೊಳಿಹ ಪವಿತ್ರಾಗ್ನಿಗೆ |**
**ಸಮದುಷ್ಯಂತನ ತೇಜಮಿಹದದನು ತಾಳ್ದಳ್ ||**
**ಭ್ರಮೆಗೊಳಲಾಗದು ನಿನ್ನ**
**ಮಮತೆಯ ಮಗಳೊಳಿದು ಜಗಕೆ ಕಲ್ಯಾಣಾರ್ಥಂ ||** *

---

* दुष्यन्तेनाहितं तेजो दधानां भूतये भुवः ।
अवेहि तनयां ब्रह्मन्नग्निगर्भां शमीमिव ॥ ३ ॥

**ಅನ**— ( ಪ್ರಿಯಂವದೆಯನ್ನು ಆಲಿಂಗಿಸಿ ) ಸಖಿಯೆ ನನಗೆ ಬಹು ಆನಂದವಾಯಿತು. ಆದರೆ ಶಕುಂತಲೆಯು ಇವತ್ತೇ ಹೋಗುವಳೆಂದು ಹೇಳುತ್ತೀ. ಅದರಿಂದ ಆನಂದದಲ್ಲಿ ಸ್ವಲ್ಪ ದುಃಖವಾಗುತ್ತದೆ.

**ಪ್ರಿಯಂ**—ಸಖಿಯೆ, ನಮಗೆ ದುಃಖವಾದರೂ ಚಿಂತೆಯಿಲ್ಲ. ನಮ್ಮ ಸಖಿಯು ಸುಖಿಯಾಗಿದ್ದರೆ ಸಾಕು.

**ಅನ**—ನಡೆ ಬೇಗ, ಹಾಗಾದರೆ, ತನ್ನ ಪತಿಯ ಮನೆಯಲ್ಲಿ ಚಿರಕಾಲ ಸುಖಿಯಾಗಿರುವದಕ್ಕೋಸ್ಕರ ಪ್ರಯಾಣ ಸಮಯದಲ್ಲಿ ಮಂಗಲಸಮಾರಂಭವನ್ನು ಮಾಡೋಣ ನಡೆ. ನಾನು ಅವಳಿಗೋಸ್ಕರ ನಾಗಕೇಸರದ ಮಾಲೆಯನ್ನು ಕಟ್ಟಿ ಆ ಮಾವಿನ ಗಿಡದ ಟೊಂಗೆಯ ಮೇಲೆ ನೀರು ಚಿಮ್ಮಡಿಸಿ ಎಲೆಯಲ್ಲಿ ಮುಚ್ಚಿಟ್ಟಿದ್ದೇನೆ. ಅದನ್ನು ತೆಗೆದುಕೊಂಡುಬಾ. ಇಷ್ಟರಲ್ಲಿಯೆ ನಾನು ಮೃಗರೋಚನೆ, ತೀರ್ಥಮೃತ್ತಿಕೆ, ದೂರ್ವಾಂಕುರ ಮುಂತಾದವನ್ನು ತೆಗೆದುಕೊಂಡು ಬರುತ್ತೇನೆ.

**ಪ್ರಿಯಂ**—ಒಳ್ಳೇದು.

( ಅನಸೂಯೆ ಹೋಗುತ್ತಾಳೆ. ಪ್ರಿಯಂವದೆಯು ಆ ಮಾಲೆಯನ್ನು ತೆಗೆದುಕೊಂಡು ಕೈಯಲ್ಲಿ ಹಿಡಿದುಕೊಳ್ಳುತ್ತಾಳೆ. ಇಷ್ಟರಲ್ಲಿ ತೆರೆಯಲ್ಲಿ ಗೌತಮಮ್ಮಾ, ಹಸ್ತಿನಾಪುರಕ್ಕೆ ಶಕುಂತಲೆಯನ್ನು ಕರೆದುಕೊಂಡು ಹೋಗತಕ್ಕ ಶಾರ್ಙರವ ಮೊದಲಾದ ಶಿಷ್ಯರಿಗೆ ತೀವ್ರದಿಂದ ಸಿದ್ಧರಾಗಿರೆಂದು ಹೇಳು. )

**ಪ್ರಿಯಂ**—( ಕಿವಿಗೊಟ್ಟು ಕೇಳಿ ) ಸಖಿಯೇ, ನಡೆಯವ್ವ ಬೇಗ; ಊರಿಗೆ ಹೋಗತಕ್ಕ ಶಿಷ್ಯರನ್ನು ಕರೆಯುತ್ತಾರೆ.

**ಅನ**—( ಕೈಯಲ್ಲಿ ಸುಗಂಧದ ಊಟಿಯಿಂದ ತುಂಬಿದ ಬಟ್ಟಲವನ್ನು ಹಿಡಿದುಕೊಂಡು ಬಂದು ) ನಡೆ, ಶಕುಂತಲೆಯ ಬಳಿಗೆ ಹೋಗುವಾ.

( ಇಬ್ಬರೂ ಹೋಗಲಾರಂಭಿಸುತ್ತಾರೆ. )

**ಪ್ರಿಯಂ**--( ಮುಂದೆ ನೋಡಿ ) ಶಕುಂತಲೆಯು ಪ್ರಾತಃಕಾಲದಲ್ಲಿ ಮಂಗಲಸ್ನಾನ ಮಾಡಿಕೊಂಡು ಕುಳಿತುಕೊಂಡಿದ್ದಾಳೆ. ಋಷಿಪತ್ನಿಯರು

ಕೈಯಲ್ಲಿ ಅಕ್ಷತೆಯನ್ನು ಹಿಡಿದುಕೊಂಡು ಮಂಗಲಗಾಯನವನ್ನಾ ರಂಭಿಸಿದ್ದಾರೆ. ನಡೆ, ನಾವೂ ಅತ್ತಕಡೆಗೆ ಹೋಗುವ.

( ಅನಂತರ ಮೇಲೆ ಹೇಳಿದ ರೀತಿಯಲ್ಲಿ ಶಕುಂತಲೆಯೂ ಋಷಿಪತ್ನಿ ಯರೂ ಪ್ರವೇಶಿಸುತ್ತಾರೆ. )

**ಶಕುಂ**—( ಋಷಿಪತ್ನಿಯರಿಗೆ ) ತಾಯಿಗಳಿರಾ ನಮಸ್ಕಾರ ಮಾಡು ತ್ತೇನೆ.

**ಒಬ್ಬ ಋಷಿಪತ್ನಿ**—ಗಂಡನ ಕೃಪೆಯಿಂದ ಆತನ ಪಟ್ಟದ ರಾಣಿ ಯಾಗಮ್ಮ!

**ಎರಡನೆಯವಳು**—ವೀರಪುತ್ರನನ್ನು ಪಡೆಯಮ್ಮ!

**ಮೂರನೆಯವಳು**—ಪತಿಯ ಪ್ರೀತಿಯು ಪೂರ್ಣವಾಗಿ ನಿನ್ನ ಮೇಲೆ ಇರಲಮ್ಮ!

( ಈ ಪ್ರಕಾರ ಆಶೀರ್ವಾದ ಮಾಡಿ ಗೌತಮಮ್ಮನ ಹೊರ್ತು ಉಳಿದ ತಪಸ್ವಿನಿಗಳು ಹೊರಟು ಹೋಗುತ್ತಾರೆ. )

**ಸಖಿಯರು**—( ಮುಂದಕ್ಕೆ ಹೋಗಿ ) ಸಖಿಯೇ ಇವತ್ತಿನ ಮಂಗಲ ಸಮಾರಂಭವು ನಿನಗೆ ಸುಖಪ್ರದವಾಗಲಿ.

**ಶಕುಂ**—ಬನ್ನಿರಿ, ಗೆಳತಿಯರಾ ಬನ್ನಿರಿ.

**ಸಖಿಯರು**—( ಮಂಗಲಪಾತ್ರಗಳನ್ನು ಕೈಯಲ್ಲಿ ಹಿಡಿದುಕೊಂಡು ಬಂದು ಕುಳಿತುಕೊಂಡು ) ಗೆಳತಿಯೇ, ಇತ್ತಿತ್ತ ಬಾ, ಮಂಗಲಾಭರಣಗಳನ್ನು ಇಡಿಸುತ್ತೇವೆ.

**ಶಕುಂ**—ಸಖಿಯರೇ, ಈ ಸಮಯದಲ್ಲಿ ಇದು ನನ್ನ ಭಾಗ್ಯವೇ ಸರಿ. ಇನ್ನು ಮೇಲೆ ಗೆಳತಿಯರ ಕೈಗಳಾಭರಣಗಳು ಎಲ್ಲಿ ಸಿಗುವವು? ( ಎಂದು ಕಣ್ಣು ತುಂಬ ನೀರು ತರುತ್ತಾಳೆ. )

**ಸಖಿಯರು**—ಮಂಗಲ ಸಮಯದಲ್ಲಿ ದುಃಖಿಸಬಾರದವ್ವ. ( ಸೆರಗಿ ನಿಂದ ಕಣ್ಣೀರು ಒರಸಿ ಮುಂದೆ ಕುಳ್ಳಿರಿಸಿಕೊಂಡು ಹೆಳಲು ಹಾಕುತ್ತಾರೆ. )

**ಪ್ರಿಯಂ**—ರಾಜಗೃಹದಲ್ಲಿಯ ರತ್ನಖಚಿತವಾದ ಅಲಂಕಾರಗಳಿಗೆ ಯೋಗ್ಯವಾದ ಈ ರೂಪವು ಮುನಿಜನರ ಆಶ್ರಮದಲ್ಲಿಯ ಹೂವಿನ ಆಭರಣ ಗಳಿಂದ ವಿಶೋಭಿತವಾಗಿ ಕಾಣುತ್ತದೆ.

( ಇಷ್ಟರಲ್ಲಿ ಇಬ್ಬರು ಋಷಿಕುಮಾರರು ಕೈಯಲ್ಲಿ ಆಭರಣಗಳ ಡಬ್ಬಿಗಳನ್ನೂ ವಸ್ತ್ರಗಳನ್ನೂ ಹಿಡಿದುಕೊಂಡು ಬರುತ್ತಾರೆ. )

**ಋಷಿಕುಮಾರರು**—( ಸಖಿಯರಿಗೆ ) ಇಕೊಳ್ಳಿ. ಈ ಅಲಂಕಾರಗಳನ್ನು ತೆಗೆದುಕೊಂಡು ಶಕುಂತಲೆಯ ಮೈಮೇಲೆ ಇಡಿಸಿರಿ.

( ಎಲ್ಲರೂ ಆ ಅಲಂಕಾರಗಳನ್ನು ನೋಡಿ ವಿಸ್ಮಿತರಾಗುತ್ತಾರೆ. )

**ಗೌತಮಮ್ಮ**—ತಮ್ಮಾ ಹಾರೀತಕಾ, ಇವನ್ನು ನಿನಗೆ ಯಾರು ಕೊಟ್ಟರಪ್ಪಯ್ಯಾ?

**ಮೊದಲನೆಯವನು**—ಅಮ್ಮಾ ಇವು ಕಣ್ವ ಮಹಾಮುನಿಗಳ ಪ್ರಭಾವದಿಂದ ಉಂಟಾದವು.

**ಗೌತಮಮ್ಮ**—ಅವರು ತಮ್ಮ ಮಾಯಾಸಿದ್ಧಿಯಿಂದ ಉಂಟು ಮಾಡಿದರೋ?

**ಎರಡನೆಯವ**—ಅಮ್ಮಾ ನಾನು ಹೇಳುತ್ತೇನೆ ಕೇಳಿ. ಶಕುಂತಲೆಗೋಸ್ಕರ ಹೂವುಗಳನ್ನು ತೆಗೆದುಕೊಂಡು ಬನ್ನಿರೆಂದು ಗುರುಗಳು ಆಜ್ಞಾಪಿಸಿದರು. ಆ ಮೇರೆಗೆ ನಾವು ಹೋಗಿ ಹೂವುಗಳನ್ನು ಕೊಯ್ಯುವಷ್ಟರಲ್ಲಿಯೆ ನಮ್ಮ ಕೈಗೆ ಈ ವಸ್ತ್ರಾಭರಣಗಳು ಬಂದವು. ಹ್ಯಾಗಂದರೆ,

( ಪದ )

ದಾಟಿ—-ಕರೆಯೆ ಕಮಲಾಕ್ಷಿ ಕಾಂತನ ಕರೆಯೆ ‖ ಪಲ್ಲ ‖ ಕುಚಯುಗಳಲಿ ನಖ । ರಚಿಸಿ ಮುದದಿ ಎನ್ನ । ಕಚಸಿಚಯದಿ ಪುಷ್ಪರಚಿಪರಸಿಕನಾ ‖ ಎಂಬ ಪದದಂತೆ.

**ಕೇಳಿಕೌತುಕವಮ್ಮಾ ನೀ ‖ ಪಲ್ಲ ‖**
**ಕುಸುಮಂಗಳಿಗೊಂದು । ಕುಜವನೇರಲದು**
**ಹಸನಿಹಲಾಕ್ಷಾರಸವ । ನೊಸರಿತಮ್ಮಾ ‖ ೧ ‖**
**ಫಲಗಳಗೊಂಚಲ । ಗಳು ಹರಿಯಲು ಮುಕ್ತಾ ।**
**ಫಲದೊಸ್ತ್ರವೆಕರ । ತಳದೊಳಾದವಮ್ಮಾ ‖ ೨ ‖**
**ಬಾಳೆಯ ಸುಳಿಯೊಂದು । ಬೆಳೆಯುತ ಪೊಳೆಯುತ ।**
**ಮೇಲಾದ ಬಿಳಿಯ ದು । ಕೂಲವಾಯಿತಮ್ಮಾ ‖ ೩ ‖**
**ಮಲ್ಲಿಗೆಪೂಗಳ । ನೆಲ್ಲಾ ಕೂಡಿಸಲೊಂದು**
**ಮೆಲ್ಲನೆ ಭರಜರಿ । ಸೆಲ್ಲೆಯಾಯಿತಮ್ಮಾ ‖ ೪ ‖**
**ಪೊಸದಳಿರೊಳುಗಿಳಿ । ಯೆನಲೊನದೇವಿಯು ‖**
**ಹಸರು ಜರದ ಕು । ಪ್ಪುಸವ ನಿತ್ತಳಮ್ಮಾ ‖ ೫ ‖**

**ಪ್ರಿಯಂ**—( ಶಕುಂತಲೆಯ ಮುಖವನ್ನು ನೋಡುತ್ತ ) ಎಲೆ, ಪ್ರಿಯಸಖಿಯೆ ಈ ವನಸ್ಪತಿಗಳು ಇನ್ನು ಮೇಲೆ ನೀನು ರಾಜಲಕ್ಷ್ಮಿಯ ಉಪಭೋಗವನ್ನು ತೆಗೆದುಕೊಳ್ಳುವೆಯೆಂದು ಸೂಚನೆ ಮಾಡಿಕೊಟ್ಟವು ಬಲ್ಲೆಯಾ?

( ಶಕುಂತಲೆಯು ಮುಗುಳುನಗೆಯಿಂದ ಮುಖವನ್ನು ಕೆಳಗೆ ಮಾಡುತ್ತಾಳೆ. )

**ಹಾರೀತಕ**— ಎಲೋ ಗೌತಮನೆ, ನಡೆ; ಗುರು ಕಣ್ವ ಮಹಾಮುನಿಗಳು ಸ್ನಾನವನ್ನು ಮಾಡಿಕೊಂಡು ಬಂದಿರಬಹುದು. ಅವರಿಗೆ ವನಸ್ಪತಿಗಳೂ ವನದೇವತೆಗಳೂ ಮಾಡಿದಂಥ ಸೇವೆಯನ್ನು ತಿಳಿಸೋಣ.

**ಗೌತಮಮ್ಮ**— ನಡೆ. ( ಇಬ್ಬರೂ ಹೋಗುತ್ತಾರೆ. )

**ಸಖಿಯರು**— ಶಕುಂತಲೆ, ಆಭರಣಗಳನ್ನು ಹ್ಯಾಗೆ ಇಡಿಸಬೇಕೆಂಬುವದು ನಮಗೆ ಗೊತ್ತಿಲ್ಲ; ಆದರೂ ಚಿತ್ರದಲ್ಲಿ ಬರೆದದ್ದು ನೋಡಿದ್ದೇವೆ. ಅದರಂತೆ ಇಡಿಸುವೆವು.

**ಶಕುಂ**—ಗೆಳತಿಯರಾ, ನಿಮ್ಮ ಕೌಶಲ್ಯವನ್ನು ನಾನರಿಯೆನೇ?

( ಸಖಿಯರು ಅಲಂಕಾರಗಳನ್ನಿಡಿಸುತ್ತಾರೆ. ಅಷ್ಟರಲ್ಲಿ ಸ್ನಾನ ಮಾಡಿಕೊಂಡು ಕಣ್ವರು ಬರುತ್ತಾರೆ. )

**ಕಾಶ್ಯಪ** —

( ಶ್ಲೋಕ )

**ಬಿಗಿದುರ್ಬಿದುದು ಗಂಟಲಶ್ರು ತೆರೆಗಳ್ ನೇತ್ರಂಗಳೋಳ್ ತಪ್ಪವೀ**
**ಮಗಳೀವೊತ್ತಿಗೆ ಪೋಪಳೆಂಬ ಕಡುಚಿಂತಾ ಕಷ್ಟದುದ್ಗಾರದಿಂ ||**
**ಮಿಗೆ ಬಾಯಾರಿತು ನೊಂದೆ ಬೆಂದೆ ಮನದೊಳ್ ಮುಂಗಾಣೆ**
**ನಿನ್ನಾ ಪ್ರಪಂ ||**
**ಬಿಗಳಿಷ್ಟೆಂತೆ ಮರುಂಗುತಿರ್ಪರಕಟಾ ಕನ್ಯಾವಿಯೋಗಕ್ಕೆಲೈ ||**

( ಎಂದು ಅತ್ತಿತ್ತ ತಿರುಗಾಡುತ್ತಾನೆ. )

**ಸಖಿಯರು**—ಎಲೆ ಶಕುಂತಲೆ, ಆಭರಣಗಳನ್ನಿಡಿಸುವದಾಯಿತು. ಇನ್ನು ಪೀತಾಂಬರವನ್ನುಟ್ಟುಕೊಂಡು ಸೆಲ್ಲೆಯನ್ನು ಹೊತ್ತುಕೋ.

**ಶಕುಂ**—( ಎದ್ದು ನಿಂತು ಪೀತಾಂಬರವನ್ನುಟ್ಟುಕೊಂಡು ಸೆಲ್ಲೆವನ್ನು ಧರಿಸಿಕೊಳ್ಳುತ್ತಾಳೆ. )

**ಗೌತಮಮ್ಮ**—ಶಕುಂತಲಾ, ಇಲ್ಲಿ ಬಾ ಅಮ್ಮಾ. ನಿನ್ನ ತಂದೆಗಳು ಆನಂದಾಶ್ರುಗಳಿಂದ ತುಂಬಿದ ನೇತ್ರಗಳಿಂದ ನಿನ್ನನ್ನು ನೋಡುತ್ತಿದ್ದಾರೆ. ಹೋಗಿ ನಮಸ್ಕಾರ ಮಾಡು.

**ಶಕುಂ**—( ತಂದೆಯ ಚರಣಕ್ಕೆರಗುತ್ತ ) ತಾತಾ, ವಂದನೆ ಮಾಡುತ್ತೇನೆ.

**ಕಾಶ್ಯಪ**—( ಅವಳ ಮಸ್ತಕದಲ್ಲಿ ಕೈಯಿಟ್ಟು ) ವತ್ಸೇ,

||ಕಂದ|| **ಯಯಾತಿರಾಯಂ ಶರ್ಮಿ|**
**ಷ್ಠೆಯೊಳತ್ಯಾದರದಿ ವರ್ತಿಸಿದವೊಲ್ ಪತಿಯು ||**
**ನಯಮಂ ತೋರಲ್ ನೀ ಪೊ**
**ಟ್ಟೆಯೊಲಿಂ ಪುರುವಿನ ಪೊರೆವಡೆ ಚಕ್ರವರ್ತಿ ಮಗನಾ ||**

**ಗೌತಮಮ್ಮ**—ಹೇ ಭಗವನ್ ಇದು ಆಶೀರ್ವಾದವಲ್ಲ. ವರವನ್ನೇ ಕೊಟ್ಟ ಹಾಗೆ.

**ಕಾಶ್ಯಪ**—ಹೇ ವತ್ಸೇ, ಅಗ್ನಿಕುಂಡಕ್ಕೆ ಪ್ರದಕ್ಷಿಣೆ ಹಾಕು. ( ಎಲ್ಲರೂ ಅಗ್ನಿಕುಂಡದ ಸುತ್ತಲು ತಿರುಗುತ್ತಾರೆ. ಕಾಶ್ಯಪನು ತನ್ನ ಮಗಳಿಗೆ ಆಶೀರ್ವಾದ ಮಾಡುತ್ತಾನೆ. )

ವೃತ್ತ ||**ಝಳಝಳವಾದ ವೇದಿಯಲಿ ವಿಸ್ತೃತವಾಗಿರೆ ಸುತ್ತಲೈದೆ ನಿ-**
**ರ್ಮಳತರ ದರ್ಭಮಧ್ಯದೊಳು ತಾಣವಗೊಂಡಿಹ ಕುಂಡ**
**ದಲ್ಲಿ ಪ್ರ-**

---

* ययातेरिव शर्मिष्ठा भर्तुर्बहुमता भव ।
सुतं त्वमपि सम्राजं सेव पुरुमवाप्नुहि ॥ ६ ॥

**ಜ್ವಳಿಸುವ ಹವ್ಯಗಂಧದಿಯಿ ಪಾತಕಮಂ ಸುಡುವಗ್ನಿದೇವ ತಾಂ**
**ಕೆಲದೊಳಗಿರ್ದು ನಿತ್ಯ ಬಿಡದೀಕ್ಷಿಸಿರಕ್ಷಿಸಲೆಮ್ಮ ನಿನ್ನನು ॥ ***

ನಡೆ ಇನ್ನು ಮುಂದೆ. ( ಹಿಂದೆ ನೋಡಿ ) ಶಾರ್ಙ್ಗರವಾದಿ ಶಿಷ್ಯರು ಎಲ್ಲಿದ್ದಾರೆ?

**ಶಿಷ್ಯರು**—ಸ್ವಾಮೀ ಸಿದ್ಧರಾಗಿದ್ದೇವೆ.

**ಕಾಶ್ಯಪ**—ನಿಮ್ಮ ತಂಗಿಗೆ ಹಾದಿ ತೋರಿಸಿರಿ.

**ಶಾರ್ಙ್ಗರವ**—ಅಮ್ಮಾ ದೇವೀ, ಇತ್ತ ಬನ್ನಿ ( ಎಲ್ಲರು ಅವಳ ಹಿಂದೆ ಹೋಗುತ್ತಾರೆ. )

**ಕಾಶ್ಯಪ**—ಎಲೈ ತಪೋವನದ ವೃಕ್ಷಗಳಿರಾ.

**( ಪದ )**

ದಾಟಿ—" ನೆನೆನೆನೆದು ಎನ್ನಯ ಮನ ನೆರೆ ಮೋಹಿಸುತಿದೆ " ಎಂಬ ಪದದಂತೆ.

**ಪತಿಯಾಲಯಕಿಂದು ಪೋಗುವ ನಿಮ್ಮ ಸಖಿಯೊಳನು-**
**ಮತವ ನೀಡಲಿಬೇಕಾಶ್ರಮ ತರುವರುಗಳಿರಾ ॥ ಪಲ್ಲ ॥**
**ಪ್ರತಿದಿನದೊಳು ನಿಮ್ಮನೆ ನೀರ್ಗುಡಿಸದೆ ತಾಪಾನಿಸಳು ।**
**ಹಿತದೊಳ್ ನಿಮ್ಮಯ ಸೇವೆಯೊಳನುದಿನ ತತ್ಪರಳು ॥ ೧ ॥**
**ಚಲುವಾಭರಣಗಳೊಳತಿ ಮಮತೆಯುಳ್ಳವಳಿರಲು ।**
**ಬಲುನೇಹದಿ ನಿಮ್ಮಯ ಚಿಗುರನೆ ಚಿವುಟದ ಮಗಳು ॥ ೨ ॥**
**ಪೊಸಕುಸುಮ ಪ್ರಸವನೆ ಕಂಡತಿ ಸಂತೋಷವ ತಾಳ್ವ ॥**
**ಎಸಳುಗಂಗಳೆ ನಿಮ್ಮನೆ ನೋಡುತ ನಿಲ್ಲುವಳು ॥ ೩ ॥**

---

* अमी वेदिं परितः क्लृप्तधिष्ण्याः
समिद्वन्तः प्रान्तसंस्तीर्णदर्भाः ।
अपघ्नन्तो दुरितं हव्यगन्धै-
र्वैतानास्त्वां वह्नयः पावयन्तु ॥ ७ ॥

( ಇಷ್ಟರಲ್ಲಿ ಕೋಕಿಲಸ್ವರವು ಕೇಳಬರುತ್ತದೆ. )

**ಪ್ರಿಯಂ**—( ಕೋಕಿಲಧ್ವನಿಯನ್ನು ಕೇಳಿ ಶಕುಂತಲೆಗೆ ಹೇಳುತ್ತಾಳೆ.)

**ವೃ || ಅರಳುಗಳೆಮ್ಮವಿಸ್ನು ಭರದಿಂ ಸುರಿಯಲ್ಕಿವೆ ಮಾರ**
**ನಂಬುಗಳ್ ।**
**ಪರಿಪರಿಕಾಯ್ದುವಳ್ಗೆ ಮಿಗೆ ಕಾಡುವವಿಲ್ಲಿರೆ ಕಷ್ಟವೆಂದು ವೃ- ||**
**ಕ್ಷರುಗಳೆ ಎಮ್ಮರಣ್ಯದೊಳಗಿಷ್ಟರು ಮಿತ್ರರು ಬಂದು ನಿಂದು-**
**ತ್ಕರುಣದ ಕೋಕಿಲಸ್ವನದಿ ಪೋಗೆನುತೀಗಲೆ ಪೇಳಿದರ್ಸಖೀ||**

( ಇಷ್ಟರಲ್ಲಿ ಆಕಾಶವಾಣಿಯಾಗುತ್ತದೆ. )

**( ಪದ )**

ದಾಟಿ—ರಾತಸಂಯಾ ಘೋರಿ ಝುಲನಿ ಹರಾನಿ || ಜಡಿತ ಜಡಾವಕಿ ಬಿಂದಿಯು ಹಮಾರಿ । ಲಾಖಿರುಪಯ್ಯಾಕಿ ಝುಲನಿ ಹರಾನಿ || ಎಂಬ ಪದದಂತೆ.

**ಮಾರ್ಗವಾಗಲಿ ಮಂಗಲಮಯವಮ್ಮಾ** || ಪಲ್ಲ ||
**ಕಮಲಪತ್ರಗಳಿಂದೆ ಮನೋಹರಮಾ-**
**ದಮಲಸರಂಗಳಿಂ ರಮಣೀಯವಮ್ಮಾ** || ೧ ||
**ತರುಗಳ ನೆರಳಿಂ ತರಣಿಯ ತಾಪವು**
**ತಾಕದೆ ಮಾರುತಂ ತಂಪಿಡವೆಮ್ಮಾ** || ೨ ||
**ಕುಸುಮದ ರಜಗಳ್ ಪಸರಿಸಿ ಧೂಳಿಯೊಳ್**
**ಮಿಸಳಿಸಿ ದಾರಿಯು ಮೃದುಗೊಳಲೆಮ್ಮಾ** || ೩ || *

( ಎಲ್ಲರೂ ವಿಸ್ಮಯಗೊಂಡು ನೋಡುತ್ತಾರೆ. )

**ಗೌತಮಮ್ಮ**—ಎಲೆ ತಂಗಿಯೆ ನಮ್ಮ ಆಪ್ತೇಷ್ಟರಾದ ವನದೇವತೆಗಳು ನಿನಗೆ ಹೋಗುವದಕ್ಕೆ ಅನುಮೋದನ ಕೊಟ್ಟಿದ್ದಾರೆ. ಅವರಿಗೆ ವಂದನೆ ಮಾಡು.

---

* रम्यान्तरः कमलिनीहरितैः सरोभि-
श्छायाद्रुमैर्नियमितार्कमयुखतापः ।
भूयात्कुशेशयरजोमृदुरेणुरस्याः
शान्तानुकूलपवनश्च शिवश्च पन्थाः ॥ १० ॥

**ಶಕುಂ**—( ವಂದನೆ ಮಾಡುತ್ತಾಳೆ. ) ಎಲೆ ಸಖಿಯೆ ಪ್ರಿಯಂವದೆ, ಆರ್ಯಪುತ್ರನನ್ನು ನೋಡುವವಕ್ಕೆ ನಾನು ಇಷ್ಟು ಉತ್ಸುಕಳಾಗಿದ್ದರೂ ಆಶ್ರಮ ಬಿಟ್ಟು ಹೋಗಬೇಕಾದರೆ ಕಾಲುಗಳೇ ಮುಂದಕ್ಕೆ ಸಾಗಲೊಲ್ಲವು.

**ಪ್ರಿಯಂ**—ಸಖಿಯೇ, ತಪೋವನದ ವಿಯೋಗವಾಗುವದರಿಂದ ನಿನಗೊಬ್ಬಳಿಗೇ ದುಃಖವಾಗುತ್ತದೆಂದು ತಿಳಿಯಬೇಡ. ನಿನ್ನ ವಿಯೋಗವಾಗುವದೆಂದು ಎಲ್ಲಾ ಆಶ್ರಮಕ್ಕೇ ನಿನ್ನಂತೆ ದುಃಖವಾಗಿದೆ ನೋಡಿದೆಯಾ!

( ಪದ )

ದಾಟಿ—“ ಯಾತಕೆನ್ನನು ಎಬ್ಬಿಸಿ ತೆಕ್ಕೆಯೊಳಿರ್ದ ನಾಥನ್ನಗಲಿಸಿದಿರೆ ” ಎಂಬ ಪದದಂತೆ.

**ದುಃಖವಾಗಿಹುದಮ್ಮಯ್ಯಾ ॥ ಆಶ್ರಮವೃಕ್ಷ ।**
**ಪಕ್ಷಿಪಶುಗಳಿಗೆಲ್ಲಾ ॥ ಪಲ್ಲ ॥**
**ಚಿಕ್ಕಂದಿನಿಂದಿಹ । ಸಕ್ಕರೆಯೊಲ್ ಸ್ನೇಹ-।**
**ದಕ್ಕನೀ ಪತಿಯಾಲ-। ಯಕ್ಕೆ ಪೋಗುವಿಯೆಂದು ॥ಅನುಪಲ್ಲ॥**
**ಪಾರಿಜಾತಾದಿಗಳು । ಕುಸುಮವೆಂಬ ಕ-**
**ಣ್ಣೀರಾಗಿ ಸುರಿಸುವವು ॥**
**ತೋರತರುಗಳೆಲ್ಲ । ಸ್ತಬ್ಧವಾದವು ಕಳೆ-**
**ಯಾರಿ ಬಳ್ಳಿಗಳು ಬಳಲಿ ಬಡವಾದವು ॥ ೧ ॥**
**ಗಿಳಿಗಳು ಫಲಗಳನು । ಅರ್ಧವೆ ಕಚ್ಚಿ**
**ನೆಲಕೆ ಬಿಸುಟುತಿಹವೆ ॥**
**ಕಳವಳಿಸುತಲಿ ನ-। ವಿಲುಗಳು ವೃಕ್ಷಾಗ್ರ**
**ದೊಳಗೆ ನಿನ್ನೂರೆಷ್ಟು ದೂರೆಂದು ನೋಳ್ಪವು ॥ ೨ ॥**
**ಎಳೆಯ ದರ್ಭದೊಳು ನಿಂದು । ಮೇಯದೆ ಮೃಗ**
**ಗಳು ನಿನ್ನ ನೋಡುವವೆ ॥**
**ಮೊಲೆಯನುಣ್ಣಲು ಬಂದ । ಎಳೆಯ ಗರುವನಾವು**
**ಗಳು ರೋಷದಿಂದ ಮುಂ । ದಲೆಯಿಂದಲಿರಿವವು ॥ ೩ ॥**

---

उद्गलितदर्भकवला मृगाः परित्यक्तनर्तना मयूराः
अपसृतपाण्डुपत्रा मुञ्चन्त्यश्रूणीव लताः ॥ ११ ॥

**ಶಕುಂ**—ತಾತನೆ ನನ್ನ ಲತಾಭಗಿನಿಯಾದ ವನಜ್ಯೋತ್ಸ್ನೆಯ ಅನುಮೋದನವನ್ನು ತೆಗೆದುಕೊಂಡು ಬರುತ್ತೇನೆ.

**ಕಾಶ್ಯಪ**—ಆ ಬಳ್ಳಿಯಾ ನಿನ್ನಾ ಅಕ್ಕ ತಂಗಿಯರ ಮಾಯೆ ಉಂಟೆಂಬುದನ್ನು ನಾನು ಬಲ್ಲೆ. ಇಕೋ ನೋಡು ನಿನ್ನ ಬಲ ಭಾಗಕ್ಕೆ.

**ಶಕುಂ**—( ಲತೆಯ ಸಮೀಪಕ್ಕೆ ಹೋಗಿ ) ಎಲೆ ವನಜ್ಯೋತ್ಸ್ನೆ, ನೀನು ಆಮ್ರವೃಕ್ಷವನ್ನು ಅಪ್ಪಿಕೊಂಡಿದ್ದರೂ ಇತ್ತ ಕಡೆಯಲ್ಲಿರುವ ಟೊಂಗೆಗಳಿಂದ ನನಗೆ ಆಲಿಂಗನವನ್ನು ನೀಡು. ಇಂದಿನಿಂದ ನಾನು ನಿನಗೆ ಬಹುದೂರವಾಗಿ ಹೋಗುತ್ತೇನೆ. ತಾತನೆ, ಇಷ್ಟು ದಿವಸ ನನ್ನನ್ನು ಸಂರಕ್ಷಿಸಿದಂತೆ ಇನ್ನುಮೇಲೆ ವನಜ್ಯೋತ್ಸ್ನೆಯನ್ನು ಕಾಪಾಡಬೇಕು ಬಲ್ಲೆಯಾ !

**ಕಾಶ್ಯಪ**—ನಿಮ್ಮಿಬ್ಬರ ವಿಷಯದಲ್ಲಿಯೂ ನಾನು ನಿಶ್ಚಿಂತನಾದೆ.

ವೃತ್ತ || ಕೊಡಬೇಕೆಂಬವನಿಂಗೆ ಕೂಡಿದೆಯಲೇ ನೀನಾಗಿ
ಸತ್ಪುಣ್ಯದಿಂ ।
ದೊಡೆಯಂ ತಕ್ಕವನಾದಪಂ ದೊರೆತನೇ ಮಿಾಸಾಕ್ಷಿ
ಕೇಳ್ ಮಾನಿಸ ||
ಗಿಡಮಂ ಪರ್ಬಿತು ಮಲ್ಲಿಕಾಲತೆಯುಮಿನ್ನಾಂ ಚಿಂತೆಯಂ
ಬಿಟ್ಟೆ ಕೇಳ್
ನಡೆ ಮುನ್ನೋಡುತ ಸಾಗು ಮಾಪುಗಳು ಇನ್ನೆಷ್ವಾಢಲೇಂ
ಶೀಪರ್ಗವೆ ||

**ಶಕುಂ**—ಸಖಿಯರಾ, ಈ ವನಜ್ಯೋತ್ಸ್ನೆಯನ್ನು ನಿಮ್ಮಿಬ್ಬರ ಕೈಯಲ್ಲಿ ಕೊಟ್ಟಿದ್ದೇನೆ. ನೀವೇ ಸಂರಕ್ಷಣ ಮಾಡತಕ್ಕದ್ದು.

**ಸಖಿಯರು**— ಮತ್ತೆ ನಮ್ಮನ್ನು ಯಾರ ಕೈಯಲ್ಲಿ ಕೊಟ್ಟು ಹೋಗುತ್ತೀ ? ( ಕಣ್ಣುತುಂಬ ನೀರು ತರುತ್ತಾರೆ. )

**ಕಾಶ್ಯಪ**— ಎಲೆ ಅನಸೂಯೆ, ಪ್ರಿಯಂವದೆ, ಶಕುಂತಲೆಯ ಸಮಾಧಾನವನ್ನು ಮಾಡುವದು ಬಿಟ್ಟು ನೀವೇ ದುಃಖಿಸುತ್ತೀರಿ. ಇದು ಯೋಗ್ಯವಲ್ಲ.

( ಎಲ್ಲರೂ ಮುಂದೆ ನಡೆಯುತ್ತಾರೆ. )

ಶಕುಂ—ತಾತಾ ನಾನು ಇನ್ನೊಂದು ಬಿನ್ನಹ ಮಾಡಿಕೊಳ್ಳುತ್ತೇನೆ ಕೇಳು.

( ಪದ )

ದಾಟಿ—" ಕಾಮನಗಾಳಿ ಸೋಂಕಿತು ಹೇಮಲತಾಂಗಿಗೆ " ಎಂಬ ಪಾರಿಜಾತದೊಳಗಿನ ಪದದಂತೆ.

ಹೇಳಿ ಕಳುಹಿಸಯ್ಯಾ, ತಾತಯ್ಯ ಸುದ್ದಿಯ ||
ಮ್ಯಾಲೆ ಮ್ಯಾಲೆ ನಾನಲ್ಲೆ ಕೇಳಿ ಸುಖಿಸುವಂತೆ || ಪಲ್ಲ ||
ತಂದೆ ಕೇಳಯ್ಯ ಗರ್ಭ । ದಿಂದಲೆಶ್ರಮಿಸುತ
ಮಂದಮಂದವಾಗಿ ಮನೆ | ಹಿಂದೆ ತಿರುಗುತಿಹ
ದೊಂಬೆರಳೆಯು ಕ್ಷೇಮ | ದಿಂದಲೀದವಾರ್ತೆಯ || ೧ ||
ಅಂಬೆಗಾಲಿಲಿ ಮನೆ । ತುಂಬ ಓಡಾಡುವ ||
ಅಂಬಋಷಿಯ ಕಂದಾ || ನುಂಬುವ ತನ್ನ ಕಯ್ಯ |
ಲೆಂಬುವದು ಮರೆಯದೆ । ಸಂಭ್ರಮದ ವಾರ್ತೆಯ ||೨||
ಶರೀರಕ್ಕೆ ಸಮರಾದ | ತರಳೆಯರೆನ್ನ ಸಖಿ ।
ಯರು ಮದುವೆಗಾದರು । ವರರ ನೋಡು ಸತ್ವರ ।
ಕರೆಯ ಕಳುಹಿಸಯ್ಯಾ । ಕಾರ್ಯಕ್ಕೆ ಬರುವೆನು || ೩ ||

ಕಾಶ್ಯಪ—ಅಮ್ಮಾ, ನೀನು ಏನೂ ಚಿಂತೆ ಮಾಡಬೇಡ ಕಂಡೆಯಾ. ಹೋಗಬರುವವರ ಕೂಡ ಮೇಲಿಂದ ಮೇಲೆ ವರ್ತಮಾನವನ್ನು ಹೇಳಿ ಕಳು ಹಿಸುತ್ತೇನೆ.

ಶಕುಂ—ಅಪ್ಪಯ್ಯಾ! ಕಾಲಿನಲ್ಲಿ ಏನು ಸುತ್ತಾಡುತ್ತದೆ ಇದು. ( ಹಿಂದಿರುಗಿ ನೋಡುತ್ತಾಳೆ ).

ಕಾಶ್ಯಪ—ವತ್ಸೆ, ನೀನು ಮಗುವಿನಂತೆ ಜೋಕೆ ಮಾಡಿದ ಮೃಗವು ಕಂಡೆಯಾ ಇದು.

ವೃ || ತುದಿ ತುಟಿಯಲ್ಲಿ ಮುಳ್ಳ ಮೊನೆ ನೆಟ್ಟಿದ ನೊಯ್ಯನೆ ಕೀಳ್ದು ನೊಯ್ಯದಿಂ
ಗುದಿಫಲವೆಣ್ಣೆಯಂ ತೊಡೆದು ಮಾಯಿಸಿ ಬಾಯೊಳು ಸಾವೆ ನೆಲ್ಲುಗಳ್

ಮೃದುಕರಬೆನ್ನೊಳಾಡಿಸುತ ಮುಷ್ಟಿಯಲಿಂ ತಿನಿಸಿರ್ದ ಮಾ
ಯುಮಿಂ ।
ದಿದು ಬಿಡದಮ್ಮ ನಿನ್ನ ಮಗನೊಲ್ ಮೃಗಮುಂ ಬಿಗಿದಪ್ಪಿ
ಮುದ್ದಿಸೆ ॥

**ಶಕುಂ**—( ಅದರ ಮೇಲೆ ಕೈಯಾಡಿಸಿ )

( ಪದ )

ದಾಟಿ—" ಮಗುವೇ ನೀ ಹೋಗಿ ಮಾಧವನ ಬಳಿಗಮ್ಮಾ । ಹಗರಣದ ಸುದ್ದಿ ತಂದರುಹಿದಲ್ಲಮ್ಮಾ ॥ ಈ ಪಾರಿಜಾತದೊಗಿನ ಪದದಂತೆ.

ಕಂದಾ ಇನ್ಯಾತಕ್ಕೆ ಬರುವೆ ಬಳಿಯಲ್ಲಿ । ನಾ-
ನಿಂದು ನಿನ್ನಗಲಿ ಪೋಗುವೆ ದೂರದಲ್ಲಿ ॥ ಪಲ್ಲ ॥

ಹೆತ್ತು ಪೋದಳು ನಿನ್ನ ತಾಯಮ್ವ ಮುನ್ನ । ಆ-
ವೊತ್ತಿನಿಂದಲೆ ಕಾಪಾಡಿದೆನಲ್ಲೊ ನಿನ್ನ ॥
ಹೊತ್ತು ಹೊತ್ತಿಗೆ ಪಾಲನಿಕ್ಕಿದೆ ಚಿನ್ನಾ । ಈ
ವೊತ್ತು ನಾನಿನಗಿಲ್ಲದಾದೆ ಪೋಗಿನ್ನು ॥ ೧ ॥

ಲೀಲೆಯ ನೋಡಿ ಆಲ್ಹಾದಿಸುತಿರ್ದೆ । ನಾ-
ಲೋಲನಯನ ನಿನ್ನ ಮಾತೆಯೊಲಾದೆ ॥
ಬಾಲ ಇನ್ಯಾತಕ್ಕೆ ಸುಡು ಎನ್ನ ಹಾದೆ । ನಾ-
ಪಾಲಿಸುವ ಪುಣ್ಯವಿಂದಿಗೆ ತೀರಗೈದೆ ॥ ೨ ॥

ಯಾತರಿಂದಲು ನ್ಯೂನವಿಲ್ಲ ಕೇಳಮ್ವಾ । ಈ-
ತಾತಯ್ಯನೆನ್ನೊಲು ನಿನ್ನ ಪಾಲಿಸುವ ॥
ನೀತಿಯ ಕರುವೆ ಬಿಡು ಎನ್ನ ಹಂಬಲವ । ನೀ-
ಪ್ರೀತಿಯ ಕಡೆಯ ಮುದ್ದಿಗೆ ನೀಡು ಮೊಗವ ॥ ೩ ॥

( ಎಂದು ದಃಖಿಸುತ್ತ ನಿಲ್ಲುತ್ತಾಳೆ. )

**ಕಾಶ್ಯಪ**—( ಕುತ್ತಿಗೆ ಶಿರಗಳುಬ್ಬಿಬಂದು ಮಗಳನ್ನಪ್ಪಿಕೊಂಡು ಸಮಾಧಾನ ಮಾಡುತ್ತಾನೆ. )

ಶ್ರೀ

**ಬಳಬಳನಶ್ರು ಪೂರನಯನಂಗಳಲಿಂ ಸುರಿಸುತ್ತ ತಂಗಿ ಕ-**
**ಣ್ಣುಗಳ ತೆರದಿರ್ದು ಮುನ್ನಡಿಯು ಗಾಣದೆ ತಪ್ಪುವ ಹೆಜ್ಜೆ**
**ದಾರಿಯೊಳ್ ||**

**ಇಳಿವರಿ ತಗ್ಗು ದಿಟ್ಟೆಗಳ ನೋಡುತ ಸಾಗೆಲೆ ಕಷ್ಟದೋಳು ನೀಂ ।**
**ತಳಮಳಗೊಳ್ಳಬೇಡ ಮನದೊಳ್ ಸ್ಥಿರಳಾಗೊರಿಸಮ್ಮ ನೇತ್ರವಾ||**

( ಎಂದು ಕಣ್ಣೊರಿಸುತ್ತಾನೆ. )

**ಶಾರ್ಙರವ**— ಸ್ವಾಮಿ, ಆಪ್ತಜನರನ್ನು ಜಲಾಶಯದ ವರೆಗೆ ಕಳುಹಿಸ ಹೋಗಬೇಕೆಂದು ಶ್ರುತಿಯುಂಟು. ಆದರಿಂದ ಹೇಳತಕ್ಕದ್ದನ್ನು ಹೇಳಿ ತಾವು ಇದೇ ಸರೋವರದಿಂದ ಹಿಂದಿರುಗಬೇಕು.

**ಕಾಶ್ಯಪ**—ಒಳ್ಳೇದು, ಈ ಕ್ಷೀರವೃಕ್ಷದ ನೆರಳಿನಲ್ಲಿ ಸ್ವಲ್ಪ ಕುಳಿತುಕೊಳ್ಳೋಣ. ( ಎಲ್ಲರೂ ಮರದ ಕೆಳಗೆ ಕುಳಿತುಕೊಳ್ಳುವರು. )

**ಕಾಶ್ಯಪ**—( ತನ್ನೊಳಗೆ )ದುಷ್ಯಂತರಾಜನಿಗೆ ಏನೆಂದು ಹೇಳಿ ಕಳುಹಿಸತಕ್ಕದ್ದು ? ( ಯೋಚಿಸುವನು. )

**ಶಕುಂ**—( ಅನಸೂಯೆಗೆ ಏಕಾಂತವಾಗಿ ) ಸಖಿಯೆ ಅನಸೂಯೆ ಈ ಕೌತುಕವನ್ನು ನೋಡಿದೆಯಾ ?

( ಪದ )

ದಾಟಿ—ಮನಸು ನಿಲುಕದಿ ಅರಿಯದವನೊಳು ಮನಸಿಜಾಗಮವುದಂದವೇ । ಕನಸಿನೊಳಗರನಿಮಿಷವಾದರು ಕಾಮತಂತ್ರವ ಬಲ್ಲನೊಳು ಸಾಕು || ಎಂಬ ಪದವಂತೆ.

**ಕಮಲದಳಮರೆಯಾಗಲಿನಯನಕಾಣದಲೆ ಗಾಬರಿಸಿ ನೋಡುತೆ**
**ಶ್ರಮವ ಬಡುತಿಹ ಚಕ್ರವಾಕಿಯ । ಅಮಮ ನೋಡಿ ನಾ ಸೈರಿಸ**
**ಲಾರೆ || ಪಲ್ಲ ||**

**ಒಮ್ಮೆ ಪೋಲಕೆ ಜಿಗಿದು ಆಗಸ । ವನ್ನೆ ಶೋಧಿಸಿ ಎಂಟು ದಿಕ್ಕ**
**ನೊಳ್ ।**
**ಸುಮ್ಮನೈದುತಲಲ್ಲಿಗಲ್ಲಿಗೆ । ಸಂಕಟದ ಸ್ವರದಿಂದೆ ಕರೆವದು ||೧||**
**ಬಂದು ತರುಗಳ ನೆರೆಸಮೂಹದೊ । ಳೊಂದೆ ಸಮನಾಲ್ವರಿಯು**
**ತಲಿ ಬೇ-**
**ರೊಂದು ಶಾಖೆಯೊಳೀಕ್ಷಿಸುತ ಮನ | ಬೆಂದು ಸಂತಾಪದಲಿ**
**ಬೇರ್ವಡು || ೨ ||**

ಮತ್ತೆ ಧೈರ್ಯವ ತಾಳ್ದು ಸರವನು । ಸುತ್ತಿ ನೆಲಸವನಾಗಿ
ತಿರುಗುತ
ಎತ್ತಲೆತ್ತಲು ಕಾಣದಲೆ ದೈನ್ಯ । ವೆತ್ತು ಬಿಡದಲೆ ತೊಳಲು
ತಿರುವದು ॥ ೩ ॥

ಅನ:—ಸಖಿಯೇ, ಈ ಚಕ್ರವಾಕ ಸ್ತ್ರೀಯನ್ನು ನೋಡಿ ಖೇದಬಡಲಿಕ್ಕೆ ಕಾರಣವಿಲ್ಲ. ಯಾಕಂದರೆ ಹೇಳುತ್ತೇನೆ ಕೇಳು.

( ಪದ )

ದಾಟಿ—ಮೇಲಿನ ಪದದಂತೆ.

ಕಾಂತನಗಲಿದ ಒಂದು ಕ್ಷಣವನು । ಇಂತು ಸೈರಿಸದಿರುವ
ಪಕ್ಷಿಯು
ಚಿಂತೆಯೊಳು ಸಂತೋಷಿಸುತ ಯುಗ । ದಂಥ ರಾತ್ರಿಗಳನ್ನೆ
ಕಳೆವದು ॥
ಹಿಂದೆ ಕೂಡಿದ ಸಮಯದೊಳಗಿನಾ । ಸಂಪತರ ಕ್ರೀಡೆಗಳ
ಮನದೊಳು
ತಂದು ತನ್ಮಯವಾಗಿ ಮೂರೊಳು । ಒಂದು ಪಾಲಿರುಳನ್ನೆ
ಕಳೆವುದು ॥ ೧ ॥
ಮುಂದೆ ಕೂಡಿದ ಮೇಲೆ ವಿರಹದಿಂ । ನೊಂದ ಸುದ್ದಿಯನೆಲ್ಲ
ನಲ್ಲನ
ಮುಂದೆ ಹೇಳುತೆ ಹೊಂದಿ ಸುಖಿಸುವೆ । ನೆಂದು ಸರುರಾತ್ರಿ
ಯೊಳು ನೆನವುದು ॥ ೨ ॥
ಬೆಳಗು ಬರುವದು ಬರುವದೆನುತಲಿ । ಕಳೆಯುನೇರುತ ಕಷ್ಟ-
ವೆಂಬ ಕ-
ತ್ತಲೆಯು ನಡಗಿಸಿ ಉಳಿದನಿಸಿಯನು । ಕಳೆವುದಾಶಾನಂದ
ಪ್ರಭೆಯೊಳು ॥ ೩ ॥

---

एषापि प्रियेण विना गमयति रजनीं विषाददीर्घतराम्
गुर्वपि विरहदुःखमाशाबन्धः साहयति ॥ १९ ॥

ಕಾಶ್ಯಪಃ—ಎಲೈ ಶಾರ್ಙ್ಗರವನೇ, ಶಕುಂತಲೆಯನ್ನು ಸಾರ್ವಭೌಮನ ಸ್ವಾಧೀನ ಮಾಡಿ ಆತನಿಗೆ ಇಷ್ಟು ಹೇಳು.

ಶಾರ್ಙ್ಗರವ—ಸ್ವಾಮಿ, ಏನು ಹೇಳತಕ್ಕದ್ದು ಆಜ್ಞಾಪಿಸಬೇಕು.

ಕಾಶ್ಯಪ—ಆತನಿಗೆ ಇಷ್ಟೇ ಹೇಳತಕ್ಕದ್ದು—

೩೦

ವೃ॥ ಮುನಿಜನ ಧರ್ಮವುಂ ತಿಳಿದು ನಿನ್ನಯ ತೋರ ಕೌಲಕ್ಕೆ ಲಕ್ಷ್ಯ
ವಿಟ್ಟಸುಮತವಾಪ್ತರಿಷ್ಟರಸು ಕೇಳದೆ ಗೈದಲೆ ನೇಹಮಿನ್ನು ನೀಂ॥
ನೆನೆದಿವಳನ್ನು ನಿನ್ನಿತರ ಪತ್ನಿಗಳಂತಿಡಬೇಕು ಮೇಲೆ ಬೊ॥
ಮ್ಮನ ಬರಹಂ ನಿಜಂ ಬಿಡುವದೇ ಬಿಡುವದೇ ಬಿಡು ನಾವದ ಸಾಡಬರ್ಪುದೆ॥

ಶಾರ್ಙ್ಗರವ—ಒಳ್ಳೇದು ಸ್ವಾಮಿ ಇದರಂತೆ ತಿಳಿಸುತ್ತೇನೆ.

ಕಾಶ್ಯಪ:—ಎಲೆ ವತ್ಸೆ, ಇನ್ನೊಂದು ಮಾತು ನಿನಗೆ ಹೇಳತಕ್ಕದ್ದಿದೆ. ನಾವು ಅರಣ್ಯದೊಳಗಿರುವವರಾದರೂ ಲೌಕಿಕವನ್ನು ಸ್ವಲ್ಪ ಬಲ್ಲೆವು.

ಶಾರ್ಙ್ಗರವ:—ತಮ್ಮಂಥ ಜ್ಞಾನಿಗಳಿಗೆ ಅಗೋಚರವಾದದ್ದು ಯಾವದುಂಟು ?

ಕಾಶ್ಯಪ:—ವತ್ಸೇ, ನಿನ್ನ ಪತಿಯ ಮಂದಿರಕ್ಕೆ ಹೋದ ಮೇಲೆ ನೀನು ಈ ಪ್ರಕಾರ ನಡೆಯತಕ್ಕದ್ದು ಬಲ್ಲೆಯಾ:—

( ಪದ )

ದಾಟಿ:—ತನ್ನ ಕಣ್ಣೊಳು ಒನಕೆಯನಿಟ್ಟು ಅನ್ಯರ ಕಣ್ಣು ಕಸವನಾಯ್ವಂತೆ ನಿನ್ನ ಆಚರಣೆಗೆ ನೀನೆ ಮೆಚ್ಚಿದೆ ಕೃಷ್ಣ ಇನ್ನೊಬ್ಬರಹುದಂದರಹುದೋ ಎಂಬ ಪದದಂತೆ.

ಪತಿಯ ಮಂದಿರಕೆ ನೀ ಪೋದ ಮೇಲಿನಿತು ಪ-
ದ್ಧತಿಯಿಂದೆ ನಡೆಯಬೇಕಮ್ಮ ಕೇಳು ॥ ಪಲ್ಲ ॥
ಹಿತದಿಂದೆಲ್ಲರಿಗು ನಮ್ರತೆಯದೋರುತ ಪ್ರೌಢ
ಮತಗಳಾಗಿರಲಿಬೇಕು ಜನದೊಳು ॥ ಅನುಪಲ್ಲ ॥

ಹಿರಿಯರ ಸೇವೆಯೊಳ್ ಪರಮ ತತ್ಪರಳಾಗು
ಕಿರಿಯರಿಗೆಲ್ಲ ಕರುಣವದೋರು |
ಸರಿಯ ಸವತಿಯರೊಳ್ ಸ್ನೇಹಗೂಡವರು ಮ-
ತ್ಸರವ ಮಾಡಲು ಮನದೊಳು ತಾಳು || ೧ ||
ನಿನ್ನೊಳು ರಮಣನು ಅನ್ಯಾಯ ಮಾಡಲು ।
ಕನ್ನೆ ಕೋಪಿಸಬ್ಯಾಡ ನಡತೆಯೊಳು ||
ಇನ್ನಿಷ್ಟು ಬಾಗಿ ಪ್ರಸನ್ನೀಕರಿಸು ಪತಿ-
ಯನ್ನೆ ಸೇವಕರೊಳು ದಯೆದೋರು || ೨ ||
ನಾನು ಸಾರುವುದೆಲ್ಲ ಲಕ್ಷ್ಯಬೊಳಿಡು ಭಾಗ್ಯ-
ವಾನಳೆಂಬುವ ಗರುವಿಕೆ ದೂಡು ||
ಈ ನಡತೆಯ ಯುವತಿಯರೆಲ್ಲ ಜನರೊಳ್ಕು ।
ಲೀನ ಸ್ತ್ರೀಯರೆಂದೆನಿಸುತಿಹರು || ೩ ||

ಹೇಗೆ? ಗೌತಮಮ್ಮಾ, ಇಷ್ಟೇಯೋ ಮತ್ತೇನಾದರು ಹೇಳತಕ್ಕದ್ದುಂಟೊ ?

**ಗೌತಮಮ್ಮ:**—ಹೆಣ್ಣುಮಕ್ಕಳಿಗೆ ಹೇಳತಕ್ಕದ್ದು ಇಷ್ಟೇ ಸರಿ. ಹೇಳಿದ್ದೆಲ್ಲ ಧ್ಯಾನದಲ್ಲಿರಬೇಕಮ್ಮಾ ಶಕುಂತಲಾ !

**ಕಾಶ್ಯಪ:**—ಹೇ ವತ್ಸೇ, ನನಗೂ ನಿನ್ನ ಸಖಿಯರಿಗೂ ಒಮ್ಮೆ ಆಲಿಂಗನವನ್ನು ನೀಡು.

**ಶಕುಂ:**—( ತಂದೆಯನ್ನು ಆಲಿಂಗಿಸಿ ) ತಾತಾ, ಪ್ರಿಯಂವದೆ ಮೊದಲಾದ ಸಖಿಯರು ಇಲ್ಲಿಂದಲೇ ತಿರುಗಿ ಹೋಗುವರೇ ?

**ಕಾಶ್ಯಪ:**—ವತ್ಸೆ, ಇವರ ಲಗ್ನವಾಗತಕ್ಕದ್ದದೆ. ಆದ್ದರಿಂದ ನಿನ್ನ ಕೂಡ ಬರಲಾರರು. ಗೌತಮಮ್ಮನು ಮಾತ್ರ ನಿನ್ನ ಸಂಗಡ ಬರುತ್ತಾಳೆ.

---

शुश्रूषस्व गुरून्कुरु प्रियसखीवृत्तिं सपत्नीजने
भर्तृर्विप्रकृतापि येषणतया मा स्म प्रतीपं गमः ।
भूयिष्ठं भव दक्षिणा परिजने भाग्येष्वनुत्सोकिनी
यान्त्येवं गृहिणीपदं युवतयो वामाः कुलस्याधमः ॥ १७ ॥

**ಶಕುಂ:**—( ತಂದೆಯನ್ನು ಆಲಿಂಗಿಸಿ ) ತಾತಾ, ಮಲಯಗಿರಿಯಿಂದ ಚಂದನಲತೆಯು ಮೂಲ ಸಹಿತ ಕಿತ್ತು ಬೀಳುವಂತೆ ನಾನು ನಿನ್ನಂಕದಿಂದಿಳಿದು ದಿಗಂತರಕ್ಕೆ ಹೋದಮೇಲೆ ನನ್ನ ಪ್ರಾಣವು ಹ್ಯಾಗೆ ಉಳಿದೀತು ?

**ಕಾಶ್ಯಪ:**—ವತ್ಸೆ, ಈ ಮಾತು ಮನಸಿನಲ್ಲಿ ತಂದು ಯಾತಕ್ಕೆ ಭಯ ಪಡುತ್ತಿ? ನಿನ್ನ ಪತಿಯ ಮಂದಿರಕ್ಕೆ ಹೋದ ಮೇಲೆ ನಮ್ಮ ಸ್ಮರಣೆ ಮಾಡಲಿಕ್ಕೆ ಸಹ ನಿನಗೆ ಅವಕಾಶ ದೊರೆಯಲಿಕ್ಕಿಲ್ಲ ಬಲ್ಲೆಯಾ!

( ಪದ )

ದಾಟಿಃ—" ಆಹುದಾದರಹುದೆನ್ನಿ ಅಲ್ಲಾದರಲ್ಲೆನ್ನಿ " ಎಂಬ ಪುರಂದರದಾಸರ ಪದದಂತೆ.

ಅಗಲಿ ಪೋಗುವುದಕ್ಕೆ ದುಃಖವ್ಯಾಕೆ ||
ಮಗುವೆ ನಿನ್ನಯ ಪತಿಯು ಜಗದೊಡೆಯನಮ್ಮಾ ||ಪಲ್ಲ||
ಅತಿಕುಲೀನನೆ ನಿನ್ನ । ಪತಿಯುವನ ಮನೆಯೊಳಗೆ
ಸತಿಯಾಗಿ ಬಾಳ್ವುದೆ ಶ್ಲಾಘ್ಯ ನಿನಗೆ ||
ಮತಿಯೆಲ್ಲ ಮುಳುಗಿ ಸಂ । ತತ ನಿನ್ನ ಮನೆಯ ಬಹು ।
ಕೃತಿಗಳೊಳು ತವರ್ಮನೆಯು । ಸ್ಮೃತಿಯಾಗದಮ್ಮಾ ||೧||
ಇನನು ಪ್ರಾಚಿಯೊಳುದಯವನೆ ಗೈದ ತೆರನಂತೆ ।
ತನಯ ನಿನ್ನೊಳು ಪುಟ್ಟಲಂಕದೊಳು ||
ಅನುದಿನದೊಳಿಟ್ಟು ಮೋಹದಿ ಮುದ್ದಿಸಲು ಬಂಧು- ।
ಜನವಿರಹದಿಂದಾದ ಕಷ್ಟವೆಲ್ಲಿಹುದು || ೨ ||
ಪರಿಪರಿಯ ವಿಭವದೊಳು । ಪತಿಯೊಡನೆ ಹರುಷದೊಳು ।
ಸರಸ ಸವಿಮಾತುಗಳ ಸೌಖ್ಯ ಬಹಳು ||
ಮರೆಸಿಬಿಡುವದು ಎಮ್ಮನರಗಳಿಗೆಯೊಳು ನೀ ತ-
ವರ ಮನೆಯ ನೆನಿಸುವದು ಬಹುದಿನದ ಕನಸು || ೩ ||

---

अभिजनवतो भर्तुः श्लाघ्ये स्थिता गृहिणीपदे
विभवगुरुभिः कृत्यैस्तस्य प्रतीक्षणमाकुला ।
तनयमचिरात्प्राचीवार्कं प्रसूय च पावनं
मम विरहजां न त्वं वत्से शुचं गणयिष्यसि ॥ १८ ॥

**ಶಕುಂ:**—( ತಂದೆಯ ಚರಣದಲ್ಲಿ ಮಸ್ತಕವನ್ನಿಟ್ಟು ) ತಾತಾ, ನಾನು ಹೋಗಿ ಬರಲಿಯಾ?

ಕಾಶ್ಯಪ—ನಿನ್ನ ಮನೋರಥ ಪೂರ್ಣವಾಗಲಿ.

ಶಕುಂ—( ಸಖಿಯರಿಗೆ ) ಎಲೆ ಗೆಳತಿಯರಾ, ನೀವಿಬ್ಬರು ಏಕಕಾಲಕ್ಕೆ ನನಗೆ ಆಲಿಂಗನವನ್ನು ನೀಡಿರಿ. ಇನ್ನುಮೇಲೆ ನಿಮ್ಮ ದರ್ಶನವು ನನಗೆ ದುರ್ಲಭವಾಗುವದು. ಈವೊತ್ತಿನವರೆಗೂ ಸ್ನೇಹಭಾವದಿಂದ ನಿಮ್ಮನ್ನು ಕಷ್ಟಪಡಿಸಿದ್ದನ್ನು ಕ್ಷಮಿಸಿ ನನ್ನಲ್ಲಿ ಲೋಭವಿಡಬೇಕು ನಾನು ದೂರ ಹೋದೆನೆಂದು ಬಿಡಬಾರದು ಬಲ್ಲಿರಾ!

ಸಖಿಯರು:—( ಶಕುಂತಲೆಯನ್ನು ಆಲಿಂಗಿಸಿ ) ಜೀವದ ಗೆಳತಿಯೆ, ನೀನು ಹೋದಮೇಲೆ ಈ ಆಶ್ರಮದಲ್ಲಿ ಒಂದೊಂದು ದಿವಸವು ಒಂದೊಂದು ಯುಗದ ಹಾಗೆ ತೋರೀತು ಬಲ್ಲೆಯಾ; ನಿನ್ನ ಸ್ಮರಣೆಯಾಗದೆ ಒಂದು ಕ್ಷಣ ಸಹ ಹೋಗಲಿಕ್ಕಿಲ್ಲ. ಸಖಿಯೆ ಇನ್ನೊಂದು ಮಾತು ನಾವು ಹೇಳುತ್ತೇವೆ ಕೇಳು. ನೀನು ರಾಜಗ್ರುಹದಲ್ಲಿ ಹೋದಮೇಲೆ ಆತನಿಗೆ ಒಂದುವೇಳೆ ವಿಸ್ಮೃತಿಯಾಗಿ ನಿನ್ನ ಗುರುತು ಹಿಡಿಯದಿದ್ದರೆ ಆತನು ಕೊಟ್ಟ ಮುದ್ರಿಕೆಯನ್ನು ತೋರಿಸು ಬಲ್ಲೆಯಾ.

**ಶಕುಃ**—ಅಪ್ಪಯ್ಯಾ! ಈ ಮಾತು ಕೇಳಿಯೇ ನನ್ನ ಮೈಯಲ್ಲಿ ನಡುಗು ಹುಟ್ಟುತ್ತಿದೆ. ಹೀಗಾದೀತೇನೆ?

**ಸಖಿಯರು**—ಹಾಗಲ್ಲವೆ, ಅತಿ ಸ್ನೇಹದಿಂದ ಕೆಟ್ಟ ಕಲ್ಪನೆಗಳು ಸಹ ಮನಸ್ಸಿನಲ್ಲಿ ಬರುತ್ತವೆ.

**ಶಾರ್ಙ್ಗರವ**—( ತನ್ನೊಳಗೆ ) ಎಷ್ಟು ಹೊತ್ತು ಹರಟೆ ಹಚ್ಚಿದ್ದಾರೋ? ( ಪ್ರಕಾಶ ) ಹೊತ್ತೇರಿತು. ಬೇಗ ಮುಗಿಸಿರೆಮ್ಮಾ ಇನ್ನು.

**ಶಕುಂ**—( ಆಶ್ರಮದಕಡಿಗೆ ನೋಡಿ ) ತಾತಾ ಪುನಃ ನಾನು ಈ ತಪೋವನವನ್ನು ಎಂದಿಗೆ ಕಾಣಬೇಕು?

**ಕಾಶ್ಯಪ**—ಹೇಳುತ್ತೇನೆ ಕೇಳು.

ವೃ|| ಚತುರ ಸಮುದ್ರ ಸೀಮೆ ಪೃಥಿವೆಮ್ಮನ ಕೂಡೆ ಸಪತ್ನಿಯಾಗಿ ದಂ-
ಪತಿಗಳು ದೀರ್ಘಕಾಲ ಪರಿಯಂತರ ಸೌಖ್ಯವನುಂಡು ಪುತ್ರನ-
ಪ್ರತಿಮ ಪರಾಕ್ರಮಂ ತಳೆವ ನಾತನಿಗೊಪ್ಪಿಸಿ ರಾಜ್ಯಭಾರಮಂ
ಪತಿಯನೆ ಕೂಡಿಕೊಂಡು ತಿರುಗೀ ಸ್ಥಳವಾಸಕೆ ಸಾಗಿಬಾಹುವೇ||

ಗೌತಮಮ್ಮ—ಶಕುಂತಲೆ, ಬಿಸಿಲು ಬಹಳಾಯಿತು. ಇನ್ನು ಮೇಲೆ ನಿನ್ನ ತಾತನನ್ನು ತಿರುಗಿಸು. ನಿವೇ ಹಿಂತಿರುಗಬೇಕು. ಎಷ್ಟು ಹೊತ್ತಾದರೂ ಇವಳು ಹೀಗೆಯೇ ಮಾತಾಡುತ್ತ ನಿಂತಾಳು.

ಕಾಶ್ಯಪ—ವತ್ಸೆ, ನಮ್ಮ ತಪೋನುಷ್ಠಾನದ ಹೊತ್ತು ಮೀರುತ್ತದೆ.

ಶಕುಂ—( ಪಿತನನ್ನು ಮತ್ತೆ ಆಲಿಂಗಿಸಿ ) ತಾತಾ ತಪಶ್ಚರ್ಯ ಕಷ್ಟ ದಿಂದಲೇ ಶರೀರವು ಕ್ಷೀಣವಾಗಿದೆ. ಇನ್ನು ನನ್ನ ಚಿಂತೆಯಿಂದ ಮತ್ತೂ ಜೀವಕ್ಕೆ ಕಷ್ಟಪಡಿಸಬಾರದು ಕಂಡಿರಾ.

ಕಾಶ್ಯಪ—( ನಿಟ್ಟುಸಿರು ಬಿಟ್ಟು ) ವತ್ಸೆ, ನನ್ನ ಕಷ್ಟವು ಹೇಗೆ ಶಮನ ವಾದೀತು !

ಸುತ್ತಲು ಮಾಶ್ರಮದೊಳ್ನೀಂ !
ಬಿತ್ತಿ ಬೆಳಸಿರಾ ನೀವಾರ ಧಾನ್ಯಮಂ ನೋ ||
ಡುತ್ತಲಕಟ ಹೃದಯಂ ಬಿ-
ಚ್ಚುತ್ತಿಹುದೇಕೇಳ್ ಪೊಟ್ಟೆಯ ಕರುಳೇ ತರಳೇ ||

ಹೇ ವತ್ಸೇ, ಹೋಗಿ ಬಾ ಇನ್ನು; ನಿನ್ನ ಮಾರ್ಗವು ಕಲ್ಯಾಣ ಪ್ರದ ವಾಗಲಿ.

( ಶಕುಂತಲೆಯೂ ಸಂಗಡಹೋಗತಕ್ಕವರೂ ಹೋಗುತ್ತಾರೆ. )

ಸಖಿಯರುಃ—( ಶಕುಂತಲೆಯನ್ನು ನೋಡುತ್ತ ) ಶಕುಂತಲೆ ನಮ್ಮನ್ನು ಬಿಟ್ಟು ನಡೆದಳು. ಓಹೋ ಮರೆಯಾದಳು! ಕಾಣಿಸದಾದಳು!

ಕಾಶ್ಯಪ:—( ನಿಟ್ಟುಸುರು ಬಿಟ್ಟು ) ಅನಸೂಯೆ, ನಿಮ್ಮ ಸಖಿಯು ಹೋದಳಷ್ಟೇ. ಒಳ್ಳೇದು, ಶೋಕ ಮಾಡಲಿಕ್ಕೆ ಕಾರಣವಿಲ್ಲ. ನಡೆಯಿರಿ ಆಶ್ರಮಕ್ಕೆ ಹೋಗೋಣ.

**ಸಖಿಯರುಃ**— ತಾತಾ, ಶಕುಂತಲೆಯು ಹೋದುದರಿಂದ ಆಶ್ರಮವು ಭಣಭಣ ಸುರಿಯುತ್ತದೆ. ಅಲ್ಲಿ ಹ್ಯಾಗೆ ಹೋಗಬೇಕು ಇನ್ನು ?

**ಕಾಶ್ಯಪ:** —ತಂಗಿಯರಾ, ಅತಿ ಸ್ನೇಹದಿಂದ ಹೀಗೆ ಕಾಣಿಸುತ್ತದೆ. ( ಸ್ವಲ್ಪ ಹೊತ್ತು ವಿಚಾರಮಾಡಿ ) ಅನಸೂಯೆ, ಶಕುಂತಲೆಯು ಹೋದದ್ದರಿಂದ ದುಃಖವಾದದ್ದಂತೂ ಸರಿಯೆ. ಆದರೂ ಅವಳನ್ನು ಪತಿಯ ಬಳಿಗೆ ಕಳುಹಿದ್ದರಿಂದ ನಾನು ನಿಶ್ಚಿಂತನಾದೆ ಕೇಳು.

**ಕಂದ||** ಕಿಣ್ಣಾಗಿಹ ತಲೆ ಹೊರೆಯಿದು
ಹಣ್ಣಾಗಿಹ ಬಾಳೆಗೊನೆ ಗಿಡವ ಬಾಗಿಸುವಾ ||
ಅನ್ಯರ ಧನವಿದು ಮನೆಯೊಳ್ |
ಹೆಣ್ಣಿರಬಾರದು ಬಹುದಿವಸ ತವರಮನೆಯೊಳ್ ||

( ನಿಟ್ಟುಸಿರು ಬಿಟ್ಟು ) ನಡೆಯಿರಿನ್ನು ಆಶ್ರಮಕ್ಕೆ ಹೋಗೋಣ.

( ಎಲ್ಲರೂ ಹೋಗುತ್ತಾರೆ )

**ನಾಲ್ಕನೆಯ ಅಂಕವು ಮುಗಿದುದು.**



## ೫ ನೆಯ ಅಂಕವು.

ಕಂಚುಕಿಯು ಬರುತ್ತಾನೆ.

**ಕಂಚುಕಿ**—ಅಯ್ಯೋ, ಏನು ನನ್ನ ಅವಸ್ಥೆ ಆಯಿತಪ್ಪಾ ! ಅತಿವೃದ್ಧನಾಗಿ ಹೋದೆನಲ್ಲ ನಾನು !

ಚಂಪಕವೃತ್ತ|| **ಪೊಡವಿಪರಲ್ಲಿ ಯಾಳುಗಳು ಕೈಯೊಳು ಮಾನದ ಚಿಹ್ನವೆಂದು ಪೊಂ|**
**ಬಡಗೆಯನಂದದಿಂದ ಪಿಡಿದರ್ಮುದಿವಂದುದು ರಾಜಸೇವೆಯೋಳ್** ||
**ನಡುನಡುಗುತ್ತಲೆನ್ನವಯವಂಗಳು ತಾಳವು ತಮ್ಮ ಧಾರಣೆ-**
**ಯ್ನೊಡೆಯನ ಪುಣ್ಯದಿಂದೆನಗಿದಾದುದು ಕೋಲಿ ನೊಲೂರ ಲೀಗಲು** || ೧ ||

ಈಗಲೇ ಹೋಗಿ ಈ ವರ್ತಮಾನವನ್ನು ಮಹಾರಾಯನಿಗೆ ಶ್ರುತಪಡಿಸುವೆನು. (ಮುಂದೆ ಹೋಗಿ) ನಾನು ಯಾವ ವರ್ತಮಾನವನ್ನು ಹೇಳತಕ್ಕದ್ದು ? ಇಷ್ಟರಲ್ಲಿಯೆ ಮರೆತು ಬಿಟ್ಟೆನು ! (ವಿಚಾರಿಸಿ) ಹಾ, ಹಾ ! ಆಹುದಹುದು ನೆನಪಾಯಿತು. ಕಣ್ವಋಷಿಗಳ ಬಳಿಯಿಂದ ಶಿಷ್ಯರು ಬಂದಿದ್ದಾರೆಂಬುವದು. ಅಯ್ಯೋ, ವೃದ್ಧಾಪ್ಯಕಾಲದಲ್ಲಿ ಮನುಷ್ಯನ ಅವಸ್ಥೆ ಏನಾಗಿ ಹೋಗುತ್ತದಯ್ಯಾ ! ಇದೇ ನಾನು ಕಣ್ವಶಿಷ್ಯರು ಬಂದಿದ್ದಾರೆಂಬ ವರ್ತಮಾನವನ್ನು ಹೇಳುವದಕ್ಕೆ ಬಂದೆ, ಇಷ್ಟರಲ್ಲಿಯೇ ದಾರಿಯಲ್ಲಿ ಮರೆತು ಬಿಟ್ಟೆ. ಮತ್ತೆ ಈಗ ನೆನಪುಮಾಡಿಕೊಂಡೆ. ಎಣ್ಣೆ ತೀರಿದ ದೀಪ ಹ್ಯಾಗೋ ಹಾಗೆ ವೃದ್ಧ ಮನುಷ್ಯನ ಚಿತ್ತವಾಗಿರುತ್ತದೆ. (ಅತ್ತಿತ್ತ ತಿರುಗಾಡುತ್ತ) ಮಹಾದೊರೆಗಳವರು ಇದೇ ಧರ್ಮಾಸನದಿಂದ ಎದ್ದಿದ್ದಾರೆ. ನಾನು ಈಗಲೆ ಹೋಗಿ ಈ ವರ್ತಮಾನವನ್ನು ಹೇಳಿ ಶ್ರಮಪಡಿಸುವದು ಯೋಗ್ಯವಲ್ಲ. ಆದರೂ, ನ್ಯಾಯದ ಕೆಲಸದಲ್ಲಿ ಆಲಸ್ಯ ಉಪಯೋಗದ್ದಲ್ಲ. ಪ್ರಜರುಗಳ ಸಂರಕ್ಷಣೆ ಮಾಡುವದೇ ಅರಸನ ಕಾರ್ಯವಾಗಿರುತ್ತದೆ. ಆತನಿಗೆ ವಿಶ್ರಾಂತಿಯೆಲ್ಲುಂಟು ?

ಚಂ. ವೃ. ರವಿರಥಕೊಮ್ಮೆ ಜೋಡಿಸಿದವಶ್ವಗಳಿನ್ನುವರಿಂಗೆ ನಿಲ್ಲವೀ
ಪವನನು ಗಂಧಮುಂ ವಹಿಸಿಕೊಂಡಿರುಳೊಳ್ವಗಲೋಳೀಳ್ತು
ಳಲ್ದಿಹಂ
ಭುವನದ ಭಾರಮುಂ ಪೆಡೆಯೊಳಿಟ್ಟಿಹ ಸಂತತ ಶೇಷ
ರಾಜನಿಂ |
ನ್ನಿವರ ತೆರಂ ನೃಪಂಗೆ ಪ್ರಜರಂ ಪೊರೆವಂಗಿನಿತಿಲ್ಲ
ವಿಶ್ರಮಂ || ೧ ||

ಆದರೆ ನನಗೆ ನೇಮಿಸಿದಂಥ ಕಾರ್ಯವನ್ನು ನಾನು ಮಾಡತಕ್ಕದ್ದೇ ಸರಿ. ( ಮುಂದಕ್ಕೆ ಬಂದು ) ಮಹಾದೊರೆಗಳವರು ಇಲ್ಲಿ ಕುಳಿತುಕೊಂಡಿದ್ದಾರೆ.

ಚಂ. ವೃ. ವನದೊಳು ತನ್ನ ಗೂಡ ಬಳಗಂಗಳ ನೆಲ್ಲವ ಕೊಂಡು
ಮೆಯ್ಯು ಬಲ್ಲ |
ದಣಿದು ಗಜಂ ರವಿಪ್ರಖರ ತಾಪಕೆ ಸೀತ ಗುಹಕ್ಕೆ
ಪೋಪಪೊಲ್ |
ಅನುದಿನ ತನ್ನ ಮಕ್ಕಳೊಳು ಮುಂದಿಯು ನ್ಯಾಯುವ
ತೀರಗೈದು ತಾಂ |
ಮನಸಿಗೆ ವಿಶ್ರಮಂ ಕೊಡುವ ಕಾರ್ಯಕೆ ಬಂದಿಹನಿಲ್ಲಿ
ಭೂವರಂ ||೧||

( ಇಷ್ಟರಲ್ಲಿ ಅರಸನೂ ವಿದೂಷಕನೂ ಸೇವಕಜನರೂ ಬರುತ್ತಾರೆ. )

ಅರಸು—( ರಾಜಾಧಿಕಾರ ಕಷ್ಟದಿಂದ ) ತಾವು ಬಯಸಿದ ಪದಾರ್ಥವು ಪ್ರಾಪ್ತಿಯಾದ ಮೇಲೆ ಸರ್ವ ಪ್ರಾಣಿಮಾತ್ರರಿಗೆ ಸೌಖ್ಯವುಂಟಾಗುತ್ತದೆ. ಅದರೆ ಅರಸುಗಳಿಗೆ ಇಚ್ಛಿತಾರ್ಥವು ಸಿದ್ಧಿಯಾದ ಬಳಿಕ ವಿಶೇಷವಾಗಿ ಚಿಂತೆ ಬಾಧೆಪಡಿಸುತ್ತದೆ.

ಚಂ. ವೃ. ಮನದೊಳಗಿಪ್ಪ ದುತ್ಸುಕತೆ ಪೋಪುದು ಮುಂದಧಿಕಾರ
ವಂದಮೋ |
ಅನುದಿನರೊಳರಸ್ನು ಪರಿಪಾಲನೆಗೈಯುವ ಚಿಂತೆಯೋ
ಳ್ಪಿನ ||

ಕ್ಷನೊಯುವದೇ ಹೃದಂ ಬಿಡದು ರಾಜ್ಯದ ಭಾರವಿದೆಲ್ಲ
ಹಸ್ತದಾ।
ಗಿನ ಕೊಡೆಯಂತೆ ದುಃಖಸುಖಗಳ್ಸರಿ ಯಾಗಿಯೆ ನೀಡು
ತಿರ್ಪುದು ||

( ತೆರೆಯಲ್ಲಿ ವೈತಾಳಿಕರು ಹೊಗಳುತ್ತಾರೆ. )

ಒಬ್ಬನು:—

ಚಂ. ವೃ. ಪೃಥಿವಿಯ ಗಂಡ ನೀನಹುದಲಾ ಕ್ಷಮೆ ನಿನ್ನೊಳು ಪೂರ್ಣ
ವಿಪ್ಪುದೈ ।
ಪ್ರತಿದಿನದಲ್ಲಿ ನೀಂ ನಿರಭಿಲಾಷಿಯೆ ನಿನ್ನ ಸುಖಕ್ಕೆ
ಮಂದಿಯಾ ||
ಹಿತಕನುಕೂಲನಾಗಿ ಶ್ರಮವಟ್ಟಪೆ ತಾಪವ ತಾಳ್ದು ತಾ
ನಿಜಾ ।
ಶ್ರಿತ ಜನರಿಂಗೆ ತಂಪು ನೆಳಲಂ ಮಿಗೆ ನೀಡುವ ವೃಕ್ಷದಂತೆ
ವೊಲ್ ||

ಎರಡನೆಯ ಸ್ತುತಿಪಾಠಕನು:—

ಚಂ. ವೃ. ಕೆಡಕುತನಕ್ಕೆ ಪೋಪ ಜನರನ್ನುರೆ ಶಿಕ್ಷಿಸಿ ಸಾಧು
ಮಾರ್ಗದೋ-
ಳಿಡಿಸುವೆ ಕಜ್ಜಮಂ ಮುರಿದು ಶಾಂತಿಯದೋರುವೆ ನೀ
ಪ್ರಜಂಗಳೊಳ್
ಬಡವರು ಭಾಗ್ಯವಂತರು ಸಮಾನರು ನಿನ್ನಯ ರಾಜ್ಯ
ದೊಳ್ಸುಖಂ
ಬಡುತಿಹರೆಲ್ಲರಿಂಗೆ ನಿಜಮಿತ್ರ ನಿಜಾಪ್ತನು ನೀನೆ ಭೂವರಾ||

ಅರಸು:—ಜನರ ಕಾರ್ಯಗಳನ್ನು ತೀರಗೈದು ದಣಿದ ನನ್ನ ಮನಸು ಈ ಸ್ತುತಿಪಾಠಕರ ನುಡಿಗಳನ್ನು ಕೇಳಿ ಪುನಃ ಉಲ್ಲಾಸಪೂರಿತವಾಯಿತು. ( ಕುಳಿತುಕೊಳ್ಳುತ್ತಾರೆ. )

( ಇಷ್ಟರಲ್ಲಿ ಹಿಂದೆ ವೀಣಾನಾದವಾಗುತ್ತದೆ. )

**ವಿದೂಷಕ:**—( ಕಿವಿಗೊಟ್ಟು ಕೇಳಿ ) ನನ್ನ ಒಡ್ಯಾ, ಒಂದ ಜರ ಕೇಳವ! ಸಂಗೀತ ಸಾಲ್ಯಾಗ ಯಾರೊ ತಾಳದ ಮ್ಯಾಗ ಒಳೇ ಸವಿಜಾತಿ ಹಾಡತಾರು. ಹಂಸಪದಿಕಾ ಎಂಬ ಪಾತರದಾಕಿ ಕುಯಿಗೂಡತಾಳ ಕಾಣತತಿ.

**ಅರಸು:**—ಹಾಗಾದರೆ ಸ್ವಲ್ಪ ತಾಳು ಕೇಳುವಾ!

**ಕಂಚುಕಿ:**—(ತನ್ನೊಳಗೆ) ಮಹಾದೊರೆಗಳವರ ಚಿತ್ತವು ಎರಡನೆಯ ಕಡೆಗೆ ಹೋಗಿದೆ. ಋಷಿಗಳು ಬಂದ ವರ್ತಮಾನವನ್ನು ಸ್ವಲ್ಪ ಹೊತ್ತು ನಿಂತು ಆಮೇಲೆ ಹೇಳುವ.

( ತೆರೆಯಲ್ಲಿ ಗಾಯನವಾರಂಭವಾಗುವದು. )

( ಪದ )

ದಾಟೀ—ಬತಾದೆಸನು ಪಂಜಾಬ ಕಿತನಾ ದೂರ್ ‖ ಪಲ್ಲ ‖ ಪಂಜಾಬ ಕಿಜತಿಯಾ । ಬಡೆಬಡೆ ಅಂಖಿಯಾ । ಮುಖಪರ ಬರ ಸತ ನೂರ್ ‖ ೧ ‖

**ಮರೆವರೇನೊ ನೀ ಚೂತಮಂಜರಿಯಾ ‖ ಪಲ್ಲ ‖**
**ಕಮಲವಸತಿಯಿಂ । ಭ್ರಮರ ನೀ ಮದವೇ- ।**
**ರಿ ಮನೋಹರ ತರಿಯಾ ‖ ೧ ‖**
**ನವಮಧುವನೆ ಕಂ- । ಡವಿನಯುತರ ನೀ**
**ಸವಿದ ಸುದ್ದಿಯನರಿಯಾ ‖ ೨ ‖**
**ಕಾಡೊಳು ಕ್ಷುಧೆಬಲ್ । ಪೀಡಿಸಲಮೃತವ**
**ನೀಡಿದವಳ ನೆನೆಯಾ ‖ ೩ ‖**

**ಅರಸು:**—ಈ ಗಾಯನದಲ್ಲಿ ಪ್ರೇಮರಸವು ತುಂಬಿ ಸೂಸುತ್ತದೆ.

**ವಿದೂಷಕ:**—ಏನಪಾ, ಈ ಹಾಡಿನ ಅರತೇನಾ?

**ಅರಸು:**— ( ನಕ್ಕು ) ಒಮ್ಮೆ ಸ್ನೇಹಗೂಡಿದವಳನ್ನು ತ್ಯಾಗ ಮಾಡಿದಂಥ ಪುರುಷನಿಗೆ ಬೋಧಪರವಾದ ಅರ್ಥವಿದೆ. ನನ್ನ ರಾಣಿಯಾದ ವಸುವತಿಗೋಸ್ಕರವಾಗಿ ನನ್ನ ನಿರ್ಭರ್ತ್ಸನೆ ನಡೆದಿದೆ; ಇದರಲ್ಲಿ ಸಂದೇಹವಿಲ್ಲ. ಹನುಮನಾಯಕಾ, ನೀನು ಹಂಸಪದಿಕೆಯ ಬಳಿಗೆ ಹೋಗಿ “ ನನ್ನ ಉಪಹಾಸವನ್ನು ಚೆನ್ನಾಗಿ ಮಾಡಿದೆ. ಇನ್ನುಮೇಲೆ ದಯಮಾಡಿ ಸಾಕುಮಾಡು” ಎಂದು ಹೇಳಿ ಬಾ ಹೋಗು.

**ವಿದೂಷಕ:**—ಒಳ್ಳೇದಪಾ; ನೀ ಇಲ್ಲೇ ಕುಂತಕ್ಯಾಸಿ ನನಗ ಇಂತಾ ಕೆಲಸಾ ಹೇಳತ ಬಾ! ಒಳೇ ಶಾಣ್ಯಾ! ನಾ ಅಲ್ಲಿ ಹೋದಗಳಿಗ್ಗೆ ದುಪು ದುಪೂ ಹಾಕ್ಕೊಂಡ ಬಡದರ ನೀ ಬಿಡಸಾಕ ಬರತೀಯಾ?

**ಅರಸುಃ**—ನೀನು ಹೋಗಿ ಸಾತ್ವಿಕ ರೀತಿಯಿಂದ ಹೇಳು. ಅಂದರೆ ನಿನ್ನನ್ನು ಯಾರೂ ಹೊಡೆಯುವದಿಲ್ಲ.

**ವಿದೂಷಕಃ**—ಹಂಗರ ಹೋಗಬೇಕೇನ? ಪಕ್ಕನ ಬಡದರ ಅಲ್ಲಿಂದ ಒದರತೇನ್ನಾ! ನನ್ನ ದನಿ ಕೇಳಿದ ಗಳಿಗ್ಗೆ ನೀ ಓಡಿ ಬಾ. (ಹೋಗುತ್ತಾನೆ.)

**ಅರಸುಃ**—(ತನ್ನೊಳಗೆ) ನಾನು ಒಂದು ಸಾರೆ ಸ್ನೇಹ ಮಾಡಿ ತ್ಯಾಗಮಾಡಿದ್ದು ನನ್ನ ಸ್ಮರಣೆಯಲ್ಲಿ ಎಲ್ಲಿಯೂ ಇಲ್ಲ. ಆದರೂ ಈ ಹಾಡನು ಕೇಳಿ ನನ್ನ ಮನಸಿಗೆ ಏನುಕಾರಣ ಅಸಮಾಧಾನವಾಗಿದ್ದೀತು?

(ಪದ)

ದಾಟಿ:—ಫಲವ್ಯಾತಕೊ ನಲ್ಲಾ | ನಿನ್ನ ನಂಬಿದ | ಚದುರೆಯೊಳಾ ಥರವಲ್ಲಾ || ಮಲಯಗಿರಿಭವ ಪವನನಟ್ಟುಳಿ | ಗಳುಕಿ ಕಡು ರೋಷದಲಿ ವಾನರ | ಕುಲವ ಪಳಿದೊಂದ ಮಲರಾಗವ | ತಿಳಿದು ಸ್ವರಗೈಯ್ಯುವ ಪ್ರವೀಣೆಯೊಳ್ || ಎಂಬ ಪದವಂತೆ.

**ಎಂಥ ಸೋಜಿಗವಯ್ಯ || ಎನ್ನಯ ಮನಸು ||**
**ಇಂತು ನೋಯುವದ್ಯಾತಕೆ || ಪಲ್ಲ ||**
**ಪಿಂತೆ ಸ್ನೇಹದಳೊಮ್ಮೆ ಕೂಡಿದ ಕಾಂತೆಯುರನಗಲಿಲ್ಲವನ್ಯರಿ||**
**ಗಿಂಥ ನುಡಿಗಳನಾಡಿದೊಡೆ ಎನ್ನಂತರಂಗದಿ ಕರಳುಗರ-**
**ಗುವವೆಂಥಾ || ಅನುಪಲ್ಲ ||**
**ಚಲುವ ಶಬ್ದವ ಕೇಳಲು || ಅತಿಶಯಮೋಹ || ಗೊಳಿಪ**
**ವಸ್ತುವ ನೋಡಲು ||**
**ಬಳಿಕ ಸುಖವೃತ್ತಿಯನು ಜರೆಯುತ ತಳೆದು ಪರಿಯುತ್ಸುಕತೆ**
**ಯುನು ಮನ ||**
**ಸ್ಥಳವಳಿಸಿ ಸ್ಥಿರಗೊಂಡು ನಿಲ್ಲದೆ ತೊಳಲುತಲಿ ಚಿಂತೆಯೊಳು**
**ಮುಳುಗುವದೆಂಥ.... || ೧ ||**
**ಹಿಂದೆ ಮಾಡಿದ ಗೋಷ್ಠಿಯು || ಮರೆತು ಪೋಗ-||**
**ಲೆಂದೊ ಕಂಡಿಹ ಸ್ವಪ್ನವು ||**

**ಎಂದು ಮನಸಿನೊಳೊಂದು ಪರಿಯದ | ರಂದದೊಲು**
**ಮಾತುಗಳು ಕಣ್ಣಿನ |**
**ಮುಂದೆ ಬೀಳಲು ಮೃಗಜಲದವೊಲು | ಮಂದಸ್ಮೃತಿಯು**
**ತರಂಗದೋರುವದೆಂಥ........ || ೨ ||**
**ಅಲ್ಲ ಈಗಿನ ಮಾತಿದು || ಹಿಂದಿನ ಜನ್ಮ ||**
**ದಲ್ಲಿ ಮಾಡಿದ ಸ್ನೇಹವು ||**
**ಎಲ್ಲ ಮರೆದಿರುವದು ಸಹಜವೀವ್ಯಾಳ್ಯದೊಳು ಸ್ಮರನಂಗ**
**ದೊಲು ಸ್ಮೃತಿ ||**
**ಯಲ್ಲಿ ಬಂದಿರೆ ಮನಸು ಹಲಬುವದಲ್ಲದಲೆ ಬ್ಯಾರಿಲ್ಲ ತಿಳಿ**
**ಯದು || ಎಂಥ ........ || ೩ || ***

**ಕಂಚುಕಿ:**—ವಿಜಯೋಽಸ್ತು, ಜೀಯಾ; ಹಿಮವತ್ಪರ್ವತದ ಸಮೀಪ ದಲ್ಲಿರುವ ಅರಣ್ಯದಲ್ಲಿರುವಂಥ ತಪಸ್ವೀ ಜನರು ಒಬ್ಬ ತರುಣ ಸ್ತ್ರೀಯಿಂದ ಸಹಿತರಾಗಿ ಕಣ್ವಮಹಾಮುನಿಗಳವರ ನಿರೋಪವನ್ನು ತೆಗೆದುಕೊಂಡು ಬಂದಿದ್ದಾರೆ. ವಿದಿತವಾಗಿ ಆಜ್ಞಾಪಿಸತಕ್ಕದ್ದು.

**ಅರಸು:**—ಕುಲಗುರುಗಳಾದ ಕಣ್ವ ಮಹಾಮುನಿಗಳವರ ಬಳಿಯಿಂದ ತಪಸ್ವಿಗಳು ಬಂದಿದ್ದಾರೆಯೊ?

**ಕಂಚುಕಿ:**—ಹೌದು ಜೀಯಾ!

**ಅರಸು:**—ಹಾಗಾದರೆ ಹೋಗಿ ಸೋಮರಾತ ಪುರೋಹಿತರಿಗೆ ಈ ವರ್ತಮಾನವನ್ನು ತಿಳುಹಿಸಿ, 'ಅವರನ್ನು ವಿಧಿಪೂರ್ವಕವಾಗಿ ಆದರಸತ್ಕಾರ ಗೊಳಿಸಿ' ಇತ್ತಕಡೆಗೆ ಕರೆದುಕೊಂಡು ಬರಬೇಕೆಂದು ಹೇಳು. ಇಷ್ಟರಲ್ಲಿ ನಾನು ತಪಸ್ವೀಜನರ ದರ್ಶನವನ್ನು ತೆಗೆದುಕೊಳ್ಳುವ ಸ್ಥಳಕ್ಕೆ ಹೋಗಿ ದಾರೀ ನೋಡುತ್ತಿರುತ್ತೇನೆ.

---

* रम्याणि वीक्ष्य मधुरांश्च निशम्य शब्दा-
न्पर्युत्सुकीभवति यत्सुखितोऽपि जन्तुः ।
तच्चेतसा स्मरति नूनमबोधपूर्वं
भावस्थिराणि जननान्तरसौहृदानि ॥ २ ॥

**ಕಂಚುಕಿ:**—ಮಹದಾಜ್ಞೆ. ( ಹೋಗುತ್ತಾನೆ. )

**ಅರಸು:**—( ಎದ್ದು ) ಎಲೆ ವೇತ್ರವತಿಕೆ, ಹೋಮಶಾಲೆಗೆ ಹೋಗುವ ದಾರೀ ತೋರಿಸು.

**ವೇತ್ರವತಿಕೆ:**—ಹೀಗೆ ಬನ್ನಿ ಸ್ವಾಮಿೂ.

( ಅರಸು ಮುಂದೆ ನಡೆಯುತ್ತಾನೆ. )

**ವೇತ್ರವತಿಕೆ:**—ಸ್ವಾಮಿೂ, ಇದು ಹೋಮಶಾಲೆಯ ಮಂಟಪವು. ಸಾರಿಸಿ ರಂಗೋಲೆ ಹಾಕಿದ್ದಾರೆ. ಇಲ್ಲಿ ಹೋಮಧೇನು ಕಟ್ಟಿದೆ. ಮೇಲಕ್ಕೆ ಏರಬೇಕು.

**ಅರಸು:**—( ಮೇಲಕ್ಕೇರಿ ದಾಸಿಯ ಹೆಗಲ ಮೇಲೆ ಕೈಯಿಟ್ಟು ) ಎಲೆ ವೇತ್ರವತೀ, ಕಣ್ವಋಷಿಗಳ ಬಳಿಯಿಂದ ಏನುಕಾರಣ ತಪಸ್ವಿಗಳು ಬಂದಿರಬಹುದು?

ಮತ್ತೇಭವಿಕ್ರೀಡಿತ.

ವೃತ್ತ ॥ **ವನದೊಳ್ ದುಷ್ಟರು ವಿಘ್ನವಾದರೊ ತಪಶ್ಚರ್ಯಕ್ಕೆ ಕಾಂತಾರದೊಳ್ ।**
**ಮುನಿಗಳ್ ನೊಂದರೊ ಕಾಡಕ್ರೂರ ಮೃಗಗಳ್ಗಾಭೂರುಹಂಗಳ್ಗೆ ನಾ-**
**ನನಯುತ್ವಂ ತಳೆಯಲ್ ಫಲಂಬರವೊ ಮತ್ತೇನಾದುದೋ ರಾಷ್ಟ್ರದೊಳ್**
**ಮನಸುದ್ವಿಗ್ನತೆಯಿಂದೆ ಕಾಯ್ವುದು ಋಷಿಂಗಳ್ ಬಂದರೇಕಕ್ಕಟಾ ॥೧॥**

**ವೇತ್ರವತಿ**—ಮಹಾರಾಜರ ಭುಜಪರಾಕ್ರಮದಿಂದ ಆಶ್ರಮಪದವು ನಿಷ್ಕಂಟಕವಾಗಿರಲು ಹೀಗೆ ಆಗಲಾರದು. ದೊರೆಗಳವರ ಸತ್ಕೃತ್ಯದಿಂದ ಸಂತುಷ್ಟರಾಗಿ ದರ್ಶನಾರ್ಥಿಗಳಾಗಿ ಬಂದಿರಬಹುದು.

( ಕುಂಚುಕಿ, ಪುರೋಹಿತ, ಶಕುಂತಲೆ, ಗೌತಮಮ್ಮ, ತಪಸ್ವಿಗಳು ಬರುವರು. )

ಕಂಚುಕಿ
ಪುರೋಹಿತ } ಸ್ವಾಮಿನ್ ಹೀಗೆ ಬನ್ನಿ.

**ಶಾರ್ಙರವ:**—ಎಲೋ ಮಿತ್ರಾ ಶಾರದ್ವತಾ, ಈ ರಾಜನು ಮಹಾಭಾಗ್ಯಶಾಲಿಯಾದಂಥವನು ಬಲ್ಲೆಯಾ?

ವಿಭಾವರಿ ವೃ. ನಯುಜಲಂ ಪರಿವ ಪೇರ್ನದಿಯೆಂಬೊಲಿ |
ಲ್ಲಿಯ ಜನೌಘದ ಸುಸಂಗಮ ಮೊಪ್ಪೆ ಮೇಣ್ ||
ಜಯದ ಘೋಷದೆ ತರಂಗದ ನಾದಕೇಳ್ |
ದಯದ ಸಾಗರನಿಗಾಗರ ಮೀ ಪುರಂ ||

ಈ ನಗರದ ಸೌಂದರ್ಯವನ್ನು ನೋಡಿದೆಯಾ.

ದ್ರುತವಿಲಂಬಿತ ವೃತ್ತ ||

ಮನೆಗಳೇಂ ಮುಗಿಲಿಂದಿಳಿದಿರ್ಪವೊ |
ಜನರು ನಿರ್ಜರ ರಾಜನ ಮಕ್ಕಳೊ |
ಕನಕ ರತ್ನದರಣ್ಯವೊ ಪಟ್ಟಣವೊ ||
ಕನಡಿಯೋ ನೃಪವೀಥಿಯೋ ಮಿತ್ರ ಪೇಳ್ ||

ಇಷ್ಟು ದೊಡ್ಡ ರಾಜಮಾರ್ಗವಿದ್ದು ನಮಗೆ ಹೋಗಲಿಕ್ಕೆ ದಾರಿಯೇ ಇಲ್ಲವಲ್ಲಯ್ಯಾ! ಎಷ್ಟು ಜನಪಟ್ಟಣೆಯಿದು.

ವೃತ್ತ

ಮುತ್ತಿ ಮುತ್ತಿ ನಡೆವರ್ಜನರೋಣಿಯೊ |
ಳೆತ್ತಲೆತ್ತಳು ರಥಂಗಳು ಮಧ್ಯದೊಳ್ ||
ಹತ್ತಿಹತ್ತಿ ಬರುವಾನೆಯ ದಂಡದೊಳ್ ||
ಹತ್ತಿ ಹತ್ತಿ ಪೋಗುವತುರಂಗಂಗಳಂ ||

ಮಾಲತೀವೃತ್ತ

ಕರಿಗಳಿಂಗೆ ರಥಂ ರಥಗಳ್ಪರಲ್ |
ಹರಿಗಳಾ ಹರಿಯ್ಮೈತರೆ ಮುಂದಿ ಸ- |
ತ್ವರದಿ ಮುಂದಿಗೆ ಪೆಣ್ಗಳವಗ್ಗ್ಯತೀ |
ಶ್ವರರವರ್ಗೆ ಗಜಂ ಕೊಡಗುಂ ಪಥಂ ||

ಆದರೂ ಹೇ ಶಾರದ್ವತಾ ಕೇಳು.

ವೃತ್ತ

ಇಂತಿಲ್ಲೀಜನ ವಿಷಯೋಪಭೋಗದಾಶಾ
ಸಂತಾಪೋಷದಿ ಮುಳುಗಿರ್ಪುದನ್ನೆ ನೋಡಲ್ ||
ಕಾಂತಾರಸ್ಥ ನೆನಗಿದೆಲ್ಲ ಕಿಚ್ಚು ಹತ್ತಿ |
ರ್ದಂಥಾ ಮಂದಿರವೆನೆ ತೋರುತಿರ್ಪುದಯ್ಯಾ ||

**ಶಾರದ್ವತ**— ಹೇ ಮಿತ್ರಾ, ನೀನು ಹೊಸದಾಗಿಯೇ ನಗರದಲ್ಲಿ ಬಂದಿಹೆ. ಆದದರಿಂದ ನಿನಗೆ ಹೀಗೆ ತೋರುತ್ತದೆ. ನನಗೂ ಏನೋ ಒಂದು ಚಮತ್ಕಾರವಾಗಿ ಕಂಡುಬರುತ್ತದೆ.

ಕಂದ|| **ಮುಕ್ತನಮುಕ್ತರನೆ ಶುಚಿ-**
**ವ್ಯಕ್ತನಶುಚಿಯಂ ಪ್ರಬುದ್ಧನಾ ಸುಪ್ತರನ |**
**ಭ್ಯಕ್ತನ ಮಲಿನನ ವಿಷಯಾ-**
**ಸಕ್ತರ ನಾವಿದೆನೋಳ್ಪುದು ಸರಿಯಾಗಿಹವೈ ||**

**ಶಕುಂತಲೆ:**—( ಅಪಶಕುನವನ್ನು ಸೂಚಿಸಿ ) ಅಮ್ಮಯ್ಯಾ, ನನ್ನ ಬಲಗಣ್ಣು ಯಾತಕ್ಕೆ ಹಾರುತ್ತಿದ್ದೀತೇ ?

**ಗೌತಮಮ್ಮ:**—ಭರ್ತೃಕುಲದೇವತಾಪ್ರಸಾದದಿಂದ ಅಮಂಗಲವೆಲ್ಲ ನಾಶವಾಗಿ ಶುಭದೋರಲಿಮ್ಮಾ; ಏನೂ ಚಿಂತೆ ಮಾಡಬೇಡ. ಆಗುವುದು ಬೇರೆ ತಪ್ಪುವದಿಲ್ಲ. ಒಳ್ಳೇದು. ( ಎಲ್ಲರೂ ಮುಂದೆ ನಡೆಯುವರು. )

**ಪುರೋಹಿತ:**—( ಅರಸನನ್ನು ತೋರಿಸಿ ) ಹೇ ತಪಸ್ವಿನ್ ವರ್ಣಾಶ್ರಮರಕ್ಷಕನಾದ ಮಹಾರಾಯನು ತಮ್ಮ ದರ್ಶನಾರ್ಥಿಯಾಗಿ ದಾರೀ ನೋಡುತ್ತ ಕುಳಿತುಕೊಂಡಿದ್ದಾನೆ. ಹೋಗಬೇಕು.

**ಶಾರ್ಙರವ :**—ಹೇ ಮಹಾಬ್ರಾಹ್ಮಣರೇ, ಮಹಾರಾಯನ ವೃತ್ತಿಯನ್ನು ಕಂಡು ಬಹು ಸಮಾಧಾನವಾಗುತ್ತದೆ. ಆದರೂ ಈ ಮಾತಿನ ಆಶ್ಚರ್ಯವು ನಮಗಾಗುವದಿಲ್ಲ. ಹ್ಯಾಗೆಂದರೆ ಕೇಳಿರಿ !

ಭಾ. ಷ. || **ತರುಕುಲಂ ಫಲಕಾಲದೊಳ್ಬಾ |**
**ಗಿರುವದಾಗಸ ಬಿಟ್ಟು ಧರಣಿಗೆ |**
**ಬರುವವು ಘನಂಗಳು ನವಾಂಬುಕಣಂ ಸಮೃದ್ಧಿಸಲು ||**
**ಕರುಣಿಪರು ಸಂಪತ್ತು ಬರೆ ಸ-**
**ತ್ಪುರುಷರೆಂಬವರಿನ್ನು ದಯೆದಿಂ- |**
**ಪರರಿಗುಪಕೃತಿ ಗೈವದವರೊಳ್ ಜನ್ಮಗುಣವಿಹುದೈ ||***

**ವೇತ್ರವತಿಕೆ:**—ಸ್ವಾಮಿನ್ ಋಷಿಗಳು ಪ್ರಸನ್ನಮುಖರಾಗಿ ಕಾಣುತ್ತಾರೆ. ಇವರಿಗೆ ಏನೂ ದುಃಖವಾಗಿಲ್ಲವೆಂಬಂತೆ ತೋರುತ್ತದೆ.

---

* भवन्ति नम्रास्तरवः फलागमैर्नवाम्बुभिर्भूरि विलम्बिनो घनाः ।
अनुद्धताः सत्पुरुषाः समृद्धिभिः स्वभाव एवैष परोपकारिणाम ॥१२॥

**ಅರಸು:**—( ಶಕುಂತಲೆಯನ್ನು ನೋಡಿ ) ಓಹೋ! ಇವಳು ಎಂಥ ತಪಸ್ವಿನಿ!

( ಪದ )

ದಾಟಿ:—ಕಂಡಿರಾ ॥ ರಂಗನ ಗುಣ ಕಂಡಿರಾ ॥ ಪಲ್ಲ ॥ ಕಂಡವಳನು ಕೂಡಿಕೊಂಡೆನ್ನ ಮೊರದ ॥ ಅನುಪಲ್ಲ ॥ ಪಾರಿಜಾತದೊಳಗಿನ ಈ ಪದದಂತೆ.

ಯಾರಯ್ಯಾ! | ಇಂಥವಳಿವಳ್ಯಾರಯ್ಯ ॥ ಪಲ್ಲ ॥
ಮೋರೆನೋಡಿ ಮೋಹಬೀರಿ ನಗುವಳಿವಳಾರಯ್ಯಾ ॥ಅ. ಪ.॥
ಜರದ ದುಕೂಲವನುಟ್ಟು ॥ ಚಂದ್ರ-
ಕರದೊಲ್ ಶಲ್ಯದ ಮುಸುಕಿಟ್ಟು ॥ ಅಹಾ-
ಕೊರಳ ಹಾರಗಳು ಬೊಗರೆ ಕುಚ ಮಧ್ಯದೊ ॥
ಳ್ಮೆರೆಯೆ ಮುನಿಗಳೊಳ್ ತಾ | ಮರೆಯಾಗಿ ನಿಲ್ಲುವಳಾ
ರಯ್ಯ.... ॥ ೧ ॥

ಇವಳ್ಯಾವಳೊ ಸ್ವರ್ಗದವಳು | ಇ-
ಟ್ಟಿಳವನಿಯಲ್ಲಿಲ್ಲದೊಸ್ತಗಳು | ಅಹಿ-
ಮವದಚಲದಿ ಸಣ್ಣ ಧವಳಗಂಗೆಯು ಪರಿ ॥
ಯುವತೆರನಿವರೊಳ್ ಪೊಳೆವ ಚಂದ್ರವದನೆಯುಳಾರಯ್ಯ॥೨॥
ಬಾಲೆ ನೋಡುವಳೆನ್ನ ಕದ್ದು | ಮೇಲೆ-
ಮೇಲೆ ಮುಗುಳುನಗೆ ಮುದ್ದು ॥ ಇವ-
ರೊಳು ಪಾಂಡುಪತ್ರ | ದೊಳಿಹಕಿಸಲಯ |
ದೋಲಿಹ ಬಗೆಯುನಾ । ಕೇಳಿ ನೋಡುವೆನಿವಳ್ಯಾರಯ್ಯ....
॥ ೩ ॥

**ವೇತ್ರವತಿಕೆ:**—ಸ್ವಾಮಿ, ಇವಳನ್ನು ನೋಡಿ ನನಗೂ ಬಹು ಕೌತುಕವಾಗುತ್ತದೆ. ಈ ವಿಷಯದಲ್ಲಿ ನನ್ನ ತರ್ಕವೂ ಸಾಗುವದಿಲ್ಲ. ಆದರೂ ಇವಳ ಸೌಂದರ್ಯವು ನೋಡತಕ್ಕದ್ದಾಗಿದೆ.

---

* का स्विदवगुण्ठनवती नातिपरिस्फुटशरीरलावण्या
मध्ये तपोधनानां किसलयमिव पाण्डुपत्राणाम् ॥ १३ ॥

**ಅರಸು:**—ಇರಲಿ; ಪರಸ್ತ್ರೀಯನ್ನು ನೋಡುವದು ಯೋಗ್ಯವಲ್ಲ.

**ಶಕುಂ:**—( ಉರದಲ್ಲಿ ಕೈಗಳನ್ನಿಟ್ಟು ತನ್ನೊಳಗೆ ) ಎಲೆ ಹೃದಯವೆ, ಇಷ್ಟರಿಂದಲೆ ಕಂಪಿತವಾಗಬೇಡ. ಆರ್ಯಪುತ್ರನ ಪ್ರೀತಿಯನ್ನು ಮನಸ್ಸಿನಲ್ಲಿ ತಂದು ಸ್ವಲ್ಪ ಸಮಾಧಾನ ಹೊಂದು.

**ಪುರೋಹಿತಃ**—( ಮುಂದಕ್ಕೆ ಬಂದು ) ರಾಜನ್, ಶಾಸ್ತ್ರರೀತ್ಯಾ ಇವರ ಆದರಸತ್ಕಾರವಾಯಿತು. ಇನ್ನು ಮೇಲೆ ತಮ್ಮ ಗುರುಗಳಾದ ಕಣ್ವ ಮಹಾಮುನಿಗಳ ಆಜ್ಞೆಯನ್ನು ತಿಳಿಸುವದಕ್ಕೋಸ್ಕರ ಬಂದಿದ್ದಾರೆ. ಅದನ್ನು ಕೇಳಿಕೊಳ್ಳಬೇಕು.

**ಅರಸು:**—ಹೇಳಬಹುದು. ನಾನು ಸಿದ್ಧನಾಗಿದ್ದೇನೆ.

**ಋಷಿಗಳು:**—ವಿಜಯಸ್ವರಾಜನ್.

**ಅರಸು:**—ಸರ್ವರಿಗೂ ಅಭಿವಂದನೆಮಾಡುತ್ತೇನೆ.

**ಋಷಿಗಳು:**—ಇಷ್ಟಮನೋರಥಪ್ರಾಪ್ತಿರಸ್ತು.

**ಅರಸು:**—ಹೇ ತಪಸ್ವಿನ್, ತಪಶ್ಚರ್ಯವು ನಿರ್ವಿಘ್ನದಿಂದ ನಡೆಯುತ್ತಿರುವದಷ್ಟೆ ?

**ಋಷಿಗಳು:**—ಹೇ ಮಹಾರಾಜಾ ಕೇಳು.

ಕಂದ || **ಸುಮನುಷ್ಯರ ರಕ್ಷಿಪನೀ |**
**ನೆಮಗಕ್ಷಯಮಿರೆ ವಿಘ್ನಬಂದಪುದೇನ್ನೈ ||**
**ತಮವಾವಿರ್ಭವಿಸುವದೆಂ- |**
**ತು ಮಹಿಗೆ ಘಮರ್ಮಾಂಶು ಬೀಸೆ ಬಿಸಿಕಿರಣಗಳಂ ||**

**ಅರಸು:**—( ತನ್ನೊಳಗೆ ) ಹಾಗಾದರೆ ರಾಜಶಬ್ದವು ನನಗೆ ಸಾರ್ಥಕವಾಗಿದೆ. ( ಪ್ರಕಾಶವಾಗಿ ) ಕಣ್ವಮಹಾಮುನಿಗಳು ಲೋಕಕಲ್ಯಾಣಾರ್ಥವಾಗಿ ಕುಶಲರಾಗಿದ್ದಾರಷ್ಟೇ?

**ಋಷಿಗಳು:**—ತಮ್ಮ ಕೃಪೆಯಿಂದ ಸುರಕ್ಷಿತರಾಗಿದ್ದು ತಪಸ್ಸಿದ್ಧಿಯ ಅನುಭವವನ್ನು ತೆಗೆದುಕೊಳ್ಳುತ್ತ ಸೌಖ್ಯದಿಂದಿದ್ದಾರೆ. ತಮ್ಮ ಕುಶಲಪ್ರಶ್ನ ಪೂರ್ವಕವಾಗಿ ಒಂದು ವಿಜ್ಞಾಪನೆ ಮಾಡಿಕೊಂಡಿದ್ದಾರೆ.

**ಅರಸು:**—ಭಗವಾನ್ ಕಣ್ವಋಷಿಗಳು ಏನೆಂದು ಆಜ್ಞಾಪಿಸಿದ್ದಾರೆ ಸ್ವಾಮಿ?

**ಶಾರ್ಙರವ:**—ತಾವು ಅವರ ಕನ್ನೆಯಗೂಡ ಪರಸ್ಪರ ಸಂಕೇತದಿಂದ ಗಾಂಧರ್ವವಿವಾಹಹೊಂದಿ ಅವಳನ್ನು ಸ್ವೀಕರಿಸಿದ್ದು ಅವರ ಮನಸ್ಸಿಗೆ ಬಹು ಆನಂದಕರವಾಗಿ ಅವರು ಹೇಳಿದ್ದೇನಂದರೆ--ಕೇಳಿ:—

( ಪದ )

ದಾಟಿ:—ಕೋಮಲಾಂಗ ನಿನಗೆ ತಕ್ಕ ಮೋಹನಾಂಗಿಯು। ಕಾಮಶಾಸ್ತ್ರ ಪೌಢ ಕಾಳಾಹಿ ವೇಣಿಯು ॥ ಪಲ್ಲ ॥ ಎಂಬ ಪದದಂತೆ.

**ದೇವ ನಿನಗೆ ದೊರೆತಳಯ್ಯ ದಿವ್ಯ ಮೃದುತನು ॥**
**ದಾವನಜಗೆ ದೂಷಿಸುವನು ನ್ಯಾಯವಂತನು ॥ ಪಲ್ಲ ॥**
**ಸುಮನಪ್ರಿಯ ಸಂಪಿಗೆಯು ಸಮಾನ ತೇಜಳೋ।**
**ಸುಮನಶರನರೂಪ ನಿನಗೆ ರತಿಯೆ ಮಾಜಳೋ ॥**
**ಸುಮನಸಪತಿಸುಮನೆ ಇವಳಪ್ಸರೆಯ ತನುಜಳೋ ॥ ೧ ॥**
**ಕುವಲಯವಾಹ್ಲಾದಿಸುವದು ನಿನ್ನ ಕೀರ್ತಿಯು।**
**ಕುವಲಯಾಕ್ಷಿ ನಿನ್ನೊಳು ಕೇಳ್ ಪ್ರೀತಿ ಪೂರ್ತಿಯು ॥**
**ಕುವರಿ ಎನ್ನ ಕರುಳಿ ಸತ್ಕ್ರಿಯದ ಮೂರ್ತಿಯು ॥ ೨ ॥**
**ಸದಯ ಹೃದಯ ನಿನಗೆ ತಕ್ಕ ಮೃದು ನಡತಿಯುಳೋ ॥**
**ಸದನವ ಶೋಧಿಸುತ ಬಂದ ಯೋಗ್ಯ ಸತಿಯುಳೋ।**
**ಸದೆಯದಿಹದ ನೀತಿಯಿಂದೆ ಭೀರುಮತಿಯುಳೋ ॥ ೩ ॥**

ಹೀಗೆಂದು ಹೇಳಿಕೊಂಡಿದ್ದಾರೆ. ಮಹಾರಾಯಾ, ಆದರೆ ನಿನ್ನ ಪತ್ನಿ ಯನ್ನು ನೀನು ಮನೆಯಲ್ಲಿ ಕರೆದುಕೊಂಡು ಧರ್ಮಾಚರಣವನ್ನು ಮಾಡ ತಕ್ಕದ್ದು. ಇವಳು ಗರ್ಭವತಿಯಾಗಿದ್ದಾಳೆ. ಕಾರಣ ಯಥಾ ಯೋಗ್ಯರಕ್ಷಣೆ ಯಾಗತಕ್ಕದ್ದು ಸರಿ.

**ಗೌತಮಮ್ಮ**—ಆರ್ಯರೆ, ನಾನು ಏನಾದರೂ ಹೇಳಿಕೊಳ್ಳಬೇಕೆನ್ನು ತ್ತೇನೆ. ಆದರೆ ಹೇಳಿಕೊಳ್ಳತಕ್ಕಂಥದು ಏನೂ ಉಳಿಯಲಿಲ್ಲ. ಇವಳು ತನ್ನ ಗುರುಜನರನ್ನು ಕೇಳಲಿಲ್ಲ. ತಾವೂ ಬಂಧು ಜನರ ಅನುಮತಿಯನ್ನು ತೆಗೆದು

ಕೊಳ್ಳಲಿಲ್ಲ. ಇಬ್ಬರೂ ಪರಸ್ಪರ ಪ್ರೀತಿಯಿಂದ ಆಚರಣವನ್ನು ಮಾಡಿರುತ್ತೀರಿ. ಇನ್ನು ಎರಡನೆಯವರು ಮತ್ತೂ ವಿಶೇಷವಾಗಿ ಪ್ರೀತಿ ಮಾಡಬೇಕೆಂಬದಕ್ಕೆ ಏನು ಹೇಳತಕ್ಕದ್ದು ?

**ಶಕುಂ—**( ತನ್ನೊಳಗೆ ) ಈ ಮಾತಿಗೆ ಪೌರವರಾಯನು ಏನು ಪ್ರತ್ಯುತ್ತರವನ್ನಾಡುತ್ತಾನೊ ?

**ಅರಸು—**ಯಾವ ಜನ್ಮದಲ್ಲಿಯ ಮಾತಿದು !

**ಶಕುಂ—**( ತನ್ನೊಳಗೆ ) ಅವ್ವಾ ಕೇಡಾಯಿತೆ ! ಇವು ಮಾತುಗಳಲ್ಲ. ಬಾಯಿಯಿಂದ ಜ್ವಾಲೆಗಳೇ ಹೊರಟವು. ( ಎದೆ ಒಡೆದು ) ಇಷ್ಟು ಉಪಹಾಸ ಮಾಡಿದ್ದು ಸಾಲದೆ ಇನ್ನೂ ಆಗಬೇಕೆಂದಿದ್ದರೆ ಆಗಲಿ ! ಅಂಥದೇನು ನಾನು ಮಾಡಿದ್ದು ?

**ಶಾರ್ಙ್ಗರವ:—**ರಾಜನ್ ತಾವು ಲೋಕವ್ಯವಹಾರದಲ್ಲಿ ನಿಷ್ಣಾತರು. ಕುಳಿತುಕೊಂಡು ಬಾಯಿಯಿಂದ ಹೀಗೆ ಮಾತನಾಡುವದು ಯೋಗ್ಯವಲ್ಲ.

**( ಪದ )**

ದಾಟಿ—ರಂಗಯ್ಯಾ ಬಾರನೇ ಸಖಿಯೇ ॥ ಪಲ್ಲ ॥ ಮಾರಾ ಕ್ರೂರಾ ಘೋರ ತಾಪದಿಂದ । ತಾರಾಪತಿಗೆ ಶರಣುಹೋದೆ ॥ ಎಂಬ ಪದದಂತೆ.

**ಇದಲ್ಲೋ ರಾಯ ನೀತಿಯು ॥ ಪಲ್ಲ ॥**
**ಮುನಿಧರ್ಮದೊಳಿಹ । ಕನಿಕೆಯು ವಿಭವದ**
**ಕೊನೆಗೇರಿಸೀಗ ನೂಂಕಿದೆಯೋ ॥ ೧ ॥**
**ಪ್ರೀತಿಯ ಮಗಳೊರ್ವ । ಳೀ ತರುಣಿಯು ವೃದ್ಧ ।**
**ನಾತಾಪಸನಿಗತಿ ಕಷ್ಟೋ ॥ ೨ ॥**
**ತವರಮನೆಯೊಳಿರ । ಲವಳೊಳ್ ಜನರು ಸಂದೇ-**
**ಹವ ನೀಡುವದು ಸಹಜಿಕವೊ ॥ ೩ ॥**

**ಅರಸು:—**ಇದು ಏನನ್ನು ಮಾತನಾಡುತ್ತಿದ್ದೀರಿ ಸ್ವಾಮಿ ! ಇವಳ ಕೂಡ ನನ್ನ ವಿವಾಹವಾಗಿರುವದೋ ಎಂದಾದರು ?

**ಶಕುಂ:—**( ವಿಷಾದಹೊಂದಿ ತನ್ನೊಳಗೆ ) ಹೃದಯವೆ, ನಿನ್ನ ಆ ಶಂಕೆ ತಪ್ಪಲಿಲ್ಲ ನಿಜವಾಗಿಹೋಯಿತು.

ಶಾರ್ಙ್ಗರವ:—( ಸಿಟ್ಟಿನಿಂದ ) ಇದು ಎಂಥ ಆಶ್ಚರ್ಯವಯ್ಯಾ?

ಕಂದ ||
**ಮಾಡಿದ ಕೃತ್ಯಕೆ ಪಶ್ಚಾತ್**
**ಗೂಡಿರೆ ತಾಪವ ನೀತಿಯನೆ ಬಿಡುವರೇನೈ ||**

ಅರಸುಃ—ಈ ಅಸತ್ಕಲ್ಪನೆ ಯಾರಿಂದಾಗುತ್ತದೆ ಸ್ವಾಮಿ ?

ಶಾರ್ಙ್ಗರವ:—

**ಕೇಡಿಗಳೈಶ್ವರ್ಯ ಬರಲ್**
**ಕಾಡುವರೀಪರಿ ಮದಾಂಧರೈ ಬಡಜನರ || ೧ ||**

ಅರಸು:—ಇದು ಮತ್ತೂ ವಿಶೇಷಾಶ್ಚರ್ಯಕಾರಕವಾದ ದೂಷಣೆ.

ಗೌತಮಮ್ಮ:—( ಶಕುಂತಲೆಗೆ ) ಅವ್ವಾ, ನಾಚಿಕೆ ಸುಡು ಇನ್ನು. ನಿನ್ನ ಗಂಡನು ಚೆನ್ನಾಗಿ ನಿನ್ನ ಮೋರೆ ನೋಡಲಿ; ಅಂದರಾದರೂ ಗುರುತ ವನ್ನು ಹಿಡಿದಾನು. ( ತಲೆಯ ಮೇಲಿನ ಸೆರಗು ಹಿಂದೆ ಸರಿಸುತ್ತಾಳೆ. )

ಅರಸು:—( ಶಕುಂತಲೆಯ ರೂಪವನ್ನು ನೋಡಿ- )

## ( ಪದ )

ದಾಟಿ—ಧಪಮಾ ಪಾಧಪಧಾಧಾಸಾ । ಸರಿ ಮರೀ । ಸರಿಸಧಸಪಾಧನೂಪ || ಪಲ್ಲ || ಸಸರಿಮರಿಮಪಾ । ಧಧಪಮಪಾ । ಧಧಸಧಾ । ರಿಸಧಸಾ । ಧಪಮಪಾ । ಧಾಧಾ । ಸಾಸಾ । ರೀರೀ । ಮರಿಸರಿಸಧಸ । ಧಾರೀ । ಧಾಸಾ । ಪಾಧಮಾಪ || ಎಂಬಂತೆ.

**ಎದಿರೊಳ್ ನಿಂದಿಹಳ್ಳೆ ಬಂದೆನ್ನೆದಿರೊಳ್ || ಪಲ್ಲ ||**
**ಎದೆಕರುಂಗಿಸಲಸಮ ಸುಂದರಾಂಗಿ ||** ಅನುಪಲ್ಲ ||
**ಜಘನ ಘನಕೆ ಕಾಲ್ಗಳು ದಣಿಯಲ್ || ಕಿರಿಯತೆಳ್ । ನಡುವಿನೊಳ್**
**ಕರವಿಡಲ್ ಪೀನ । ಸ್ತನ । ಕ್ಕೆ ಬಾಗಿಹಳು || ಕಚನಿಚಯಂ । ಮೇಲ್ ।**
**ಬರೆ ಮೇಣ್ । ಮದನಧನುವೆ || ೧ || ಹಿಮವದಚಲದಲ್ಲಿಯ**
**ಬನದಿಂ || ಹರಿದುಮಂ । ದಿರದಿಬಂ । ದಿರಲುಮಂ || ದಗಾ । ಮೆಕುಂ।**
**ಪಗಂ । ಧಿಯೆನಗಸುವಿನಪ್ರಿಯಳೆಂ || ದು ಎನಲು ಸುಳಿಎಲರೊಲು**
**|| ೨ ||**

**ಬಿಳಿವಸನನೆ ತಣ್ಣದಿರುರ ಭಾ || ರವೆಚಕೋ | ರಗಳಿಕೋಮೆರು**
**ವಕೊ ||**
**ರಳ್ಕುತ್ತಿನ ಹಾ | ರಗಳ್ | ಉಡುಗಣವು ಹರಿಣಾಂಕಂ || ನಲ್ಗಣ್ಕೋ**
**ರೆಯುನೀರೆ || ೩ ||**
**ನಸುಕನೊಳಿರೆ ಕುಂದದಿಜಲಬಿಂದು ಮನದೊಳ್ | ಭ್ರಮರ ಸಂ |**
**ಭ್ರಮಿಸಿದೊಲ್ |**
**ದೀನೆ | ಮೌನೆ | ತಾನೆ | ಮನೆಗೆ ಬರೆ ಬಿಡಲಾರೆ | ಮೀರೆ ನೀತೆ**
**ಸೋತೆನಿದಿರೊಳ್ || ೪ ||**

( ಈ ಪ್ರಕಾರ ಮನಸಿನಲ್ಲಿ ಧೇನಿಸುತ್ತ ಸುಮ್ಮನೆ ಕುಳಿತುಕೊಳ್ಳುತ್ತಾನೆ. )

**ವೇತ್ರವತಿಕೆ**—( ತನ್ನೊಳಗೆ ) ಏನು ನಮ್ಮ ದೊರೆಗಳ ಧಾರ್ಮಿಕತ್ವ! ಅಹಹ ! ಇಂಥ ಸ್ತ್ರೀರತ್ನವು ತಾನೇ ಮನೆಗೆ ಬಂದಿರಲಾಗಿ ಅವಳನ್ನು ಗ್ರಹಣ ಮಾಡತಕ್ಕದ್ದೊ ಬಿಡತಕ್ಕದ್ದೊ ಎಂಬ ವಿಷಯದಲ್ಲಿ ವಿಚಾರ ಮಾಡುವಂಥವನು ಯಾವನಮ್ಮಾ ಅನ್ಯಪುರುಷ !

**ಶಾರ್ಙರವ**—ಹೇ ರಾಜನ್, ಮೌನವೇನು ಕಾರಣ ಹಿಡಿದಿದ್ದೀರಿ ?

**ಅರಸು**—ಹೇ ತಪಸ್ವಿ ಜನರುಗಳಿರಾ, ನಾನು ಬಹಳ ನೆನಪುಮಾಡಿಕೊಳ್ಳುತ್ತೇನೆ. ಆದರೂ ಈ ಸ್ತ್ರಿಯನ್ನು ಸ್ವೀಕರಿಸಿದ್ದು ನನ್ನ ಸ್ಮರಣೆಗೆ ಬರಲೊಲ್ಲದು, ಇದಲ್ಲದೆ ಇವಳು ಈಗ ಗರ್ಭಿಣಿಯಾಗಿದ್ದಾಳೆಂದು ಹೇಳುತ್ತೀರಿ. ಹೀಗಿರಲಾಗಿ ನಾನು ಹ್ಯಾಗೆ ಗ್ರಹಣ ಮಾಡಲಿ ?

**ಶಕುಂ**—( ತನ್ನೊಳಗೆ ) ಆರ್ಯನಿಗೆ ಮೊದಲು ಪರಿಣಯವೇ ಆಗಿರುವದೊ ಇಲ್ಲವೊ ಎಂಬ ಸಂದೇಹ. ಮುಂದಿನ ದುರಾಸೆಯಾತಕ್ಕೆ ಸುಡುತ್ತದೆ !

**ಶಾರ್ಙರವ**—ಆಯ್ಯಾ ಹಾಗಲ್ಲ; ನೀನು ಈ ಮಾತು ಸ್ವಲ್ಪ ಲಕ್ಷ್ಯದಲ್ಲಿ ತಂದು ನೋಡು.

ಚಂ. ವೃ. **ಬಿಡು ಇವಳಂತು ನಿನ್ನೊಳವಿಚಾರದಿ ಕೂಡಿದಳಾ**
**ಮುನೀಶ್ವರಂ ||**
**ಒಡಲೊಳು ಸಿಟ್ಟು ತಾಳದಲೆ ನಿನ್ನಯ ಕೃತ್ಯಕೆ ಶಾನೆ**
**ಮಾನಮಂ ||**

**ಕೊಡುತಿರೆ ನೀನವಂಗೆ ತಿರುಗಿಂತವಮಾನವ ಮಾಳ್ಪ**
**ಚೌರ್ಯದಿಂ-**
**ಡೊಡವೆಯು ನೊಯ್ಯೆ ಬೇರೆ ಸೆರಗೊಡ್ಡುವ**
**ನೊಯ್ವುದಕಿತ್ತ ಲಕ್ಷ್ಯಸೈ ||**

**ಶಾರದ್ವತ:**—ಎಲೋ ಶಾರ್ಙ್ಗರವ, ನೀನು ಸುಮ್ಮನಿರಿನ್ನು. ಎಲೆ ಶಕುಂತಲೆ, ನಾವು ಹೇಳುವಷ್ಟೆಲ್ಲ ಹೇಳಿ ನೋಡಿದೆವು. ಈ ಆರ್ಯನಂತೂ ಹೀಗೆ ಮಾತನಾಡುತ್ತಾನೆ. ಇನ್ನು ಮೇಲೆ ನಿಮ್ಮಾ ಅವರಾ ಏನಾದರೂ ಗುರುತಿನ ಮಾತಿದ್ದರೆ ಹೇಳಿಕೊಂಡು ನೋಡು.

( ಎಂದು ಇಬ್ಬರೂ ಋಷಿಶಿಷ್ಯರು ದೂರ ಹೋಗಿ ನಿಲ್ಲುತ್ತಾರೆ. )

**ಶಕುಂ:**—( ಮೋರೆದಿರುವಿ ) ಮೊದಲಿನ ಅನುರಾಗವೇ ಈ ಮಟ್ಟಿಗೆ ಬಂತಂತೆ. ಇನ್ನು ಗುರುತಿನ ಮಾತಿನಿಂದ ಏನಾಗಬೇಕಾಗಿದೆ? ದುಃಖವೆಂಬ ಸಾಗರದಲ್ಲಿ ನಾನು ಬಿದ್ದೆನಿದುನಿಶ್ಚಯು. ನನ್ನ ದೆಸೆಯಿಂದ ಬಂಧುಜನರು ಆಮರಣಪರ್ಯಂತರ ದುಃಖವನ್ನೇ ಅನುಭವಿಸುವಂತೆ ಆಗಿಹೋಯಿತು. ( ಅರಸನಿಗೆ ) ಆರ್ಯಪುತ್ರನೆ, ( ತನ್ನೊಳಗೆ ) ಲಗ್ನದ ಮಾತಿಗೆ ಸಂಶಯಿತನಾದಂಥವನಿಗೆ ಆರ್ಯಪುತ್ರನೆಂಬ ಸಂಬೋಧನೆ ಯಾಕೆ? ( ಅರಸನಿಗೆ )

**( ಪದ )**

ದಾಟಿ—ದಯಮಾಡಲೊಲ್ಲ್ಯಾ | ದಯಾನಿಧೆ || ದಯಮಾಡಲೊಲ್ಲ್ಯಾನಿ- | ನ್ನಯಸೇವೆ ಜನರ ಸ- | ಪಾಲ್ಗಯಿಸಿ ನಿ- | ರ್ಭಯದಿ ಚರಿಸುವಂತೆ || ಪಲ್ಲ || ಎಂಬ ಪದದಂತೆ.

**ನೀತಿಯಿದಲ್ಲೊ | ಪೌರವರಾಯಾ | ನೀಕರುಣಿಪುದೋ || ಪಲ್ಲ ||**
**ಪ್ರೀತಿಯಿಂದಲಿ ರಂಬಿ- | ಸೀ ತನುಮನಗೊಂಬಿ |**
**ನಾ ತಿಳಿಯದೆ ನಂಬಿ- | ದಾತಪ್ಪನುಕ್ಷೆಂಬಿ || ಅನುಪಲ್ಲ ||**
**ಕಳ್ಳತನದಲಿ || ಮನೆಯೊಳಯ್ಯ | ನಿಲ್ಲದ್ದು ಕೇಳಿ ||**
**ಮೆಲ್ಲನೆ ವನದೊಳು | ಬಳ್ಳಿಯೊಳ್ಪೆಳೆದಂಥ |**
**ಮುಳ್ಳು ಎನ್ನನು ಮೋಹ | ಗೊಳ್ಳಿಸಿ ಬಿಡುವದು || ೧ ||**
**ತೆರಳುವ ಸಮಯ || ದೊಳಳುತನಾ | ಕರುಣೆಯಿಂದಿನಿಯು ||**
**ಕರೆಯು ಕಳುಹು ತೀವ್ರ || ತರದಿಂದೆನ್ನಲು ಎನ್ನ |**
**ಕೊರಳಮುಟ್ಟದ ಮಾತು | ಮರೆದಿಹೆನೆಂಬದು || ೨ ||**

**ಮುನಿಜನರಿಸ್ನಾ || ಏನೆಂಬುವ | ರೆಸಗೆಸಂಪಸ್ನಾ ||**
**ಜನನಿಯೆಲ್ಲಿ ಹಳೊ ಎನ್ನಸು ಬಂಧಿಗಳು ಯಾರೊ |**
**ಜನರೊಳೀಕ್ಷಿಸಬ್ಯಾಡೊ | ಮನಸುನಿನ್ನೊಳು ನೋಡೋ || ೩ ||**

**ಅರಸು:**—( ಕಿವಿಯ ಮೇಲೆ ಕೈಯಿಟ್ಟು ) ಶಿವ ಶಿವ ಶಿವ! ಹೇ ಸ್ತ್ರೀಯೆ, ಇದು ಎಂಥ ಪಾಪವಚನಗಳನ್ನಾಡುತ್ತಿದ್ದೀ ?

|| ಪೃಥ್ವೀವೃತ್ತ ||

**ಎಲೇ ಮುನಿಯಕನ್ಯೆ ವಸ್ಥೆ ವಯ ಸಣ್ಣದಾಗಿರ್ಪು ಎ |**
**ನ್ನೊಳಿಂತುಕುಲಕಂಟಕತ್ವ ಮಿರಿಸಲ್ಕ ಹಾಸಕ್ಕೆ ಪು ||**
**ಷ್ಕಳಾರ್ಜ್ಜರಿಯುವಾಯ್ತು ನಿಸ್ಕಬಲೆಗಾಂ ಸಿಗೆಂ ಕೇಳು ಮ |**
**ತ್ಕುಲಂ ಕೆಡಿಸಬೇಡ ಸೂಸುನದಿ ವೃಕ್ಷಮುಂ ಕೀಳ್ವವೊಲ್ ||೧||**

**ಶಕುಂ**— ಒಳ್ಳೇದು; ನಾನು ಪರಸ್ತ್ರೀಯೆಂದು ತಮ್ಮ ಮನಸು ಸ್ಮರಣೆದಪ್ಪಿ ಭ್ರಾಂತಿಗೊಂಡಿದ್ದರೆ ನಾನು ಏನಾದರೂ ಗುರುತವನ್ನು ತೋರಿಸಿ ನೆನಪು ಮಾಡಿಸುತ್ತೇನೆ.

**ಅರಸು**— ಇದಕ್ಕೆ ಯಾರಲ್ಲಿಂದಾರು ?

**ಶಕುಂ**— ( ಅನಾಮಿಕೆಯಲ್ಲಿ ಆತನು ಕೊಟ್ಟ ಉಂಗುರವನ್ನು ನೋಡುತ್ತಾಳೆ, ಅದು ಬಿದ್ದುಹೋಗಿರುತ್ತದೆ. ) ಅವ್ವಾ! ಎಲ್ಲಿ ಹೋಯಿತೆ ಉಂಗುರ! ( ಹೌಹಾರಿ ಗೌತಮಮ್ಮನನ್ನು ನೋಡುತ್ತಾಳೆ. )

**ಗೌತ**— ನಮ್ಮವ್ವಾ, ಎಲ್ಲಿ ಕಳೆದುಕೊಂಡಿಯೆ? ( ಗಾಬರಿಗೊಂಡು ). ಶಕ್ರಾವತಾರ ಕ್ಷೇತ್ರದಲ್ಲಿ ಶಚೀತೀರ್ಥಕ್ಕೆ ಸ್ನಾನಕ್ಕೆ ಹೋದಾಗ ಬಿದ್ದು ಹೋಯಿತು ಕಾಣಿಸುತ್ತದೆ. ಇನ್ನು ಹ್ಯಾಗೆ ಮಾಡುವಿಯೇ ನಮ್ಮವ್ವಾ ?

**ಅರಸು**—( ನಕ್ಕು ) ಸ್ತ್ರೀಯರ ಚರಿತ್ರವು ಹ್ಯಾಗಿರುವದೆಂಬುದು ಈಗ ಪ್ರತ್ಯಕ್ಷವಾಗಿ ಕಾಣಿಸುತ್ತದೆ; ನೋಡಿ.

**ಶಕುಂ**—ಇಲ್ಲಿ ನನ್ನ ಅದೃಷ್ಟವೇ ತನ್ನ ಪರಾಕ್ರಮವನ್ನು ತೋರಿಸಿತು; ಆದಕ್ಕೆ ಉಪಾಯವೇನು? ಚಿಂತೆಯಿಲ್ಲ; ನಾನು ಆ ವ್ಯಾಳ್ಯದ ಗುರುತುಗಳನ್ನು ಹೇಳುತ್ತೇನೆ.

**ಅರಸು**—( ತುಚ್ಛದರ್ಶಕವಾದ ಹಾಸ್ಯದಿಂದ ) ಪ್ರತ್ಯಕ್ಷ ಕಣ್ಣಿನಿಂದ ನೋಡುವದು ಹೋಗಿ ಕಿವಿಯಿಂದ ಕೇಳುವದಾಯಿತೆ? ಒಳ್ಳೇದು ಆಗಲಿ.

**ಶಕುಂ**—ಒಂದು ದಿನ ನವಮಲ್ಲಿಕಾ ಮಂಟಪದಲ್ಲಿ ತಾವು ಕುಳಿತು ಕೊಂಡು ಉದಕದಿಂದ ತುಂಬಿದ ಕಮಲದಲಪಾತ್ರೆಯನ್ನು ಹಿಡಿದು ಕೊಂಡಿದ್ದಿರಿ; ಅದು ನೆನಪುಂಟೆ?

**ಅರಸು**—ಒಳ್ಳೇದು ಮುಂದೆ?

**ಶಕುಂ**—ಆಗ್ಗೆ ನಾನು ಮಗುವಿನಂತೆ ಜೋಕೆಮಾಡಿದ ದೀರ್ಘಾ ಪಾಂಗವೆಂಬ ಎರಳೆಕರುವು ನೀರಡಿಸಿ ಸಮೀಪದಲ್ಲಿ ಬಂದು ನೋಡ ಲಾರಂಭಿಸಿತು. ಆಗ ನೀವು ದಯದಿಂದ ಇದೇ ಮೊದಲು ಕುಡಿಯ ಬಾರ ದೇಕೆಂದು ಮುಂದೆ ಕೈ ಮಾಡಿದಿರಿ. ಅದು ಪರಿಚಯವಿಲ್ಲದ್ದರಿಂದ ಕುಡಿಯ ಲಿಲ್ಲ. ಅದೇ ಪಾತ್ರೆಯನ್ನು ನಾನು ಕೈಯಲ್ಲಿ ತೆಗೆದುಕೊಂಡೆ. ಆಗ್ಗೆ ನಿರ್ಭಯದಿಂದ ಉದಕಪ್ರಾಶನಮಾಡಲಾರಂಭಿಸಿತು. ಅದಕ್ಕೆ ತಾವು ಸಾನಂದಾಶ್ಚರ್ಯಪಟ್ಟು ಯಾವ ಪ್ರಾಣಿಯಾದರೂ ಸ್ವಜಾತಿಯ ಜನದಲ್ಲಿ ವಿಶ್ವಾಸವಿಡುತ್ತದೆ; ನೀನು ಅದರ ಜಾತಿಯವಳೆ; ವನದಲ್ಲಿರುವವಳು; ಅಂತ ಮಾತನಾಡಲಿಲ್ಲವೆ?

**ಅರಸು**—ಇಂಥ ಸ್ವಕಾರ್ಯಸಾಧಕವಾದ ಮಧುರಭಾಷಣಕ್ಕೆ ವಿಷಯ ಲಂಪಟರಾದಂಥವರು ಪಾಶದಲ್ಲಿ ಬೀಳುತ್ತಾರೆ; ನಾನು ಇಂಥ ಕಪಟಕ್ಕೆ ವಶನಾಗುವವನಲ್ಲ.

**ಗೌತಮಮ್ಮ**—ಅಪ್ಪ, ಮಹರಾಯಾ! ದೊರೆಯೆ! ಅವಳಲ್ಲಿ ಕಪಟ ವೆಲ್ಲಿರುವದೊ! ಜನ್ಮದಾರಾಭ್ಯ ತಪೋವನದಲ್ಲಿ ಬೆಳೆದಂಥವಳು. ಕಪಟ ವೆಂಬ ಶಬ್ದಾರ್ಥ ಮೊದಲಾಗಿ ಗೊತ್ತಿಲ್ಲ ಕಂಡೆಯಾ! ಪರದೇಶಿ ಕೂಸನ್ನು ಹೀಗೆ ನೀನು ಕುಳಿತುಕೊಂಡು ಕಷ್ಟಪಡಿಸುವದು ಯೋಗ್ಯವಲ್ಲ.

**ಅರಸು**—ಹೇ ವೃದ್ಧತಾಪಸಿ, ಕಪಟದಿಂದ ಪುರುಷರನ್ನು ಠಕ್ಕಿಸು ವದು ಸ್ತ್ರೀಯರ ಜಾತಿಸ್ವಭಾವವಾಗಿರುತ್ತದೆ.

**ತರುಣಿಯರಲ್ಲಿ ಧೂರ್ತಗುಣವಿಪ್ಪುದು ಸಾಹಜಿಕಂ ಸ್ವಕಾರ್ಯತ-**
**ತ್ಪರತರರಾಗಿಹರ್ ಮರಳುಗೊಂಬರು ಕೋಮಲ ಯುಕ್ತಿಗಾಗಿ**

**ಮೂ-**

**ಖರೆ ! ಗುರುವ್ವಾರು ಕೋಕಿಲೆಗೆ ಬೋಧಿಸಲೀ ಬಗೆ ರಕ್ಷಣಾರ್ಥ ಪೇಳ್ |**
**ಮರಿಗಳನನ್ನಪಕ್ಷಿಗಳ ಗೂಡಿನೊಳಿಕ್ಕಿ ನಭಕ್ಕೆ ಪೋಪುದಂ ||**

**ಶಕುಂ:**—( ಕೋಪಾವಿಷ್ಟಳಾಗಿ ) ಹೇ ನೀಚಾ ನಿನ್ನ ನಡತೆಯಂತೆ ಅನ್ಯರ ನಡತೆ ಎಂದು ತಿಳಿಯಬೇಡ. ತೃಣದಿಂದ ಆಚ್ಛಾದಿತವಾದಂಥ ಕೂಪದಂತೆ ಮೇಲಿ ಮೇಲಿ ಮಾತ್ರ ಧಾರ್ಮಿಕತನವನ್ನು ತೋರಿ ನನ್ನನ್ನು ಮೋಸ ಹೊಂದಿಸಿದಲ್ಲವೇ? ಒಳ್ಳೇದು, ನನ್ನ ಹೊರತು ಅನ್ಯರಾರು ನಿನ್ನಲ್ಲಿ ವಿಶ್ವಾಸವಿಡುವವರಿದ್ದಾರೆ?

**( ಪದ )**

ದಾಟಿ— ನಾಥ ನಿನ್ನ ನಡತೆನೆಲ್ಲ | ನಾ ಬಲ್ಲೆ ನೇಳೋ || ದೂತೆಯ ನೆರೆದೆನ್ನೊಳು | ಧೂರ್ತತನವೆ ಕೇಳೋ | ಎಂಬಂತೆ.

**ರಾಯ ನಿನ್ನ ರೀತಿಯಲ್ಲೊ | ನ್ಯಾಯನೇತ್ರದಿಂದೆ ನೋಡೊ ||**
**ಕಾಯುವರ್ಪಿಸಿದ ವ್ಯ್ಯಾಲೆ | ಕೊರಳಗೊಯ್ಯುವರೇನೊ || ಪಲ್ಲ ||**
**ಅಂದು ನೀನಾಶ್ರಮದೊಳು | ಬಂದು ಆಕಸ್ಮಿಕವೆನ್ನ**
**ಮುಂದೆ ಮಿಂಚಿನಂತೆ ಪೊಳೆದು | ಮಂದಹಾಸದೊಳು ಸ್ನೇಹ ||**
**ದಿಂದೆ ಕುಶಲವಾರ್ತೆಯ | ನಂದದಿ ಕುಳಿತು ಕೇಳಿ-**
**ಬಂಧಿಸಿ ಮೆಲ್ಲನೆ ಮೋಹ | ದಿಂದನೆನ್ನ ಮನೆಯೊಳು ||**
**ಎಂದು ಬಾರದ ಬಗೆಯುಗಾಣಿಸಿ | ದೆಂದು ಮನದೊಳು ಪೇಳ ಪೋಗಲು ||**
**ಮಂದಮತಿಯೆನ್ನನು ಬಲು ಕಪಟ | ದಿಂದೆ ತಿರುಗಿಸಿ ಮೋಸ ಮಾಡಿದೆ || ೧ ||**
**ಅಂದು ಮೊದಲು ನಿನ್ನಯ | ಕಂದರ್ಪ ರೂಪವೆನ್ನೊಳು ||**
**ನಿಂದು ಜರ್ಜರಿತಳಾಗ | ಲೊಂದು ದಿನ ನದೀತಟ ||**
**ಹೊಂದಿರ್ಪ ಬಳ್ಳಿ ಮನೆಯೋಳ್ | ಚಂದನ ಶೀತೋಪಚಾರ |**
**ದಿಂದೆ ತಾಪಗಳೆಯಲು | ಬಂದೆಯೊ ಪಾಳತಿಯೊಳು ||**
**ಬಂಧುಜನರನುಮತಿಯ ಕೇಳುವೆ | ನೆಂದುನಾನಾಲ್ಪರಿದೆನೊಲ್ಲೊ-**
**ಲ್ಲೆಂದೆ ನೀ ಬಿಡಲಿಲ್ಲ ಶಕ್ತಿಗಳಿಂದೆ ತನುಮನಗೊಂಡೆಯಲ್ಲದೆ||೨||**

**ಮುನಿಗಳಾಶ್ರಮದೊಳು । ವನದೊಳ್ಬೆಳೆದು ನಾ ಹ-**
**ರಿಣ ಬಾಲಕರಗೂಡ | ಮನೆಯುಮುಂದಾಡುತಿರ್ದೆ ||**
**ನಿನಗೆ ನಾನಪರಾಧ | ವನು ಮಾಡಿದ್ದೇನೊ ಬಡ-**
**ಕನ್ನಿಕೆಯುಗೂಡ ನೀ ಭು । ವನನಾಥನಾಗಿಲಜ್ಜೆ ||**
**ಇನಿತು ಇಲ್ಲದೆ ಭಾಷೆ ನೀಡುತ | ಮನಸು ಮರಳಿಸಲೀಗ ನಿನ್ನಯ**
**ಮನೆಗೆ ಬರೆ ನಾನೊಂಧರಿಯೆನೆಂ । ಬಿನಿತು ಕೀರ್ತಿಯುಮಾಡಿ**
**ದೆಲ್ಲದೆ || ೩ ||**

ಹೀಗೆ ವಿಶ್ವಾಸದಿಂದ ತೊಡೆಯ ಮೇಲೆ ಮಲಗಿಸಿಕೊಂಡು ಕುತ್ತಿಗೆ ಕೊಯ್ಯಬೇಕೇ ?

**ಅರಸು:**—( ತನ್ನೊಳಗೆ ) ಇವಳ ಸಿಟ್ಟಿನಿಲ್ಲಿ ಏನೂ ಕಪಟವೆಂಬುವದು ತೋರಿಬರುವದಿಲ್ಲ. ಆದ್ದರಿಂದ ನನಗೆ ಸಂದೇಹವುತ್ಪನ್ನವಾಗುತ್ತದೆ.

**( ಪದ— ಸಾಕಿ )**

**ಸ್ಮರಣೆ ನಾಲದೆನ್ನುರವತಿ ಕಠಿಣಾಗಿಹುದೀ ಮೋಹದ ಬೊಂಬೆ ||**
**ಪರಿಪರಿ ರತಿರಸ ಪ್ರೇಮವೃತ್ತಮಂ ಪೇಳ್ವುದರೊಳ್ ನಾನಂಬೆ ||**
**ಮರಮರ ಮರಗುತ ಕಣ್ಮೊಗಗಳು ಕೆಂಪಾಗಿರೆ ಭ್ರೂಯುಗ**
**ಬಂಬಾ ||**
**ಧರೆ ವಕ್ರಿಸಿದಳ್ ಕಡು ರೋಷದಿ ಜಿಲ್ಮುರಿದನೇನೊ**
**ಪೂವಂಬಾ || ೧ ||**

( ಶಕುಂತಲೆಗೆ ) ಹೇ ಭದ್ರೆ, ದುಷ್ಯಂತರಾಜನ ಚರಿತ್ರವನ್ನು ಯಾವತ್ತರೂ ಬಲ್ಲರು. ಆದರೆ ನೀನೆಂಬುವದು ಇದುವರೆಗೆ ಯಾರೂ ನೋಡಲಿಲ್ಲ.

**ಶಕುಂ**— ಒಳ್ಳೇದು, ಈ ವ್ಯಾಖ್ಯದಲ್ಲಿ ನಾನು ಜಾರಿಣಿಯಂತೆ ಸ್ವಚ್ಛಂದಾಚರಣೆಯಾದೆನಷ್ಟೆ? ಪುರುವಂಶಕ್ಕೆ ಲಕ್ಷಕೊಟ್ಟು ಈತನಲ್ಲಿ ವಿಶ್ವಾಸವಿಟ್ಟದ್ದಕ್ಕೆ ಮುಖದಲ್ಲಿ ಅಮೃತವೂ ಹೃದಯದಲ್ಲಿ ವಿಷವೂ ತುಂಬಿಕೊಂಡಿರುವ ಪುರುಷನ ಕೈಯಲ್ಲಿ ಸಿಲ್ಕಿದೆನಲ್ಲ! ಅಕಟಕಟಾ! ಇನ್ನು ಯಾವ ಮಾತಾಡಿ ಏನು ಫಲ! (ಎಂದು ಮೋರೆಗೆ ಸೆರಗಿಕ್ಕಿ ದುಃಖಿಸಲಾರಂಭಿಸುತ್ತಾಳೆ. )

( ಶಾರ್ಙ್ಗರವನೂ ಶಾರದ್ವತನೂ ದೂರದಲ್ಲಿ ನಿಂತವರು ಸಮೀಪದಲ್ಲಿ ಬರುತ್ತಾರೆ. )

**ಶಾರ್ಙ್ಗರವ**—ಹೇ ವತ್ಸೆ, ಮೊದಲಿಗೇ ನೀನು ತಪ್ಪಿದೆ. ಇನ್ನು ಮೇಲೆ ದುಃಖಮಾಡಿ ಫಲವೇನು ? ಹಿರಿಯರನ್ನು ಕೇಳದಲೆ ತನ್ನ ಮನಸಿಗೆ ಬಂದಂತೆ ಯಾವದಾದರೂ ಕಾರ್ಯವನ್ನು ಮಾಡಿದರೆ ಅದು ಕಡೆಗೆ ಹೀಗೇ ಪರಿಣಾಮ ದೋರುತ್ತದೆ.

( ಪದ ) *

**ಮನದಳತೆ ನೋಡಲ್ ತಾಂ ತಿಳಿಯಬೇಕು ‖ ಪಲ್ಲ ‖**
**ತಿಳಿಯದೆ ತರುಣರತಿ ‖ ಸನಿಸನಿ ಸನಿ ಮಾತಾಡಿದಕ್ಕೆ ಸಂ ‖**
**ಸಾರಾ । ಪಾರಾ । ನಾರಾ । ಪಾರಾ । ಗಾಣಿಸುವನಿಹನೋ**
**ಇಲ್ಲೋ ‖ ನೋಡದೆ ನಂಬಲಾಗದು ಪುರುಷರ ‖ ಅನುಪಲ್ಲ ‖**
**ತನುವಿನೊಳಿಹ ಸೀತಕೆ ಪರರ ‖ ಮನಸೆಳೆದುವರು**
**ಖಳ ಮನಜರು ತನ್ನೊಳ್ ‖ ಜೊಂದಿ ಮೇಲ್ । ಮುಂದವಳ್ ।**
**ನೊಂದರೇನ್ । ಬೆಂದರೇ । ನೆಂಬುವರ್ ‖ ೧ ‖**

**ಅರಸು**—ಶಾಬಾಸ ! ಅಂತೂ ಈ ಸ್ತ್ರೀಯಳ ಮಾತಿನ ಮೇಲಿಂದೇ ತಾವು ದೂಷಣವಿಡುತ್ತೀರೋ ನನ್ನಲ್ಲಿ ?

**ಶಾರದ್ವತ**—(ಕ್ರೋಧಯುಕ್ತನಾಗಿ) ಹ್ಯಾಗೆ ಶಾರ್ಙ್ಗರವ, ಗೌತಮಮ್ಮ, ಹ್ಯಾಗೆ ಕೇಳಿದಿರಾ ಈ ಅರಸನ ಹೀನೋತ್ತರವನ್ನು ? ಶಕುಂತಲೆಯ ಮಾತು ಕಪಟದ್ದು, ಇವನ ಮಾತು ಮಾತ್ರ ಸತ್ಯ !

---

( ಸಾಹಿತ್ಯ ) *

ಧಾಟಿ—ತಾನಾನಾದರದರದೋಮ್ । ತನನತದರದಾನಿ ।
ತರದಿನೀತದರದಾನಿ । ತನನನನನನನನಾತನನನಾ ।
ತಾನಾ । ತಾನಾ । ತಾನಾ । ತಾನಾ । ತಾನಾನಾರೆನಾದರದರದಾನಿ ।
ತೋಮ್ ದರದಾನೀ । ತದರದಾನಿತನನನನನ ‖ ಪಲ್ಲ ‖
ಸರಿಗಾಸರಿಗಾಗರಿಮಾಗಾ । ಗರಿಗಗಮಮಪಪ ।
ನಿಧಪಮ ಗರಿಸಾ । ಧಿರಕಿಟತಾ । ಧಿರಕಿಟತಾ । ಧಿರಕಿಟತಾ ।
ಧಿತ್ತಿಲಾನ್ ಧಿತ್ತಿಲಾನ್ ‖ ೧ ‖

ವೃತ್ತ| **ಜನುಮದೊಳಿಂತದೇಂ ಕಪಟವೆಂಬುದನನ್ನರಿದಿಲ್ಲದಾ ಸರಳ್|**
**ಮನಸಿನ ವನ್ಯೆಯಾಡ್ಡನುಡಿ ನಂಬಲಿಬಾರದು ಬಾಲ್ಯದಿಂದೆ ವಂ ||**
**ಚನೆಗೊಳಿಸಲ್ಕೆ ತಮ್ಮ ಕುಲವಿದ್ಯೆಯದೆಂದುರೆಗಲ್ತ ರಾಡ್ಡಭಾ |**
**ಷಣ ನಿಜವೆಂದು ನಾವ್ ತಿಳಿಯಬೇಕಿದು ಈತನ ಯುಕ್ತಿ ಕೇಳಿರೈ ||**

**ಅರಸು**—ಹೇ ಸತ್ಯವಾದಿನ್, ತಾವೆಂಬುವದು ನಿಜ ನಾವು ಅಂಥವರೇ ಅಹುದು. ಆದರೂ ಇವಳನ್ನು ವಂಚನೆಗೊಳಿಸಿದಲ್ಲಿ ನಮಗೇನು ಪ್ರಾಪ್ತಿಯಾಗಬೇಕಾಗಿದೆ ?

**ಶಾರ್ಙ್ಗರವ**—ಅಧಃಪಾತವೇ ! ಮತ್ತೇನಾಗಬೇಕಾಗಿದೆ. ?

**ಅರಸು**—ಪೌರವರಿಗೆ ಅಧಃಪಾತವಾದೀತೆಂಬುವದು ಮಿಥ್ಯ.

**ಶಾರದ್ವತ**—ಎಲೊ ಶಾರ್ಙ್ಗರವ, ಇಂಥ ಒಣಮಾತುಗಳಿಂದ ಏನು ಪ್ರಯೋಜನ? ಗುರುಗಳಾಜ್ಞೆಯೆಷ್ಟೋ ಅಷ್ಟು ನಾವು ಮಾಡಿದೆವು. ಇವಳು ಹೆಂಡತಿ, ಆತನು ಗಂಡನು; ಇಬ್ಬರ ದರ್ಶನವಾಯಿತು. ನಡೆ ಇನ್ನು ನಾವು ತಿರುಗುವ. ಇವರು ಬೇಕಾದದ್ದು ಮಾಡಿಕೊಳ್ಳಲಿ. ಹೇ ರಾಜನ್, ನಾನು ಇನ್ನೊಂದೇ ಮಾತು ಹೇಳುತ್ತೇನೆ ಕೇಳು.

ಕಂದ|| **ಈಕೆಯು ನಿನ್ನಯ ಕಾಂತೆಯು |**
**ಬೇಕಾದರೆ ಸಾಕು ನೂಕು ಸಾಕಾದರೆ ನಾ- ||**
**ವ್ಯಾಕಿದರೋಳ್ಗೊಗುವೆವು ಮ |**
**ತ್ತೇಕ ಪ್ರಭುತ್ವಮಲ್ಲವೇ ಸತಿಯೊಳ್ ಪತಿಯ ||**

**ಗೌತಮಮ್ಮ**—ನಡೆ ಇನ್ನು. ( ಎಲ್ಲರೂ ಹೋಗಲಾರಂಭಿಸುತ್ತಾರೆ. )

**ಶಕುಂ**—ಈ ಮೋಸಗಾರನಂತೂ ನನ್ನನ್ನು ಠಕ್ಕಿಸಿದನು. ಇನ್ನು ನೀವೂ ನನ್ನನ್ನು ಬಿಟ್ಟು ಹೋಗುತ್ತೀರಾ? ( ಎಂದು ಅಳುತ್ತ ಬೆನ್ನ ಹತ್ತುತ್ತಾಳೆ. )

**ಗೌತಮಮ್ಮ**—( ಹಿಂದಿರುಗಿ ) ವತ್ಸ ಶಾರ್ಙ್ಗರವ, ನೋಡಿದೆಯಾ. ಶಕುಂತಲೆಯು ಕರುಣಸ್ವರದಿಂದ ದುಃಖಿಸುತ್ತ ನಮ್ಮ ಹಿಂದೆ ಹಿಂದೆ ಬರುತ್ತಾಳೆ. ಅಯ್ಯೋ! ಇವಳ ಪತಿಯು ಪಾಷಾಣಹೃದಯನಾದನಲ್ಲ! ಇನ್ನೇನು ಮಾಡೀತು ನನ್ನ ಕಂದಮ್ಮ !

**ಶಾರ್ಙ್ಗರವ**—( ಸಿಟ್ಟಿನಿಂದ ) ಏನೇ ಗಯ್ಯಾಳಿ, ಮನಸಿಗೆ ಬಂದಂತೆ ಆಚರಣೆ ಮಾಡಲಾರಂಭಿಸಿದೆಯಾ? ತಿರುಗು ಹಿಂದಕ್ಕೆ! ತಿರುಗು ಹಿಂದಕ್ಕೆ.

**ಶಕುಂ**—( ಅಂಜಿ ಗದಗದ ನಡುಗುತ್ತಾಳೆ. ) ನೀವು ಹ್ಯಾಗೆ ಹೇಳುತ್ತೀರಿ ಹಾಗೆ ಕೇಳುತ್ತೇನೆ.

**ಶಾರ್ಙ್ಗರವ**—ಅಮ್ಮಾ, ಹಾಗಲ್ಲ ಕೇಳು.

॥ ದ್ರುತವಿಲಂಬಿತ ವೃತ್ತ ॥

**ನೃಪತಿಯಾಡ್ವುದು ನೈಜಮಿರಲ್ಕೆ ನೀಂ ।**
**ಕುಪಿತನಾಗನೆ ಬಂದೊಡೆ ತಾತನು- ।**
**ತ್ತಪರ ದೃಷ್ಟಿಗೆ ಹೇಸದೆ ಪೇಳ್ದವೋಲ್ ।**
**ಸ್ವಪತಿಯಾದೊಡೆ ಇಲ್ಲಿರುದಾಸಿಯೊಲ್ ॥ ೧ ॥**
**ಇತರ ಯೋಚನೆ ಬೇಡವೆ ನೀ ಶುಚಿ ।**
**ವ್ರತಗಳನ್ನರಿದಂಜುವದೇಕೆ ಮೇಣ್ ॥**
**ಮತಿಯು ಶುದ್ಧಮಿರಲ್ ಮನೆಯಾಳಿಯೋಲ್ ।**
**ಪತಿಯ ಬಾಗಿಲದೋಳಿಹುದುತ್ತಮಂ ॥ ೨ ॥**

ಆದಕಾರಣ ನೀನು ಇಲ್ಲಿರು. ನಾವು ಹೋಗುತ್ತೇವೆ.

**ಅರಸು**—ಹೇ ತಪಸ್ವಿಗಳೇ, ಅವಳನ್ನು ಬರಿದೆ ಆಶೆಗೆ ಹಚ್ಚಿ ಯಾತಕ್ಕೆ ಬಿಟ್ಟು ಹೋಗುತ್ತೀರಿ? ನೀವು ಬಿಟ್ಟು ಹೋದರೆ ನಾನು ಅವಳನ್ನು ಸ್ವೀಕರಿಸೇನೆಂದು ತಿಳಿದಿರುವಿರೋ? ಹಾಗೆಂದಿಗೂ ಆಗದು.

ಕಂದ ॥ **ಕುಮುದವ ತಿಳಿಯೆ ಶಶಾಂಕಂ ।**
**ಕಮಲವ ಸವಿತನರಳಿಸುವದುಂಟಳಿಯೊಳ್ ಬ ॥**
**ಲ್ಲಮನುಜರಿವರೊಲ್ ಮನವಂ ।**
**ದಮನಸಿಹರ್ಪರ ಕಾಮನಿಗೆ ಪರಾಙ್ಮುಖರ್ಕೈ ॥**

**ಶಾರ್ಙರವ**—ಮೊದಲು ಮಾಡಿದಂಥ ನಿನ್ನ ಕೃತಿಯನ್ನು ನೀನೇ ಈಗ ಅನ್ಯ ಸಂಗತಿಯಿಂದ ಮರೆತು ಬಿಟ್ಟಿ. ಇಂಥವನಿಗೆ ಅಧರ್ಮಕ್ಕೆ ಹೆದರುವವನೆಂದು ಹ್ಯಾಗೆನ್ನಬೇಕು?

**ಅರಸು**—( ಪುರೋಹಿತರಿಗೆ ) ಸ್ವಾಮಿನ್, ತಮ್ಮ ಮತ ಹ್ಯಾಗೆ ಇದಕ್ಕೆ?

|| ಕಂದ ||

**ನಾನೇ ಮೂಢನೊ ಅಥವಾ |**
**ಮೊನಾಕ್ಷಿಯು ಮಾತು ಮಿಥ್ಯವೋ ಸಂಶಗ ವಿಹಿ ||**
**ತೋ ನಿಜದಾರ ತ್ಯಾಗಂ |**
**ಏನೀ ಪರವೆಣ್ಮುಟ್ಟುವ ತಮವೋ ಪೇಳ್ವೈ || ೧ ||**

**ಪುರೋಹಿತ**— ( ಧ್ಯಾನಿಸಿಕೊಂಡು ) ಹಾಗಾದರೆ ಹೀಗೆ ಮಾಡತಕ್ಕದ್ದು.

**ಅರಸು**—ಹ್ಯಾಗೆ ಮಾಡತಕ್ಕದ್ದು? ಆಜ್ಞಾಪಿಸಬೇಕು.

**ಪುರೋಹಿತ**—ಈ ಸ್ತ್ರೀಯು ಪ್ರಸೂತಳಾಗುವ ಪರ್ಯಂತ ನಮ್ಮ ಮನೆಯಲ್ಲಿರಬೇಕು. ಯಾಕಂದರೆ ಪೂರ್ವದಲ್ಲಿ ತಮಗೆ ಭಗವದ್ಭಕ್ತರು ಚಕ್ರವರ್ತಿ ಪುತ್ರನ ಪ್ರಾಪ್ತಿಯಾಗಲೆಂದು ಆಶೀರ್ವಚನವನ್ನು ಕೊಟ್ಟಿರುತ್ತಾರೆ. ಇವಳಿಗೆ ಅಂಥ ಲಕ್ಷಣವುಳ್ಳ ಪುತ್ರನಾದನಂತೆ ತಾವು ಅಂತಃಪುರದಲ್ಲಿ ಇವಳನ್ನು ಇಟ್ಟುಕೊಳ್ಳತಕ್ಕದ್ದೇ ಸರಿ; ಮತ್ತೆ ಅಂಥ ಲಕ್ಷಣವುಳ್ಳ ಮಗನನ್ನು ಪಡೆಯದೆ ಹೋದಳಂತೆ ಆ ಪಕ್ಷದಲ್ಲಿ ಅವಳು ತನ್ನ ಋಷಿಗಳಾಶ್ರಮಕ್ಕೆ ತಿರುಗಿ ಹೋಗುವದೇ ಯೋಗ್ಯ.

**ಅರಸು**—ತಮ್ಮ ಚಿತ್ತಕ್ಕೆ ಹ್ಯಾಗೆ ಬರುತ್ತದೊ ಹಾಗೆ ಆಗಿಕೊಳ್ಳಲಿ.

**ಪುರೋಹಿತ**—( ಶಕುಂತಲೆಗೆ ) ಅಮ್ಮ, ನನ್ನ ಸಂಗಡ ಬನ್ನಿ.

**ಶಕುಂ**—ಹೇ ಮಾತೇ, ! ಭಗವತೀ, ! ವಸುಂಧರೆ, ! ನನ್ನನ್ನು ಹೊಟ್ಟೆಯಲ್ಲಿ ತೆಗೆದುಕೊಳ್ಳಬಾರದೆ? ( ಎಂದು ರೋದನವನ್ನು ಮಾಡುತ್ತ ಪುರೋಹಿತನ ಸಂಗಡ ಹೋಗಲಾರಂಭಿಸುತ್ತಾಳೆ. ತಪಸ್ವಿಗಳೂ ಹೊರಟು ಹೋಗುತ್ತಾರೆ. )

**ಅರಸು**—( ಬ್ರಾಹ್ಮಶಾಪದಿಂದ ಸ್ಮೃತಿಯು ಆಚ್ಛಾದಿತವಾದುದರಿಂದ ಶಕುಂತಲೆಯ ವಿಷಯವಾಗಿ ಚಿಂತಿಸುತ್ತಿರುತ್ತಾನೆ.) ( ತೆರೆಯಲ್ಲಿ) ಶಬ್ದವಾಗುತ್ತದೆ. ಏನಾಶ್ಚರ್ಯವಯ್ಯಾ ! ಏನಾಶ್ಚರ್ಯವಿದು !

**ಅರಸು**—ಏನದು?

( ಪುರೋಹಿತನು ಬರುತ್ತಾನೆ. )

**ಪುರೋಹಿತ**—( ವಿಸ್ಮಯದಿಂದ ) ಮಹಾರಾಯಾ, ಮಹಾ ಅದ್ಭುತವಾದ ಮಾತಾಯಿತು!

**ಅರಸು**—ಏನು ಸ್ವಾಮಿಾ ಅದು?

**ಪುರೋಹಿತ**—ಆ ಕಣ್ವಋಷಿಶಿಷ್ಯರು ಹೊರಟು ಹೋದ ಕ್ಷಣವೆ ಆ ಸ್ತ್ರೀಯು ಬಹು ಆಕಾಂತವನ್ನು ಮಾಡಿಬಿಟ್ಟಳು.

ಕಂದ || **ಮುತ್ತಿನ ಸರ ಕಿತ್ತೊಗೆದಳ್ |**
**ಮೊತ್ತಣವೆಣ್ ಕಣ್ಮುತ್ತು ಸುರಿಸುತ್ತತ್ತಳ್ ಮುಂ |**
**ಗುತ್ತಿಗೆಯೊತ್ತಿ ಬರಲ್ ನಿ- |**
**ನ್ನುತ್ತಮ ನಾಮವನೊತ್ತಿ ಒದರಿ ಮೂರ್ಛಿಸಿದಳ್ ||೧||**

**ಅರಸು**—ಮುಂದೇನಾಯಿತು ಸ್ವಾಮಿ?

**ಪುರೋಹಿತ**—

ಕಂದ || **ಆಗಲು ಕಾಮಿಸಿಂಚಿನವೋ- |**
**ಲಾಗಸದಿಂದೋರ್ವಳ್ ಬಂದೆತ್ತಿದಳವಳಂ ||**
**ಬೇಗದಿ ಬಿಗಿದಳ್ ಮೇಲತಿ |**
**ವೇಗದಿನಪ್ಸರೆಯರ ತೀರ್ಥದಿ ಮುಳುಗಿದಳೈ || ೧ ||**

( ಕೇಳಿ ಎಲ್ಲರೂ ಆಶ್ಚರ್ಯಹೊಂದುತ್ತಾರೆ. )

**ಅರಸು**—ಭಗವನ್, ಮೊದಲೇ ಈ ಮಾತಿನ ನಿರಾಕರಣೆಯನ್ನು ನಾವು ಮಾಡಿಬಿಟ್ಟದ್ದೇವೆ. ಇನ್ನು ಮೇಲೆ ಆ ಮಾತು ಯಾತಕ್ಕೆ? ಬಿಟ್ಟುಬಿಡಿ.

**ಪುರೋಹಿತ**—ಒಳ್ಳೇದು; ಹಾಗಾದರೆ. ನಾವು ಮನೆಗೆ ಪ್ರಯಾಣ ಮಾಡುತ್ತೇವೆ.

**ಅರಸು**—ಒಳ್ಳೇದು.

**ಪುರೋಹಿತ**—ವಿಜಯಸ್ವ ( ಹೊರಟು ಹೋಗುತ್ತಾನೆ.)

**ಅರಸು**—ಎಲೆ ವೇತ್ರವತಿ, ಬಹುಶ್ರಮವಾಗಿದೆ. ಶಯ್ಯಾಮಂದಿರಕ್ಕೆ ಹೋಗುವ ದಾರೀ ತೋರು.

**ವೇತ್ರವತಿಕೆ**—ಹೀಗೆ ಬನ್ನಿರಿ ( ನಡೆಯಲಾರಂಭಿಸುತ್ತಾಳೆ. )

**ಅರಸು**—( ನಡೆಯುತ್ತ ತನ್ನೊಳಗೆ )

ಕಂದ॥ **ಮುನಿತನಯಳ ಕೂಡೆನ್ನಯ।**
**ಕನಸಿಲಿ ಸಹ ಮದುವೆಯಾದುದಂ ನಾಂ ಸ್ಮರಿಸೆಂ॥**
**ಮನಸುರೆ ಹಳಹಳಿಸುವದಿಂ।**
**ತನುಭವಿತ ಮಾತಿಗೆ ಸಾಕ್ಷಿಯ ನುಡಿವುದೇನೈ॥**

( ಹೊರಟು ಹೋಗುತ್ತಾನೆ. )

**ಐದನೆಯ ಅಂಕವು ಮುಗಿದುದು.**



# ೬ನೆಯ ಅಂಕವು.

## ಪ್ರವೇಶಕವು.

( ಶಹರದ ಕೊತವಾಲನೂ, ಹೆಡಮುರಿಗೆ ಬಿಗಿಯಲ್ಪಟ್ಟ ಒಬ್ಬ ಮೀನಗುಲಿಯನ್ನು ತೆಗೆದುಕೊಂಡು ಇಬ್ಬರು ಸಿಪಾಯರೂ ಬರುತ್ತಾರೆ. )

**ಸಿಪಾಯಿ**—( ಮೀನಗುಲಿಗೆ ತಾಡನವನ್ನು ಮಾಡಿ ) ತುಡುಗ ಬಡ್ಡೀ ಮಗನೆ, ಬೊಗಳು ಬೇಗ; ಈ ರತ್ನಖಚಿತವಾದ ರಾಜಮುದ್ರಿಕೆಯು ನಿನ್ನ ಹತ್ತರ ಹ್ಯಾಗೆ ಬಂತು?

**ಮೀನಗುಲಿ**—( ಭಯಪಟ್ಟು ) ಓ, ಬಡೀ ಬ್ಯಾಡವ!

**ಸಿಪಾಯಿ**—( ಮತ್ತೂ ನಾಲ್ಕೈದು ಪೆಟ್ಟು ಗುದ್ದುತ್ತಾನೆ. )

**ಮೀನಗುಲಿ**—ಎಲಿ ಇವನ! ಸುಮನ ನನ್ಯಾಕ ಬಡೂತೀಯೋ ನಿನ ಮಂಜಾಳ ಹೋಗಲಿ!

**ಸಿಪಾಯಿ**—( ಮತ್ತೂ ಗುದ್ದಿ ) ಬಡ್ಡೀ ಮಗನೇ, ಈ ಉಂಗುರ ನಿನ್ನ ಹತ್ತರ ಹ್ಯಾಗೆ ಬಂತು; ಕಿವಿ ಕೇಳುವದಿಲ್ಲವೇ?

**ಮೀನಗುಲಿ**—ಆಗ ಹೇಳಾಕಿಲ್ಲೇನಪಾ; ಸುಮ್ಮನ ದುಪು ದುಪು ದನ ಬಡಧಾಂಗ ಬಡದರ ಯಾತಕ ಬಂತಾ!

**ಸಿಪಾಯಿ**—( ಮತ್ತೂ ಗುದ್ದಿ ) ತುಡುಗ ಸೂಳೀ ಮಗನೆ, ಮತ್ತೂ ಹಾಳು ರಗಳೆ ಹಚ್ಚಿದ್ದಾನೆ, ಬೊಗಳು ಬೇಗ.

**ಮೀನಗುಲಿ**—ಅಪ್ಪೋ, ನಾ ತುಡುಗ ಮಾಡಿಲ್ಲ ಕಾಣವ! ಯರ್ತ ಬಡಿಬ್ಯಾಡ.

**ಸಿಪಾಯಿ**—ಕಳ್ಳ ತಾಯಿಗಂಡ; ನೀನು ದೊಡ್ಡ ಬ್ರಾಹ್ಮಣನೆಂದು ದೊರೆಗಳವರು ದಾನ ಮಾಡಿದ್ದಾರೋ? ( ಮತ್ತೂ ಬಡಿಯುತ್ತಾನೆ. )

**ಮೀನಗುಲಿ**—ನಿಂತಾರ ನಿಲ್ಲೊ ನಿನ್ನ ಮಂಜಾಳ ಹೋಗಲಿ! ಕವವ! ಮತ್ತು ಬಡೂತಾನು! ಅಪ್ಪೋ, ಶಕರಾವತಾರ ಥೇತ್ರದ ಮೀನಗುಲಿ ಅದೇನ ಕಾಣವ, ನಾ ಯಾಕ ತುಡುಗ ಆಗಲಿ?

**ಎರಡನೆಯ ಸಿಪಾಯಿ**— (ಒಂದೇಟು ಗುದ್ದಿ) ಬಡ್ಡೀ ಮಗನೆ, ನಿನ್ನ ಜಾತಿ ಕುಲಾಚಾರ ಕೇಳುತ್ತೇವೇ ನಾವು ?

**ಕೊತವಾಲ**—ಎಲೋ ಜಾನುಕಾ, ಸೂಚಕಾ, ಆತನು ಹೇಳುವದೆಲ್ಲ ಚನ್ನಾಗಿ ಕೇಳಿಕೊಳ್ಳಿ, ಮೊದಲು.

**ಸಿಪಾಯಿ**—ಮಹಪ್ರಾಜ್ಞ. ನಾವು ಮಾತೇ ಆಡುವದಿಲ್ಲ. ಆತನು ಯಾವತ್ತು ವೃತ್ತಾಂತವನ್ನು ನಿಜವಾಗಿ ಮಾತ್ರ ಹೇಳಬೇಕು.

**ಕೊತವಾಲ**—(ಮೀನಗುಲಿಗೆ) ಒಳ್ಳೇಯದು, ಮುಂದೆ.

**ಮೀನಗುಲಿ**—ನಾ, ದೇವರು, ದಿನಾ ಬೆಳಗಿಲೆ ಎದ್ದ ಕ್ಯಾಸ ಜಾಳಗಿ ತಗೊಂಡ ಶಕಲಾವತಾರ ಚೇತರದಾಗ ಮೀನಾ ಹಿಡದ ಹೆಂಡರ ಮಕ್ಕಳ ಹೊಟ್ಟಿಗೆ ಹಾಕತಿರತೇನ್ರಿ.

**ಕೊತವಾಲ**—(ನಗುತ್ತ) ಒಳ್ಳೇ ಪವಿತ್ರವಾದ ವ್ಯವಹಾರವನ್ನು ಮಾಡುತ್ತಿ.

**ಮೀನಗುಲಿ**—ದ್ಯಾವರು, ನನಗ ನಗಬಾರದರಿ ಬುದ್ಧೀ; ಅಜ್ಜ ಆರ ತೆಲಿ ಮುತ್ಯಾ ಮೂರತೆಲಿ ಇದೇ ವ್ಯಾಪಾರೇವ ಮಾಡತ ಬಂದೀವರಿ; ಅದ ಹ್ಯಾಂಗ ಬಿಡಾಕ ಬರತೈತಿ ? ಜೀವಾ ಕೊಲ್ಲವಗೇನ ಅಂತಕ್ಕಣ್ಣಾ ಇರಾಣಿಲ್ರೇ ? ಕಾಣಾ ಪಟ್ಟಿ ಹಾರೂರು ಯಗ್ನಾ ಮಾಡುವಾಗ ಕುರಿ ಕೊಲ್ಲಾಣಿಲ್ರೇ ಗುದ್ದಿ ಗುದ್ದಿ ಕ್ಯಾಸಿ ? ಹಾಂಗ ನಮ್ಮ ಹ್ವಾರೆವತಿರಿ, ನನ್ನ ಒಡ್ಯಾ.

**ಕೊತವಾಲ**—ಒಳ್ಳೇದು ಮುಂದೆ.

**ಮೀನಗುಲಿ**—ಒಂದು ದಿನ, ನನ್ನ ಒಡ್ಯಾ, ಆ ಹೊಳ್ಯಾಗ ರೋಹಿತ ಜಾತೀ ಮೀನ ಸಿಕ್ಕಿತರಿ. ಸಿಗಾಣಾ ಅದನ್ನ ಮನೀಗೆ ತಂದಕ್ಯಾಸಿ ಕೊಯ್ಯೋ ಹೊತ್ತಿನಾಗ ಕದರ ಹೊಟ್ಯಾಗ ಈ ಉಂಗರ ಹೊಂಟಿತರಿ ನನ್ನ ಒಡ್ಯಾ, ಹಾಂಗ ನಾ ಇದನ್ನ ಮಾರಬೇಕಂತ ಪ್ಯಾಟ್ಯಾಗ ಹೋಗತಿದ್ನ್ಯ; ದಾರ್ಯಾಗ ಈ ಅಪಗೋಳ ಗಂಟಬಿದ್ದ ನನ್ನ ದನ ಬಡದಹಾಂಗ ಬಡದ ನಿನ್ನ ಪಾದಕ ತಂದೂದಾರ, ನನ್ನ ಒಡ್ಯಾ. ಇದ್ದದ್ದ ನಾ ಕರೇ ಹೇಳತೀನ್ರಿ. ಇದರಮ್ಯಾಗ ದಣೇರ ನದರಿಗೆ ಹ್ಯಾಂಗ ಬರತತಿ ಹಾಂಗ ಮಾಡಬೇಕರಿ.

**ಕೊತವಾಲ**—ಎಲೋ ಜಾನುಕಾ, ಗೋಧಾದಿ ಮತ್ಸ್ಯ ಜಾತಿಗಳ ಹೊಟ್ಟೆಯಲ್ಲಿ ಇಂಥ ವಸ್ತುಗಳು ಸಿಗುವದುಂಟು. ಹಾಗೂ ಈ ಉಂಗುರಕ್ಕೆ

ಮೀನದ ವಾಸನೆ ಬರುತ್ತದೆ. ಈ ಮನುಷ್ಯನು ಮೀನಗಾರನಾಗಿದ್ದಾನೆ. ಆದರೆ ಈ ಮಾತಿನ ವಿಚಾರಣೆ ಚೆನ್ನಾಗಿ ಆಗಬೇಕಾಗಿರುತ್ತದೆ. ಕಾರಣ ದೊರೆಗಳವರ ಓಲಗಕ್ಕೆ ಈತನನ್ನು ತೆಗೆದುಕೊಂಡು ಹೋಗುವ.

**ಜಾನುಕ**—ಒಳ್ಳೇದು ನಡಿಯೊ ಕಳ್ಳ ಸೂಳೇಮಗನೆ.

( ಎಲ್ಲರೂ ಮುಂದಕ್ಕೆ ನಡೆಯುತ್ತಾರೆ. )

**ಕೊತವಾಲ**—ಎಲೋ ಸೂಚಕಾ, ಎಲೋ ಜಾನುಕಾ, ನೀವು ಇಲ್ಲಿಯೇ ಮಹಾದ್ವಾರದಲ್ಲಿ ಈತನನ್ನು ಹಿಡಿದುಕೊಂಡು ನಿಲ್ಲಿರಿ. ನಾನು ದರಬಾರಿನಲ್ಲಿ ಹೋಗಿ ಈ ಎಲ್ಲ ಸಂಗತಿಯನ್ನು ಮಹಾರಾಯರ ಮುಂದೆ ವಿಜ್ಞಾಪಿಸಿ ಏನೆಂಬುವದನ್ನು ಆಜ್ಞೆ ತೆಗೆದುಕೊಂಡು ಬರುತ್ತೇನೆ.

**ಸಿಪಾಯಿಗಳು**—ಒಳ್ಳೇದು ತಾವು ಹೋಗಬೇಕು, ದೇವರು. ಇನಾಮು ದೊರಕಿಸಲಿಕ್ಕೆ ನಾವು ಈತನನ್ನು ಹಿಡಿದುಕೊಂಡು ನಿಲ್ಲುತ್ತೇವೆ. ( ಕೊತವಾಲನು ಆ ಮುದ್ರಿಕೆಯನ್ನು ತೆಗೆದುಕೊಂಡು ಒಳಗೆ ಹೋಗುತ್ತಾನೆ. )

**ಸೂಚಕ**—ಎಲೋ ಜಾನುಕಾ, ಕೊತವಾಲ ಸಾಹೇಬರು ಹೋಗಿ ಬಹಳ ಹೊತ್ತಾಯಿತು. ಇನ್ನೂ ಏನು ಕಾರಣ ಬರಲಿಲ್ಲ ?

**ಜಾನುಕ**—ಅವಕಾಶ ನೋಡಿಕೊಂಡು ಅರಸರ ಕಿವಿಯ ಮೇಲೆ ವರ್ತಮಾನ ಹಾಕಬೇಕಾಗುತ್ತದೆ. ರಾಜರಿಗೆ ಇದು ಒಂದೇ ಕಾರ್ಯವೆ? ಅನೇಕ ಕಾರ್ಯಗಳಿರುತ್ತವೆ ಪ್ರತಿನಿತ್ಯದಲ್ಲಿ.

**ಸೂಚಕ**—ಜಾನುಕಾ, ಈತನ ಕೊರಳಲ್ಲಿ ಕಣಗಿಲ ಮಾಲೆ ಹಾಕಬೇಕೆಂದು ನನ್ನ ಕೈಗಳು ಹಾತೊರೆಯುತ್ತವೊ; ಇವನಿಗೆ ಸೂಲಕ್ಕೆ ಹಾಕಿದರೆ ನೆಟ್ಟಗಾದೀತು.

**ಮೀನಗುಲಿ**—ಸಿಪಾಯಪ್ಪಾ, ಅನ್ಯಾವ ಇಲ್ದೆ ನನ್ನ ಕೊಲ್ಲಬ್ಯಾಡವ ನಾ ನಿನಗೇನ ಮಾಡಿದೇನಂತ ಡಾವೀ ಸಾರತಿ?

**ಜಾನುಕ**—ಕೊತವಾಲ ಸಾಹೇಬರು ಬರುತ್ತಾರೆ. ಕೈಯಲ್ಲಿ ರಾಜಾಜ್ಞೆಯ ಕಾಗದವು ಕಾಣಿಸುತ್ತದೆ. ( ಮೀನಗುಲಿಗೆ ) ನೀನು ಹದ್ದು ಕಾಗೆಗಳ ಆಹಾರವಾಗುತ್ತೀಯೊ ಅಥವಾ ನರಿನಾಯಿಗಳ ಬಾಯಲ್ಲಿ ಬೀಳುತ್ತೀಯೊ ಹೇಳು ನೋಡುವ.

( ಕೊತವಾಲನು ಬರತ್ತಾನೆ. )

**ಕೊತವಾಲ**—ಸೂಚಕಾ, ಹೋಗಲಿ ಬಿಟ್ಟುಬಿಡು ಆತನನ್ನು, ವಿಚಾರಿಸಲಾಗಿ ಆ ಉಂಗುರವು ಇವನ ಕೈಯಲ್ಲಿ ಹ್ಯಾಗೆ ಬಂತೆಂಬುದು ಇವನು ಹೇಳುವಂತೆ ನಿಜವಾಯಿತು.

**ಸೂಚಕ**—ಧನಿಯರಾಜ್ಞೆ, ನಮಗೇನು !

**ಜಾನುಕ**—ಈ ಮುಂಡೇ ಮಗನು ಯಮನ ತಲೆಬಾಗಿಲದಲ್ಲಿ ಕಾಲಿಟ್ಟು ಮತ್ತೆ ಹಿಂತಿರುಗಿ ಬಂದು ಬಿಟ್ಟನು. ( ಮೀನಗುಲಿಯ ಹೆಡಮುರಿಗೆ ಬಿಚ್ಚಿ ಬಿಡುತ್ತಾರೆ. )

**ಮೀನಗುಲಿ**—( ಕೊತವಾಲನಿಗೆ ಮುಜರೆ ಮಾಡಿ ) ಹ್ಯಾಂಗ ನನ್ನ ಒಡ್ಯಾ; ನನ್ನ ಹ್ವಾರೇವ ಹ್ಯಾಂಗsತಿರಿ ?

**ಕೊತವಾಲ**—ಮಗನೆ, ಕೇಳುತ್ತಿಯೇನು ! ಮೇಲಾಗಿ ದೊರೆಗಳವರು ಉಂಗುರದ ಬೆಲೆಯ ದ್ರವ್ಯವನ್ನು ನಿನಗೆ ಕೊಟ್ಟಿದ್ದಾರೆ ತೆಗೆದುಕೋ ( ಎಂದು ಆತನ ಪದರಿನಲ್ಲಿ ದ್ರವ್ಯವನ್ನು ಸುರುವುತ್ತಾನೆ. )

**ಮೀನಗುಲಿ**—( ಮುಜರೆ ಮಾಡಿ ದ್ರವ್ಯವನ್ನು ತೆಗೆದುಕೊಳ್ಳುತ್ತಾನೆ.) ದೊರೆಗೋಳು ಬಾಳ ಬಾಳ ದಯ ಮಾಡಿದರಿ ಬಡವನ ಮ್ಯಾಗ.

**ಸೂಚಕ**—ದಯಮಾಡುವದೆಂದರೆ ಇದಕ್ಕೇಅನ್ನತಕ್ಕದ್ದು. ಸೂಲದ ಮೇಲಿಂದ ತೆಗೆದು ಆನೆಯ ಅಂಬಾರಿಯಲ್ಲಿ ಕುಳ್ಳಿರಿಸಿದರು.

**ಜಾನುಕ**—ದೇವರು, ಈ ಮೀನಗುಲಿಗೆ ಇಷ್ಟು ದ್ರವ್ಯವನ್ನು ಒಮ್ಮೆಲೆ ಇನಾಮು ಕೊಡಬೇಕಾದರೆ ಮಹಾರಾಯರಿಗೆ ಈ ಉಂಗುರವು ಒಳ್ಳೇ ಚೆನ್ನಾಗಿ ಕಂಡಿರಬಹುದು.

**ಕೊತವಾಲ**— ಉಂಗುರದ ಬೆಲೆ ಬಹಳೆಂದು ಈತನಿಗೆ ಇಷ್ಟು ದ್ರವ್ಯ ಕೊಟ್ಟಂತೆ ಕಾಣುವದಿಲ್ಲ. ಅದನ್ನು ನೋಡಿ ಅವರಿಗೆ ಅತಿ ಪ್ರಿತ್ಯಾಸ್ಪದ ರಾದಂಥವರ ಸ್ಮರಣೆಯಾಗಿರಬಹುದೆಂದು ಕಾಣಿಸುತ್ತದೆ. ಮಹಾರಾಯರು ಒಳ್ಳೇ ಗಂಭೀರವಾದ ಮನಸ್ಸುಳ್ಳವರು. ಅವರ ಮನಸ್ಸಿನಲ್ಲಿ ಈಹೊತ್ತಿನಲ್ಲಿ ಹೀಗೆಯೇ ಬಂದಿದೆ ಎಂದು ಯಾರಿಗೂ ತಿಳಿಯಗೊಟ್ಟವರಲ್ಲ. ಆದಾಗ್ಯೂ ಮುದ್ರಿಕೆಯನ್ನು ನೋಡಿದ ಕ್ಷಣವೇ ಒಂದು ಗಳಿಗೆ ಪರ್ಯಂತ ಸುಮ್ಮನೆ ಚಿಂತೆಯಲ್ಲಿ ಮಗ್ನರಾಗಿ ಕೂತುಕೊಂಡಿದ್ದರು.

**ಸೂಚಕ**—ಹಾಗಾದರೆ, ದೇವರು, ತಾವು ಈವೊತ್ತು ಒಂದು ಮಹ ದ್ರಾಜಕಾರ್ಯವನ್ನೇ ಸಾಧಿಸಿದ ಹಾಗಾಯಿತು.

**ಜಾನುಕ**--ರಾಜಕಾರ್ಯಕ್ಕಿಂತಲೂ ಈ ಮೀನಗುಲಿ ಮಗನ ಕಾರ್ಯ ವನ್ನು ಸಾಧಿಸಿದ ಹಾಗಾಯಿತು. ( ಎಂದು ಮಾತ್ಸರ್ಯಯುಕ್ತನಾಗಿ ವಕ್ರ ದೃಷ್ಟಿಯಿಂದ ನೋಡಿ ಗೋಣು ಹಾಕುತ್ತಾನೆ. )

**ಮೀನಗುಲಿ**—ನನ್ನ ತಂದಿಗೋಳಿರ್ಯಾ, ಇದರಾನ ಅರ್ಧಾ ನಿಮ್ಮದತಿ. ದಯಮಾಡಿ ತೊಗೊಂಡಕ್ಯಾಸಿ ನನ್ನ ಬಿಡಬೇಕರಿ.

**ಜಾನುಕ**—ಈ ಮಾತು ಸರಿಯಾದದ್ದೆ.

**ಕೊತವಾಲ**—ಎಲೋ ಮೀನಗುಲಿ, ನೀನು ಒಳ್ಳೇ ದೊಡ್ಡ ಮನುಷ್ಯ ನಾಗಿ ಕಾಣಬರುತ್ತೀ. ಕಾರಣ ಈವೊತ್ತಿನಿಂದ ನೀನು ನಮ್ಮ ಗೆಳೆಯನಾದೆ. ಆದರೆ ಆಕಾಶಗಂಗೆಯ ಸಾಕ್ಷಿಯಿಂದ ಈ ಮೈತ್ರಿಯು ನಿಜವಾಗಬೇಕಾಗಿರು ತ್ತದೆ. ಕಾರಣ ಗಡಂಗಕ್ಕೆ ಹೋಗೋಣ ನಡಿ.

**ಎಲ್ಲರು**—ನಡೆಯಿರಿ ಹಾಗಾದರೆ. ( ಎಂದು ಎಲ್ಲರೂ ಹೊರಟು ಹೋಗುತ್ತಾರೆ. )

( ಇದು ಪ್ರವೇಶಕವು. )

( ಆಮೇಲೆ ಸಾನುಮತಿ ನಾಮಕಳಾದ ಅಪ್ಸರಸ್ತ್ರೀಯು ಬರುತ್ತಾಳೆ. )

**ಸಾನುಮತಿ**—ಅಪ್ಸರಸ್ ತೀರ್ಥದಲ್ಲಿ ಸಾಧು ಜನರ ಸ್ನಾನವಾಗುವ ಪರ್ಯಂತ ಅಲ್ಲಿರತಕ್ಕದ್ದು ಇವತ್ತಿನ ಬಾರಿ ನನ್ನದಿತ್ತು. ಆ ಕೆಲಸವಂತೂ ನಾನು ತೀರಿಸಿದೆ. ಇನ್ನು ಮೇಲೆ ಈ ರಾಜರ್ಷಿಯ ವೃತ್ತಾಂತವೇನೆಂಬುದನ್ನು ನೋಡುವ. ಮೇನಕೆಯ ಸಂಬಂಧದಿಂದ ನೋಡಲಾಗಿ ಶಕುಂತಲೆಯು ನನ್ನ ಶರೀರಾಂಶಳಾಗಿರುತ್ತಾಳೆ. ಮೇಲಾಗಿ ಮೇನಕೆ ತನ್ನ ಮಗಳ ವಿಷಯವಾಗಿ ಈ ಕಾರ್ಯವನ್ನು ಮಾಡಹೇಳಿದ್ದಾಳೆ. ( ಸುತ್ತಲು ನೋಡಿ ) ವಸಂತ ಋತುವು ಪ್ರಾಪ್ತವಾಗಿ ಹೋಯಿತು. ಇನ್ನೂವರೆಗೂ ಉತ್ಸವಚಿಹ್ನಗಳು ರಾಜಮಂದಿರದಲ್ಲಿ ಕಾಣುವದೇ ಇಲ್ಲ! ಇದೆಲ್ಲ ವೃತ್ತಾಂತವು ಅಂತರ್ಜ್ಞಾನ ದಿಂದೇ ನನಗೆ ತಿಳಿಯತಕ್ಕ ಸಾಮರ್ಥ ಉಂಟಾದರೂ ಸಖಿಯು ಆದರದಿಂದ ಹೇಳಿದ್ದಕ್ಕೆ ಮಾನವನ್ನು ಕೊಡಬೇಕಾಗಿದೆ. ಒಳ್ಳೆಯದು; ಇವರಿಬ್ಬರು ತರುಣ ಸ್ತ್ರೀಯರು ಈ ತೋಟದಲ್ಲಿ ಏನು ಮಾಡುತ್ತಿದ್ದಾರೆ ನೋಡುವ.

ಇವರ ಹತ್ತಿರ ಹೋಗಿ ತಿರಸ್ಕರಣೀ ವಿದ್ಯೆಯಿಂದ ಅದೃಶ್ಯರೂಪಿಣಿಯಾಗಿ ನಿಲ್ಲುತ್ತೇನೆ. ಕುಣಿಯುತ್ತ ಕುಣಿಯುತ್ತ ಹೋಗಿ ಅವರ ಬಳಿಯಲ್ಲಿ ನಿಲ್ಲುತ್ತಾಳೆ. )

( ಇಷ್ಟರಲ್ಲಿ ಒಬ್ಬ ದಾಸಿಯು ಬಂದು ಚೂತವೃಕ್ಷದ ಪಲ್ಲವಗಳನ್ನು ನೋಡುತ್ತ ನಿಲ್ಲುತ್ತಾಳೆ. ಮತ್ತೊಬ್ಬ ದಾಸಿಯು ಅವಳ ಹಿಂದೆ ಬರುತ್ತಾಳೆ. )

**ಮೊದಲನೆಯ ದಾಸಿ—**( ಆಮ್ರವೃಕ್ಷದ ಮಂಜರಿಗಳನ್ನು ನೋಡಿ )

ಲಾವಣಿ.

( ದಾಟಿ....ಛನನನನನನನನ ಘುಂಗುರು ॥ ಬಾಜತಾತಿ ಮಾಝೀಚರಣೀಗ ॥ ಟಾಕಿತೀ ಜಪುನಿ ಪದಘರಣೀಗ ॥ ರಜನೀ ನಿಬಿಡ ಕಾಳುಂಖೀ ವಾಟತ ಭಯಸೇ ಕಾಯಂಕರೂ ॥ ಪಲ್ಲ ॥ ತೂ ಆಲೀಸ ಮುಜಬೋಲಾವೂಗ ॥ ಹರಿ ಜವಳ ಕಸಿಗ ಮೀ ಜಾವುಗ ॥ ಘರಿ ಧಾಕ ಸಾಸು ದೀರ ಭಾವೂಗ । ಕುತವರ ಮೀ ತೀವುಗ ಜೀವ ಸಾಸುರವಾಸೀ ಜಾಈಲ ಅಬರು ॥ ಎಂಬ ಆರೇ ಮಾತಿನ ಲಾವಣಿಯಂತೆ. )

**ಥಳಥಳಥಳಥಳಥಳ ಹೊಳೆವಾ ॥**
**ಮಾವಿನ ಚೆಲುವ ಕೆಂದಳಿರೊಳ್ ॥**
**ತೀವಿರಲು ಮೊಗ್ಗೆ ಮಂಜರಿಗಳ್ ॥ ವನದೊಳ್ ॥**
**ದೇವ ವಸಂತನು ಕಾವನ ಸಖನೋಲ್ ಶೋಭಿಸುವಾ ॥ಪಲ್ಲ॥**
**ಗಿಳಿವಿಂಡುಗುಡುರಿ ದಂಡುಗಳೊಳ್ ॥**
**ಅಳಿಕುಲದ ನಾದವಾದ್ಯಗಳೊಳ್ ॥**
**ಕಳರವದಿ ಪೊಗಳೆ ಕೋಗಿಲೆಗಳ್ ॥ ಸ್ಮರನೀ ॥**
**ಗೆಳೆಯ ವಸಂತನ ಥಳಿಲನೆದಿರು ಬಂದಪ್ಪಿರುವ ॥ ೧ ॥**
**ಅಂಬುಜಾಸ್ತ್ರಯ್ಯ ಸಂಗರದೊಳ್ ॥**
**ಶಂಭುವಿನ ಗೆಲುವೆನೀದಿನದೊಳ್ ॥**
**ಎಂಬಿನಿತು ಪೆರ್ಚಿನಾರ್ಭಟಿದೋಳ್ ॥ ಬನದೊಳ್ ॥**
**ತುಂಬುವನಲರ ತುಬಾಕಿಯ ಪೊಗೆ ಮಂದಾನಿಲವ ॥ ೨ ॥**
**ಸ್ಮರರಾಯ ಭೂಪನೀ ತೆಱದೊಳ್ ॥**
**ಕರಕೊಂಡು ವಸಂತನ ಬಳಿಯೊಳ್ ॥**
**ಹರನೊಳು ಕಾದಲೀಸ್ಥಳದೊಳ್ ॥ ಎನ್ನೋಲ್ ॥**
**ಕಿರಿಹರೆಯದಬಲೆಯರು ಬರುವದು ಕೇಳ್ ದುಸ್ತರವ॥೩॥**

**ಎರಡನೆಯುದಾಸಿ**—ಏನೇ ಕೋಕಿಲಾ, ಚೂತವೃಕ್ಷದ ಹತ್ತರ ಒಬ್ಬಳೆ ನಿಂತುಕೊಂಡು ಏನನ್ನು ಮಾತನಾಡುತ್ತಿದ್ದಿಯೇ ?

**ಮೊದಲನೆಯುದಾಸಿ**—ಆಮ್ರಮಂಜರಿಯನ್ನು ನೋಡಿ ಕೋಕಿಲೆಗೆ ಮದವೇರುವದಿಲ್ಲವೇನೇ ? ನನ್ನ ಹೆಸರು ಕೋಕಿಲೆ. ಇಷ್ಟು ತಿಳಿಯುವದಿಲ್ಲವೆ?

**ಎರಡನೆಯುದಾಸಿ**—( ತೀವ್ರದಿಂದ ಬಳಿಯಲ್ಲಿ ಬಂದು ) ಕೋಕಿಲಾ, ವಸಂತಕಾಲವು ಪ್ರಾಪ್ತವಾಯಿತೇನೇ?

**ಮೊದಲನೆಯುದಾಸಿ**—ಎಲೆ ಮಧುರೆ, ನಾವು ಗಾಯನ, ನರ್ತನ, ವೀಣಾವಾದ್ಯ, ಮಧುಪಾನ ಇತ್ಯಾದಿಗಳಿಂದ ಯಥೇಚ್ಛವಾಗಿ ಆನಂದಬಡುವ ದಿವಸಗಳು ಇವೇ ಬಲ್ಲೆಯಾ?

**ಎರನೆಯುದಾಸಿ**—ಸಖಿಯೇ ಕೋಕಿಲಾ, ನನ್ನ ಕೈ ಹಿಡಿದು ನಿಲ್ಲು. ಈ ಕಲ್ಲಮೇಲೆ ಹತ್ತಿ ಆ ಮಾವಿನ ಹೂವನ್ನು ಕೊಯ್ಯುತ್ತೇನೆ. ಮನ್ಮಥನ ಪೂಜೆ ಮಾಡುವ.

**ಮೊದಲನೆಯುದಾಸಿ**—ಪೂಜಾ ಫಲದಲ್ಲಿ ಅರ್ಧವನ್ನು ನನಗೆ ಕೊಟ್ಟರೆ ಸೈ.

**ಎರಡನೆಯುದಾಸಿ**—ಸಖಿಯೇ ಇದೇನು ಹೇಳತಕ್ಕದ್ದು! ನಾನು ಬೇರೆ ನೀನು ಬೇರೆಯೆ? ದೇಹ ಮಾತ್ರ ಎರಡು ಹೊರ್ತಾಗಿ ಜೀವವೆಲ್ಲ ಒಂದೇ ಬಲ್ಲೆಯಾ! ( ಎಂದು ಕಲ್ಲ ಮೇಲೆ ನಿಂತು ಗೆಳತಿಯ ಕೈಗೆ ಕೈ ಊರಿ ಮಾವಿನ ಹೂವನ್ನು ಕೊಯ್ಯುತ್ತಾಳೆ. ) ಸಖಿಯೆ, ಈ ಆಮ್ರಮಂಜರಿಯು ಚೆನ್ನಾಗಿ ಪ್ರಫುಲ್ಲಿತವಾಗದಿದ್ದರೂ ದೇಟಿನ ಹತ್ತರ ಚಿವುಟಿದ್ದರಿಂದ ಬಹುಮಧುರವಾದ ವಾಸನೆ ಬರುತ್ತದೆ ( ಮಾವಿನ ಹೂವನ್ನು ಮೇಲಕ್ಕೆ ತೂರಿ ಕೈ ಮುಗಿದು ಧ್ಯಾನ ಮಾಡುತ್ತಾಳೆ. ) ಹೇ ಪುಷ್ಪಧನ್ವಾ, ಹೇ ಮನ್ಮಥಸ್ವಾಮಿ, ನಾನು ಅರ್ಪಣೆ ಮಾಡಿದಂಥ ಆಮ್ರಮಂಜರಿಯನ್ನು ನಿನ್ನ ಪಂಚಶರದಲ್ಲಿ ಕೂಡಿಸಿ ಪಾಂಥಸ್ಥರಾದ ತರುಣ ಸ್ತ್ರೀಯರ ಮೇಲೆ ಬಿಡಬಹುದು ಬಲ್ಲೆಯಾ ? (ಸಖಿಯಳಿಗೆ) ಇನ್ನು ಮೇಲೆ ಕೋಕಿಲೆ, ನಾನು ಕಮಲಪುಷ್ಪವೆಂಬ ಸ್ತಬಕದಲ್ಲಿ ಸಂಪಿಗೆ ಹೂವಿನ ದೀಪಗಳನ್ನು ಹಚ್ಚಿ ಅಲ್ಲಿಟ್ಟಿದ್ದೇನೆ. ತೆಗೆದುಕೊಂಡು ಬಾ; ಆರತಿ ಬೆಳಗುವ.

**ಮೊದಲನೆಯುದಾಸಿ**–( ತೆಗೆದುಕೊಂಡು ಬರುವಳು. )

( ಇಬ್ಬರೂ ಪದವನ್ನು ಹಾಡುತ್ತ ಆರತಿ ಬೆಳಗುತ್ತಾರೆ. )

**ಆರತಿಪದ.**

( ದಾಟಿ—ಸುರರು ನೆರೆದು ಬಂದು ಶರಧಿಯು ಶಯನನಗೆ । ಮೊರೆಯಿಡಲಾಗ ಸುರರಿಗೆ ವರವನಿತ್ತು ಧರೆಯ ಭಾರವನಪಹರಿಸಲು ನರರೂಪ । ಧರಿಸಿ ದೇವಕಿಯುದರದಿ ಜನಿಸಿದ ಲಕ್ಷ್ಮೀರಮಣಗಾರುತಿಯ ಬೆಳಗಿರೆ ಸೋಬಾನೆ ॥ ಎಂಬ ಪದದಂತೆ ॥ )

ಅತಿಶಯಾತುರದಿ | ರತಿಯು ಬಂದು ಬಿಸ-
ಟುತಿರೆ ಮುಸುಕುನೆರೆ | ಹಿತದಿ ತೋಳ್ಗಳಿಂ ॥
ಸತಿಯನಪ್ಪಿ ಸನು | ಮತದೊಳು ವಸನರ.
ಹಿತನಾಗಿ ಬಹುಬಗೆ | ರತಿಯುರಚಿಪ ಮನು-
ಮಥನಿಗಾರತಿಯ ಬೆಳಗಿರೆ ಸೋಬಾನೆ ॥ ೧ ॥
ಮುನಿವರರೆಲ್ಲ ಭು- | ವನದಿ ಸೌಖ್ಯವಿ |
ಲ್ಲೆನುತ ಮರುಳು ಹಿಡಿ | ದನುದಿನ ವನದೊಳು ॥
ತನುವ ಕಷ್ಟಿಸಲು | ವನಿತೆಯರೆಳೆ ಕ-
ಣ್ಣಿನ ಗುಟುಕಿಲಿ ಮೆ-| ಲ್ಲನೆ ತಿಳಿಸುವಸಿರಿ-
ತನಯ ಗಾರುತಿಯ ಬೆಳಗಿರೆ ಸೋ— ॥ ೨ ॥
ಗಿಳಿಯನೇರಿ ಮಾಂ-| ದಳಿರ ವಸನ ಥಳ-
ಥಳಿಸೆ ಚಂದ್ರ ಕರ | ದೆಳೆಯು ಶಲ್ಯ ಹೊ-|
ತ್ತಳಿಯು ಸಿಂಜಿನಿಯು | ನೆಳೆದು ಕುಸುಮ ಶರ
ಗಳಲ್ಲಿ ತ್ರಿಲೋಕವ | ಗೆಲುವ ವಸಂತನ
ಗೆಳೆಯುಗಾರುತಿಯ ಬೆಳಗಿರೆ ಸೋ— ॥ ೩ ॥

( ಮತ್ತೊಂದು ಮಾವಿನ ಚಿಗುರನ್ನು ಕೊಯಿದು ಮೇಲಕ್ಕೆ ತೂರಿ ಇಬ್ಬರೂ ಧ್ಯಾನವನ್ನು ಮಾಡಿ ಕೈಮುಗಿಯುತ್ತಾರೆ. )

[ ಇಷ್ಟರಲ್ಲಿ ಕಂಚುಕಿಯು ಬರುತ್ತಾನೆ. ]

**ಕಂಚುಕಿ**—( ಕೋಪಿಷ್ಟನಾಗಿ ) ಖಬರದಾರ್, ಬುದ್ಧಿ ಎಲ್ಲಿಟ್ಟಿದ್ದೀರಿ ! ದೊರೆಗಳವರು ವಸಂತೋತ್ಸವ ಮಾಡಬಾರದೆಂದು ಡಂಗುರವನ್ನು ಸಾರಿಸಿ ಬಿಟ್ಟಿದ್ದಾರೆ; ಗೊತ್ತಿಲ್ಲವೆ ನಿಮಗೆ ? ಹುಚ್ಚೀರ್‍ರ್ಯಾ, ಹಳೇ ಹುಚ್ಚೀರ್‍ರ್ಯಾ ತೋಟದಲ್ಲಿ ಯಾರೂ ಇಲ್ಲದ ವ್ಯಾಳ್ಯದಲ್ಲಿ ಬಂದು ಮನ್ಮಥನ ಪೂಜೆ ಮಾಡುತ್ತಾರೆ, ನಾಚಿಕೆ ಬರುವದಿಲ್ಲವೆ ?

**ಇಬ್ಬರೂ**—( ಅಂಜಿ ) ಅಪ್ಪಯ್ಯನೆ ನಮಗೆ ಇದು ಗೊತ್ತಿಲ್ಲವೊ, ಸಿಟ್ಟು ಮಾಡಬೇಡ.

**ಕಂಚುಕಿ**—ನಿಮಗೆ ಗೊತ್ತಿಲ್ಲವೆ? ಬಹು ಆಶ್ಚರ್ಯ! ವಸಂತಕಾಲದಲ್ಲಿ ಪುಷ್ಪಗಳನ್ನು ಕೊಡುವ ವೃಕ್ಷಗಳು ಮತ್ತು ಅವುಗಳ ಮೇಲಿರುವ ಪಕ್ಷಿಗಳು ಸಹ ಮಹಾರಾಜರ ಆಜ್ಞೆ ಮೀರುವದಿಲ್ಲ. ನೋಡಿ—

**ಚಂಪಕಮಾಲಾ ವೃ||**

**ಅರೆಬಿರಿದಾಮ್ರಮಂಜರಿಗಳಿಂದೆ ಪರಾಗ ನೆಲಕ್ಕೆ ಬೀಳ್ವದಿ।**
**ಲ್ಲರಳುವದಿಲ್ಲ ಸಂಪಿಗೆಯ ಮೊಗ್ಗೆಗಳಿನ್ನುವರೆಗೆ ಬಾಯ್ಗಳಿಂ||**
**ಪೊರಡುವದಿಲ್ಲ ಕೋಕಿಲದ ಗಾಯನ ಮಾರನು ಮೀರಲಾರನೆ|**
**ಮ್ಮರಸಿನ ಶಾಸನಂಗಳನು ತಾಂಬಿಡ ಪೂಡಿದ ಪುಷ್ಪಬಾಣವ ||**

**ಸಾನುಮತಿ**—ಸತ್ಯ ಸತ್ಯ; ಇದರಲ್ಲಿ ಸಂಶಯವಿಲ್ಲ. ನಮ್ಮ ಮಹಾರಾಯರ ಯೋಗ್ಯತೆಯೇ ದೊಡ್ಡದು.

**ಮೊಲನೆಯ ದಾಸಿ**—ಅಣ್ಣಯ್ಯ ಕೇಳು, ದೊರೆಸಾನಿಯವರ ತಮ್ಮನಾದ ಮಿತ್ರಾವಸುವೆಂಬ ನಗರಪಾಲಕನು ದೊರೆಗಳವರ ಸೇವಾರ್ಥವಾಗಿ ನಮ್ಮನ್ನು ಕಳುಹಿಸಿ ಸ್ವಲ್ಪ ದಿವಸಗಳಾದವು; ಈ ಪ್ರಮದ ವನದಲ್ಲಿ ಮೊನ್ನಿನಿಂದ ಕಾವಲಿಗೆ ಇಟ್ಟಿದ್ದಾರೆ. ಆದ್ದರಿಂದ ಈ ಮಾತು ನಮಗೆ ತಿಳಿಯಲಿಲ್ಲ.

**ಕಂಚುಕಿ**—ಒಳ್ಳೇದು, ಚಿಂತೆಯಿಲ್ಲ; ಇನ್ನುಮೇಲೆ ಮಾತ್ರ ಹೀಗೆ ಮಾಡಬೇಡಿ.

**ಇಬ್ಬರೂ ದಾಸಿಯರು**—ಅಣ್ಣಯ್ಯನೆ, ಈ ಮಾತು ಚನ್ನಾಗಿ ಕೇಳಬೇಕೆಂದು ಆಶೆ ಹುಟ್ಟಿದೆ. ಹೇಳಲಿಕ್ಕೆ ಯಾವಮಾತಿನಿಂದಲೂ ಪ್ರತಿಬಂಧವಿಲ್ಲದಿದ್ದರೆ ದೊರೆಗಳು ವಸಂತೋತ್ಸವವನ್ನು ಏನು ಕಾರಣ ನಿಲ್ಲಿಸಿದ್ದಾರೆಂಬದನ್ನು ಹೇಳಬೇಕು.

**ಸಾನುಮತಿ**—ಮಾನವರಿಗೆ ಉತ್ಸವಾಪೇಕ್ಷೆ ಬಹಳ. ಹೀಗಿರಲು ಅರಸನಿಂದ ಈ ಮಾತು ಆದದ್ದರ ಕಾರಣವು ಏನಾದರೂ ದೊಡ್ಡದಿರಬೇಕು.

**ಕಂಚುಕಿ**—( ತನ್ನೊಳಗೆ ) ಯಾವತ್ತರಿಗೂ ತಿಳಿದಂಥ ಮಾತು ಹೇಳಲಿಕ್ಕೆ ಅನುಮಾನವ್ಯಾಕೆ? ( ದಾಸಿಯರಿಗೆ ) ಶಕುಂತಲೆಯನ್ನು ಹಿಂತಿರಿಗಿ ಕಳುಹಿದ ಮಾತು ನಿಮ್ಮ ಕಿವಿಯ ವರೆಗೆ ಬಂದಿಲ್ಲವೆ ?

**ದಾಸಿಯರು**—ಅಹುದು, ಉಂಗುರವು ಸಿಕ್ಕತನಕ ವರ್ತಮಾನ ವನ್ನು ದೊರೆಸಾನಿಯವರ ತಮ್ಮಂದಿರಾದ ನಗರ ಪಾಲಕರ ಬಾಯಿಯಿಂದ ಕೇಳಿದ್ದೇವೆ.

**ಕಂಚುಕಿ**—ಹಾಗಾದರೆ ಮುಂದೆ ಹೇಳುವದು ಸ್ವಲ್ಪವೇ ಉಳಿದಿದೆ. ಆ ಮುದ್ರಿಕೆಯನ್ನು ನೋಡಿದ ಕ್ಷಣವೆ ಶಕುಂತಲೆಯ ಕೂಡ ಏಕಾಂತದಲ್ಲಿ ಗಾಂಧರ್ವವಿವಾಹ ಹೊಂದಿದ ಮಾತು ಮಹಾರಾಯರ ಸ್ಮರಣೆಯಲ್ಲಿ ಬಂದು ಅವಳನ್ನು ಹಿಂತಿರುಗಿ ಕಳುಹಿದೆನಲ್ಲ, ಎಂದು ಆವೊತ್ತಿನಿಂದ ಪಾಶ್ಚಾತ್ತಾಪ ದಿಂದ ಬಹು ನೊಂದುಕೊಂಡಿದ್ದಾರೆ. ಆದ್ದರಿಂದ ವಸಂತೋತ್ಸವ ಪ್ರತಿಬಂಧ ವಾಗಿದೆ. ದೊರೆಗಳವರ ಅವಸ್ಥೆ ಈಗ ಏನಾಗಿದೆಯೆಂದರೆ—

ಪದ.

( ದಾಟಿ...ಬಾಯೆಂದಿರುವಾ ವನದಿ ಕ್ರೀಡಿಪ ಬಗೆ ಸಾಧಿಸು ಕೇಶವ ನರಹರಿಯೆ ॥ ಪಲ್ಲ ॥ ಟಿಕಮಕ ನೋಡುತ ಮುರಲಿಯ ನೂದುತ ನಡೆ ನಡೆ ನಡೆ ನಡೆ ನಡೆರಂಗಯ್ಯ ॥ ೧ ॥ ಎಂಬ ಪದದಂತೆ. )

**ಬ್ಯಾಸರದಿರುವ ॥**
**ಬದುಕನು ಸಖಿಯನು ಭೋಗಿಸಿ ಜರಿದಕೆ ।**
**ಬಳಲಿ ಬೆಂದಿರುವ ॥ ಪಲ್ಲ ॥**
**ಮನೋಹರ ವಸ್ತುಗ । ಳನು ತಾ ಜರಿವ ॥**
**ತನುವಿನ ಸೇವಕ । ರನು ಬ್ಯಾಡೆನುವ ॥ ೧ ॥**
**ಇರುಳೆಲ್ಲನು ಜಾ- । ಗರದೊಳು ಕಳೆವ ॥**
**ಪರಿಯಂಕದಿ ಬಲ್ । ಹೊರಳುತಲಿರುವ ॥ ೨ ॥**
**ಬಲು ಎಚ್ಚರದಿಂ । ದಲಿ ಮಾತಾಡುವ ।**
**ಲಲನೆಯರನು ಶಕುಂ- । ತಲೆಯೆಂದು ಕರೆವ ॥ ೩ ॥**
**ಮೊಗಮುಚ್ಚಿ ಅಳುವ । ಬಿಗಿದು ವಸ್ತ್ರರವ ॥**
**ನಗಲು ಸಖಿಯರು ನಾ- । ಚಿಗೆಯೊಳು ಬರುವ ॥ ೪ ॥**

**ಸಾನುಮತಿ**—ಇದು ನನಗೆ ಪ್ರಿಯಕರವಾದ ಮಾತಾಯಿತು.

**ಕಂಚುಕಿ**—ಈ ಪ್ರಕಾರ ಮಹಾರಾಯರಿಗೆ ಬಹು ಖೇದವಾದದರಿಂದ ವಸಂತೋತ್ಸವಕ್ಕೆ ಪ್ರತಿಬಂಧ ಮಾಡಿದ್ದಾರೆ. ತಿಳಿಯಿತೆ?

**ದಾಸಿಯರು**—ಸರಿ ಸರಿ; ಯೋಗ್ಯ.

( ತೆರೆಯಲ್ಲಿ—ಬರಬಹುದು ಜೀಯ. )

**ಕಂಚುಕಿ**—( ಕಿವಿಗೊಟ್ಟು ) ಓಹೊ ! ಮಹಾರಾಯರು ಇತ್ತ ಕಡೆಗೇ ಬರುತ್ತಾರೆ. ನಿಮ್ಮ ನಿಮ್ಮ ಕಾರ್ಯಕ್ಕೆ ಹೊರಟುಹೋಗಿರಿ. ( ಇಷ್ಟರಲ್ಲಿ ಪಶ್ಚಾತ್ತಾಪವನ್ನು ತೋರಿಸುವ ಸಾಧಾರಣ ವಸ್ತ್ರಾಲಂಕಾರಗಳಿಂದ ಅರಸು ಬರುತ್ತಾನೆ. ಆತನ ಹಿಂದೆ ವಿದೂಷಕನೂ ದ್ವಾರಪಾಲಿಕೆಯೂ ಬರುತ್ತಾರೆ. )

**ಕಂಚುಕಿ**—( ಅರಸನನ್ನು ನೋಡಿ ) ಜಾತ್ಯಾ ಮನೋಹರವಾದ ಸ್ವರೂಪವು ಯಾವಸ್ಥಿತಿಯಲ್ಲಿದ್ದರೂ ರಮಣೀಯವಾಗಿಯೇ ಕಾಣಿಸುತ್ತದೆ.

|| ಪದ ||

( ದಾಟಿ—ರಂಗಾ ತಾರೊ ಸುಮ್ಮನೆ। ಎಮ್ಮಯ ಸೀರೆ ಸೆಳೆವರೇನೊ ॥ ಎಂಬ ಪದದಂತೆ )

**ನಮ್ಮ ದೊರೆಯು ಬರುವನೆ। ಪ್ರಮುದವನಕೆ ಮೆಲ್ಲನೆ || ಪಲ್ಲ ||**
**ಶರೀರದ ಭೂಷಣಗಳ ಬ್ಯಾ। ಸರಿದು ಬಲು ಉದಾಸನಾಗಿ |**
**ತೊರೆದಿರೆ ನೋಳ್ಪವರ ಕಣ್ಗೆ | ಮರಳು ಗೊಳಿಪನೆ || ೧ ||**
**ಅಂಗಕೆ ಸಾಧಾರಣ ವಸ- | ನಂಗಳು ಎಡಗೈಯೊಳೊಂದೆ |**
**ಹೊಂಗಡಗ ವಿರಲು ಮೆರೆವನ- | ನಂಗರೂಪನೇ || ೨ ||**
**ಕೆಂದುಟಿಗಳು ಶ್ವಾಸದಿಂದೆ। ಕಂದಿರೆಕಣ್ಗಳು ಜಾಗರ- ।**
**ದಿಂದೆ ಕೆಂಪುದೋರೆ ಮೆರೆವ | ನಿಂದು ವದನನೆ || ೩ ||**
**ಇಂತು ತನ್ನ ಕಾಂತೆಯ ಬಲು | ಚಿಂತೆಯಿಂದೆ ಸವೆಯೆ ಬಿಡದೆ**
**ಸ್ವಂತತೇಜ ತೆಯಿದ ರತ್ನ | ದಂತೆ ಪೊಳೆವನೆ || ೪ ||**

**ದಾಸಿಯರು**—ಅಣ್ಣಯ್ಯನೆ, ನಾವು ನಮ್ಮ ಕೆಲಸಕ್ಕೆ ಹೋಗುತ್ತೇವೆ. ( ಎಂದು ಹೊರಟು ಹೋಗುತ್ತಾರೆ. )

**ಸಾನುಮತಿ**—( ಅರಸನ ಸೌಂದರ್ಯವನ್ನು ನೋಡಿ ) ಶಕುಂತಲೆಯನ್ನು ಅಪಮಾನ ಹೊಂದಿಸಿ ಹಿಂತಿರುಗಿಸಿ ಕಳುಹಿದಾಗ್ಯೂ ಅವಳು ಈತನ ಚಿಂತೆಯಲ್ಲಿಯೇ ಇರುತ್ತಾಳೆಂಬಮಾತು ಆಶ್ಚರ್ಯವಲ್ಲ.

**ಅರಸು**—( ಶಕುಂತಲೆಯನ್ನೇ ಧ್ಯಾನಿಸುತ್ತ ಅತ್ತಿತ್ತ ತಿರುಗುತ್ತಾನೆ. )

|| ಪದ ||

(ದಾಟ---ಅಖೀಜೋಲಗಗಯಿವೆ | ನಾದನ ಮೋರಾರೆ || ಪಲ್ಲ || ಕಿನಸೋತನ ಮಾರಿ|| ಅಖೀ ಜೊಲಗಗಯಿವೆ | ಜಿಯರಾಮೆ ಬಾಸಗಯಿವೆ-ನಾದನ- || ಎಂಬ ಹಿಂದುಸ್ಥಾನೀ ಪದದಂತೆ. )

**ಮನಸು ಮರುಗುವದು || ಮದವ ತೊರೆದು || ಪಲ್ಲ ||**
**ಪರಿ ಪರಿ ಬೋಧಿಸುವ | ಹರಿಣನಯನೆಯನು ||**
**ಜರಿದೀಗಲೆಚ್ಚರಿದು ಮದವಾ— || ೧ ||**
**ಕಂಬನಿಗಳಿಂದೆ ಬಲ್ | ಹಂಬಲಿಪಳ ಸ್ನೇಹ |**
**ವೆಂಬುವದೆ ಕಡಿದು || ೨ ||**
**ಕರುಣವಿಲ್ಲದಲೆ ಬಲ್ | ಕಠಿನೋಕ್ತಿಗಳಿಂ**
**ತರುಣಿಯಳಿಗಿರಿದು— || ೩ ||**

**ಸಾನುಮತಿ**— ( ತನ್ನೊಳಗೆ ) ಅವಳ ದೈವದಲ್ಲಿಯೆ ಹೀಗಾಗ ಬೇಕೆಂದು ಬರೆದಿದೆ. ಅದಕ್ಕೆ ಯಾರ ಉಪಾಯವೇನು?

**ವಿದೂಷಕ**—( ಮೋರೆದಿರುವಿ ಮರೆಯಲ್ಲಿ ) ಸಕುಂತರೀ ಚಿಂತೀ ಬ್ಯಾನಿ ಮತ್ತ ಅಮರಿತು ಕಾಣತತಿ ನಮ್ಮರಸಗ. ಇದಕ ಯಾವ ವೈದ್ಯ ಗಂಟ ಬೀಳತಾನೋ !

**ಕಂಚುಕಿ**— ( ಬಳಿಯಲ್ಲಿ ಹೋಗಿ ) ಜಯತು ಜಯತು ಜೀಯಾ ! ಈ ಪ್ರಮದವನ ಪ್ರದೇಶದಲ್ಲಿ ಯಾವತ್ತು ವ್ಯವಸ್ಥೆ ಚೆನ್ನಾಗಿದೆ. ಈ ವಿನೋದ ಸ್ಥಾನದಲ್ಲಿ ಇಚ್ಛೆ ಬಂದಲ್ಲಿ ವಿಶ್ರಾಂತಿಗೊಳ್ಳತಕ್ಕದ್ದು. ಜೀಯಾ !

**ಅರಸು**—( ದ್ವಾರಪಾಲಿಕೆಗೆ ) ವೇತ್ರವತಿಕೆ, " ನಮಗೆ ನಿನ್ನೆ ರಾತ್ರಿ ಜಾಗರಣೆ ಬಹಳ ಆಗಿದೆ. ಆದ್ದರಿಂದ ಓಲಗಕ್ಕೆ ಬರುವದಾಗುವದಿಲ್ಲ. ನೀವು ಪ್ರಜರುಗಳ ನ್ಯಾಯವನ್ನು ತೀರಿಸಿದ್ದು ಸಾಯಂಕಾಲಕ್ಕೆ ಬಂದು ನಮಗೆ ತಿಳಿಸಬೇಕು " ಎಂದು ರಾಯರು ಹೇಳಿದ್ದಾರೆಂದು ಅಮಾತ್ಯರಿಗೆ ತಿಳುಹಿಸು, ಹೋಗು.

**ಪ್ರತಿಹಾರಿ**—ಮಹದಾಜ್ಞೆ ( ಹೊರಟು ಹೊಗುತ್ತಾಳೆ. )

**ಅರಸು**—ವಾತಾಯನಾ, ನಿನ್ನ ಕೆಲಸಕ್ಕೆ ನೀನು ಹೊರಟು ಹೋಗು.

**ಕಂಚುಕಿ**—ಜೀಯಾ. ( ಎಂದು ಹೊರಟು ಹೋಗುತ್ತಾನೆ. )

**ವಿದೂಷಕ**—ಎಲ್ಲಾರನೂ ಕಳವಿದಿ; ಒಂದು ನೊಣಾ ಸುದ್ಧಾ ಬಿಡ ಲಿಲ್ಲ. ಒಂದೆಡ್ಡ ತಾಸ ಇಲ್ಲೇ ಕುಂದರೂನ ನನ ಒಡ್ಯಾ ತೋಟದಾಗ ಕಮೂಗ ಹೂವಿನ ಮಕರಂದ ಇಡಗೇತಿ.

**ಅರಸು**–ಹೇ ಮಾಧವ್ಯಾ, "ರಂಧ್ರೋಪಪಾತಿ ನೋನರ್ಥಃ" ಎಂಬುವ ಗಾದೆ ಸುಳ್ಳಲ್ಲ ಕಂಡೆಯಾ! ಕಾಡುವ ಕಾಲದಲ್ಲಿ ಒಂದರಹಿಂದೊಂದು ಕಷ್ಟ ಗಳು ಬರುತ್ತಲೇ ಇರುತ್ತವೆ. ಈ ವ್ಯಾಳ್ಯದಲ್ಲಿ ಕುತ್ಸಿತವಾದ ಕಾರಣವೇ ಕಷ್ಟ ವಾಗಲಿಕ್ಕೆ ಸಾಕಾಗುತ್ತದೆ. ನೋಡಿದೆಯಾ.

|| **ಪದ.** ||

( ದಾಟಿ ' ಸರಸೀಜಾಕ್ಷೀ ಬಾ ಸರಸಾನಾ ತಂದು ತೋರೆ ನೀರೆ || ಪಲ್ಲ|| ದುರುಳ ಮಾರನು ತನ್ನ | ಸರಳುಗಳಿಂದೆನ್ನ | ಉರವನು ಭೇದಿಪ ನೀರೆ | ತಾಳಲಾರೆ ನೀರೆ || ಎಂಬ ಪದದಂತೆ )

**ಚೂತಾಂಕುರ ಬಾ | ಐಕ್ಕೆನಾ ಗುರಿಯಾದೆ ನವ || ಪಲ್ಲ ||**
**ಮೃದುನುಡಿಗಳಿಂದೆನ್ನ | ಹೃದಯವೆಚ್ಚರಿಪಳ ||**
**ಸದನದೊಳ್ಕರೆಯಲಿಲ್ಲ | ಮದವೇರಿ ನವ || ೧ ||**
**ಕತ್ತಲೋಳಿನ್ನ ಮನ | ಸುತ್ತಿಕೊಂಡರಿಯದ-**
**ಲಿತ್ತುದೈವದಿಂ-ದೀಗಲು ಬೆಳಗಾಗಲುರೆ|| ೨ ||**
**ಮುಷ್ಟಕೆನ್ನಯಮನ | ಮುದವತಿಳಿದಿರಲು**
**ನಿಷ್ಠುರ ಮದನನ ಕೈಯ | ಹಸನಾದನವ || ೩ ||**

**ವಿದೂಷಕ**—ನಿಲ್ಲವ, ಕೀ ಬಡಿಗೀಲೆ ನಿನ್ನ ಕಾಮನ ಬಾಣಾ ಎಲ್ಲಾ ಚಿಂದಾಟ ಮಾಡಿ ಬಿಡತೇನ ಒಂದ ಗಳಿಗ್ಯಾಗ. ( ಎಂದು ಬಡಿಗೆಯಿಂದ ಮಾವಿನ ಹೂವುಗಳನ್ನು ಬಡಿಯುತ್ತಾನೆ. )

**ಅರಸು**—( ಸ್ವಲ್ಪನಕ್ಕು ) ಹಾ ಹಾ! ಸಾಕು ಸಾಕು ಬಿಡು, ಇನ್ನು ತಿಳಿದ ಹಾಗಾಯಿತು ನಿನ್ನ ಶೌರ್ಯ; ಸುಮ್ಮನಿರು. ಇನ್ನು ನನ್ನ ಸಖಿಯಂತೆ ಕಾಣಿಸುವಂಥ ಈ ಎಳೆ ಎಳೆ ಬಳ್ಳಿಗಳನ್ನು ನೋಡುತ್ತ ಸ್ವಲ್ಪ ಚಿತ್ತಸಮಾ ಧಾನ ಪಡಿಸುತ್ತೇನೆ.

**ವಿದೂಷಕ**—ಇಲ್ಲೇ ಕುಂದರಲಿ? ಆಗಲೆ ನೀ ಚತುರಿಕಾ ಎಂಬಾಕಿ ಆಳಿ ಅದಾಳಲ್ಲ, ಆಕೀಗೆ ಏನಂತ ಹೇಳಿದ್ದಿ? ನೆನಪಿಲ್ಲ? ನೀ ಸಕುಂತಲೀ

ಚಿತ್ರರಾ ಬರದ ಇಟ್ಟಿದ್ದಿ ಅದನ್ನ ಈ ಹೊತ್ತಿನ್ಯಾಗ ಮಾಧವೀ ಮಂಟಪದಾಗ ಕುಂದರತೇವು ಅಲ್ಲೇ ತೊಗೊಂಡಕ್ಯಾಸಿ ಬಾ ಅಂತ ಹೇಳಿಲ್ಲ?

**ಅರಸು**—ಓಹೋ ಅಹುದಹುದು. ಆ ಸ್ಥಾನವು ಹೊತ್ತುಗಳೆಯಲಿಕ್ಕೆ ಚೆನ್ನಾಗಿದೆ; ಸರಿ ನಡೆ ಹಾಗಾದರೆ.

**ವಿದೂಷಕ**—ಹೀಗ ಬಾ ನನ್ನ ಒಡ್ಯಾ.

( ಇಬ್ಬರೂ ಮುಂದೆ ನಡೆಯುತ್ತಾರೆ. ಸಾನುಮತಿಯೂ ಅವರ ಬೆನ್ನ ಹಿಂದೆ ತಿಳಿಯಗೊಡದೆ ಹೋಗುತ್ತಾಳೆ. )

**ವಿದೂಷಕ**—ಇದ ಮಾಧವೀಮಂಟಪ; ನಡಬರಕ ಚೌಕಾನ ಬಿಳೇ ಕಲ್ಲಹಾಸೇತಿ. ಏನಪಾ! ಇದರ ಮ್ಯಾಗೆಲ್ಲಾ ರತುನಗೋಳ ಹ್ಯಾಂಗ ಸಿಗಸಿದಾರು! ಎಲೆ ಇದರ, ಏನ ತಕಾಪಕಾ ಹೊಳುತತೆಪಾ! ನೋಡಗೊಡಾಣಿಲ್ಲ! ಮನಾರ ಹೂಗೋಳೇನ ಹಾಸಿದಾವು; ಕಮಾಗ ಮಕರಂದ ಇಡಿಗೇತಿ; ಈ ಪಳಾರ ನೋಡುವ, ನಮ್ಮನ್ನ ಕರುತತಿ. ಹಸುವಾಗೇತಿ ನನ್ನ ಒಡ್ಯಾ ಕುಂದ್ರಗಡಾ.

( ಇಬ್ಬರೂ ವಿಶ್ರಮಿಸುತ್ತಾರೆ. )

**ಸಾನುಮತಿ**—ಈ ಬಳ್ಳಿಯನ್ನು ಹೊಂದಿ, ನನ್ನ ಸಖಿಯಳಾದ ಶಕುಂತಲೆಯ ಚಿತ್ರವನ್ನು ನೋಡಿ, ಅವಳ ಪತಿಯ ಪ್ರೀತಿ ಎಷ್ಟಂತಿರುವದೋ ನೋಡಿ ಅವಳಿಗೆ ತಿಳಿಸುವೆ. ( ಎಂದು ಹಿಂದೆ ಹೋಗಿ ಬಳ್ಳಿಗೆ ಆತುಕೊಂಡು ನಿಲ್ಲುತ್ತಾಳೆ. )

**ಅರಸು**-ಹನುಮನಾಯಕಾ, ಶಕುಂತಲೆಯ ಯಾವತ್ತು ವೃತ್ತಾಂತವು ಕಣ್ಣೆದುರಿಗೆ ಕಟ್ಟಿದ ಬಲ್ಲೆಯಾ; ನಾನು ನಿನ್ನ ಕೂಡ ಒಂದುಸಾರೆ ಈ ವಿಷಯವನ್ನು ಕುರಿತು ಮಾತಾಡಿದ್ದೆ. ನಾನು ಅವಳನ್ನು ಧಿಕ್ಕರಿಸಿ ಹಿಂದಕ್ಕೆ ಕಳುಹಿಸಿದಾಗ ಯದ್ಯಪಿ ನೀನು ಬಳಿಯಲ್ಲಿ ಇಲ್ಲದಿದ್ದರೂ ಮುಂಚಿತವಾಗಿ ಒಂದು ಸಾರೆಯಾದರೂ ಈ ವಿಷಯವನ್ನು ಕುರಿತು ನನ್ನೆದುರಿಗೆ ಮಾತನಾಡಬಾರದಿತ್ತೆ? ಅಯ್ಯೋ! ನನ್ನಂತೆ ನಿನಗೂ ವಿಸ್ಮೃತಿಯಾಗಿ ಹೋಯಿತೋ ಏನೋ!

**ವಿದೂಷಕ**-ಆಗ ಹೇಳಾಕಿಲ್ಲೇನಪಾ? ಏನ ಗಾತಾ ಮಾಡಿದಿ! ಎಲ್ಲಾ ನನ್ನ ಮುಂದ ಸುದ್ದೀ ಹೇಳಿ ಹಿಂದಗಡೆ “ ನಗಿಚಾರಕಿ ಮಾತ ಅsತಿ ಕಡೆ

ತಿಳಕೊಂಡಗಿಂಡಿ" ಅಂತ ನನಗ ತಾಕೀದೀ ಮಾಡಲಿಲ್ಲ ನೀ? ನಾ ಏನ ಬಲ್ಲ್ಯ ಹುಚ್ಚ ಮನಸ್ಯಾ, ಅಂದಾಕಾರಾ; ನಿನ್ನ ಮಾತಿನಮ್ಯಾಗ ಬರೋಸಾ ಇಟ್ಟೆ. ಆಗೋದಾಕ್ಕತಿ ಬಿಡ; ಅದ ಬ್ಯಾರಿ ತಪ್ಪಾಣಿಲ್ಲ!

**ಸಾನುಮತಿ**—ಇದಂತೂ ಸರಿಯೆ. ಭವಿಷ್ಯಕ್ಕೆ ಅನುಸರಿಸಿಯೇ ಬುದ್ಧಿ ಯಾಗುತ್ತದೆ.

**ಅರಸು**—ಹನುಮನಾಯಕಾ, ಹ್ಯಾಗಾದರೂ ಮಾಡಿ ಈ ವ್ಯಥೆ ಯಿಂದ ನನ್ನನ್ನು ಬಿಡಿಸು ಕಾಣೊ! ( ಎಂದು ಭ್ರಮೆಗೊಳ್ಳುತ್ತಾನೆ)

**ವಿದೂಷಕ**—ನೀ ಕುಂತ ಹೀಂಗ ಮಾಡಬೇಕ ನನ್ನ ಒಡ್ಯಾ? ಇದ ನಿನಗ ಒಪ್ಪಾಣಿಲ್ಲ ಬಿಡ. ದೊಡ್ಡ ಮನಿಸ್ಯಾ ನೀನು, ಕಷ್ಟಕ ಮನಸ ಒಪ್ಪಸ ಬಾರದಪಾ; ಸೊಂಟರಗಾಳಿಗೆ ಗುಡ್ಡ ಎಂದಾರ ಅದರತತೆ?

**ಅರಸು**—ಮಿತ್ರಾ ಹನುಮನಾಯಕಾ, ಕೇಳಪ್ಪಾ; ನಾನು ಅವಳನ್ನು ಅಪ್ರತಿಷ್ಠೆ ಮಾಡಿದ ಕ್ಷಣವೆ ಅವಳ ಮುಖಚಂದ್ರವು ಝುರ್ ಎಂದು ಇಳಿದು ಕಲಾಹೀನವಾಗಿ ಹೋಯಿತು ಬಲ್ಲೆಯಾ; ಆ ವೇಳೆಯಲ್ಲಿ ಏನಾಯಿತೆಂದರೆ–

|| ಪದ. ||

( ದಾಟಿ—ಹರಹರಾ ಆದರಿಸದಾದೆ || ಸ್ತ್ರೀಸಮೂಹದೊಳೆನ್ನ ಕಾಣುತ | ಸರಿದಳೆತ್ತಲೊ ದೋಷದಿ || ಪಲ್ಲ || ಎಂಬ ಹೇಮಾದ್ರೀಶನ ಕನ್ನಡ ಅಷ್ಟ ಪದಿಯೊಳಗಿನ ಪದದಂತೆ. )

**ಹರಹರಾ | ಆದರಿಸದಾದೆ** || ಪಲ್ಲ ||
**ಖೇದಗೊಂಡಾ ಮುಖವ ನೆನೆಯಲು** |
**ಭೇದಿಸುವದೆನ್ನ ಹೃದಯವು** || ಅನುಪಲ್ಲ ||
**ಮಂದಮತಿನಾ ಮನೆಯ ಸತಿಯನು** |
**ಮಂದಿಯೊಳು ಹೊರ ನೂಂಕಿದೆ** ||
**ಚಂದವಲ್ಲೆಂದವಳು ಬೋಧಿಸೆ** |
**ಕುಂದು ನುಡಿಗಳನಾಡಿದೆ** || ೧ ||
**ಅಂದು ಮುನಿಶಿಷ್ಯರು ಸರೋಷದಿಂ** |
**ಮುಂದೆ ಸಾಗಿದರವರೊಳು** ||
**ಹಿಂದೆ ಸಖಿಯಳು ಪೋಗೆ ಕ್ರೋಧದಿಂ** |
**ಹಿಂದಿರುಗಿ ಬೆದರಿಸಿದರು** || ೨ ||

ಅಂದು ಎನ್ನಯ ಪ್ರಿಯಳು ಶಿಷ್ಯರು |
ತಂದೆ ಸಮನೆಂದರಿದಳು ||
ಒಂದು ಮಾತಾಡದಲೆ ಥರಥರ-
ನೆಂದು ನಡುಗುತ ನಿಂದಳು || ೩ ||
ಇತ್ತನಾ ಮನೆಯಲ್ಲಿ ಬರಗೊಡೆ-
ನತ್ತವರು ಕರಕೊಳ್ಳರು ||
ಕುತ್ತಿಗೆಯು ಬಿಗಿದವಳು ದೂರದಿಂ |
ಮತ್ತೆ ಎನ್ನನು ನೋಡ್ದಳು || ೪ ||
ತುಂಬಿ ತುಳುಕುವ ನೀರುಗಣ್ಣಿನ |
ಹಂಬು ನ್ಮೈಯಳ ನೋಟವು ||
ಅಂಬಿನಂಚಿಗೆ ತೊಡೆದ ವಿಷವಿಂ-
ತೆಂಬವೊಲು ವ್ಯಥೆಗೊಳಿಪುದು || ೫ ||

**ಸಾನುಮತಿ**---ಅವ್ವಯ್ಯಾ, ಈತನ ವ್ಯಥೆ ನೋಡಲಾಗಿ ನನಗೆ ಸಹ ದುಃಖವಾಗುತ್ತದೆ.

**ವಿದೂಷಕ**---ಏನಪಾ, ಅವಳನ್ನ ಮುಗಲ ಮ್ಯಾಗ ಯಾರ ಓದರು? ದೆವ್ವೇನ?

**ಅರಸು**—ಛೆ! ಅಂಥ ಪತಿವ್ರತಾ ಸ್ತ್ರೀಯನ್ನು ಅನ್ಯರ್ಯಾರು ಮುಟ್ಟು ವರು? ಮೇನಕಾ ನಾಮಕಳಾದ ಅಪ್ಸರಾಸ್ತ್ರೀಯು ಅವಳ ಮಾತೆಯೆಂದು ಕೇಳಿದ್ದೇನೆ. ಆ ಮೇನಕೆಯ ಸಖಿಯರ್ಯಾರಾದರೂ ಒಯ್ದಿರಬಹುದು ಕಾಣಿಸುತ್ತದೆ.

**ಸಾನುಮತಿ**—ಅವ್ವಯ್ಯ! ಇಂಥಾತನಿಗೆ ಸ್ಮರಣೆ ಹ್ಯಾಗೆ ತಪ್ಪಿದ್ದೀತೆ? ಈತನು ಪುನಃ ಎಚ್ಚರದಲ್ಲಿ ಬಂದದ್ದು ಆಶ್ಚರ್ಯವಲ್ಲ.

**ವಿದೂಷಕ**—ಹೀಂಗ ಇದ್ದಮ್ಯಾಗ ಎಂದಾರ ಅವಳ ಬೆಟ್ಟಿ ಆದೀತೇಳ; ಚಿಂತೆ ಮಾಡಬ್ಯಾಡ.

**ಅರಸು**—ಅದು ಹ್ಯಾಗೆ?

**ವಿದೂಷಕ**—ತಾಯಿತಂದಿಗೊಳಿಗೆ ಮನ್ಯಾಗ ಅತಗೊಂತ ಕುಂಡ್ರಾ ಮಗಳ್ನ ದಿನಾ ಬೆಳಗಿಲೆ ನೋಡೋದಾಗಾಣಿಲ್ಲ ನನ್ನ ಒಡ್ಯಾ.

**ಅರಸು**—ಮಿತ್ರಾ, ನೀನೆಂಬುವದು ನಿಜವೊ. ಆದರೂ ಇನ್ನುಮೇಲೆ ಪುನಃ ಘಟನೆ ಬಿದ್ದೀತೆಂಬುವ ಮಾತು ನನಗೆ ಹ್ಯಾಗೋ ಕಾಣುತ್ತದೆ.

|| **ಪದ** ||

( ದಾಟಿ—ನಲ್ಲಾ ನಿನ್ನವಳೊ । ನಿನಗತಿಪ್ರಿಯಳೊ ॥ ಪಲ್ಲ ॥ ಕಾಂತನೆ ನಿನ್ನ ಗುಣ । ಕಂಜದೊಳೆನ್ನ ಮನ । ಭೃಂಗವ ಮಾಡಿದವಳೊ ॥ ೧ ॥ ಎಂಬ ಪದದಂತೆ )

**ಪ್ರಿಯಳೆಲ್ಲಿಹಳೋ | ಮರಳಿ ತಾ ಬಾರಳೊ ॥ ಪಲ್ಲ ॥**
**ಮನಸಿನೊಳ್ ಕಲ್ಪಿಸಿದಾ । ಮೋಹಿನೀರೂಪೆಎನ್ನಾ |**
**ಕನಸಿನೊಳಗೆ ಬಂದಳೊ ॥ ೧ ॥**
**ಇಂದ್ರಜಾಲದಿಂದೆನ್ನ । ಇಂದಿರಾರೂಪೆನಯ-**
**ನೇಂದ್ರಿಯಕೆಭಾಸಾದಳೊ ॥ ೨ ॥**
**ಇಲ್ಲದೆ ಮನಸಿನ ಹೊಳ್ಳುಭ್ರಾಂತಿಯೊಳು ತಾ ।**
**ಸುಳ್ಳು ಹೆಣ್ಣಾಗಿತೋರ್ದಳೊ ॥ ೩ ॥**
**ಅರಿಯೆ ನೀ ಮಾಯಾಬಲು | ಅರಿದು ಎನ್ನೊಳು ಪುಣ್ಯ**
**ವಿರುವತನಕ ಕಂಡಳೊ ॥ ೪ ॥**
**ಕಠಿಣವಿನ್ನಾಶೆಗಳು | ತಟದಿಂದುರುಳಿದವು |**
**ಕುಟಿಲ ಕುಂತಳೆ ಪೋದಳೊ ॥ ೫ ॥**

**ವಿದೂಷಕ**—ಹಾಂಗ್ಯಾಕ ಅಂತಿ? ಉಂಗುರ ಹೋದಂಥಾದ ಸಿಗಲಿಲ್ಲ ಈಗ? ಇದರ ಮ್ಯಾಗಿಂದ ನೋಡ, ಅವಳೂ ಸಿಕ್ಕಾಳೊ ಸಿಗಾಕಿಲ್ಲೊ ?

**ಅರಸು**— ( ಮುದ್ರಿಕೆಯನ್ನು ನೋಡಿ ) ಈ ಮುದ್ರಿಕೆಗೆ ಅಂಥ ದುರ್ಲಭ ಸ್ಥಾನವು ದೊರೆತಿರಲಾಗಿ ಅದನ್ನು ಅಗಲಿ ಬಂತು. ಅಂದಮೇಲೆ ಇದು ಸಹ ನನ್ನಂತೆ ಶೋಕಪಾತ್ರವಾಗಿದೆ.

ವೃ || **ಪೊಳೆವ ಕೆಂದುಗುರಿಂದೆ ಮನೋಜ್ಞ ಮಾ—**
ಕಸ್ತ್ರೋಟಕ **ದೆಳೆಯ ಪಲ್ಲವಗಳ್ ಗೆಲುವಾ ಬೆರಳ್** ||
**ತಳದಿ ಸಿಲ್ಕಿರಲೆನ್ನೊಲಗಲ್ದು ತೀ—**
**ರ್ಗಳೆದೆ ಮುದ್ರಿಕೆ ನಿನ್ನಯ ಪುಣ್ಯವಾ** ||

**ಸಾನುಮತಿ**—ಈ ಮುದ್ರಿಕೆಯು ಮೂರನೆಯವರ ಕೈಗೆಬಿದ್ದು ಹೋಗಿದ್ದರೆ ಮಾತ್ರ ಶೋಕ ಪಾತ್ರವಾಗುತ್ತಿತ್ತು. ಶಕುಂತಲಾ, ನೀನು ಈ ಹೊತ್ತಿನಲ್ಲಿ ಇಲ್ಲಿಲ್ಲವಲ್ಲೆ ! ನಾನೊಬ್ಬಳೇ ಕರ್ಣ ಸುಖವನ್ನನುಭವಿಸುತ್ತೇನೆ.

**ವಿದೂಷಕ**—ಏನಪಾ, ಈ ಉಂಗರಾ ಆಕಿ ಕೈಯ್ಯಾಗ ಯಾಕ ಕೊಟ್ಟದ್ದಿ ?

**ಸಾನುಮತಿ**—ಈತನು ನನ್ನ ಮನಸಿನಲ್ಲಿದ್ದ ಪ್ರಶ್ನವನ್ನೆ ಮಾಡಿದನು.

**ಅರಸು**—ಹನುಮನಾಯಕಾ ಕೇಳು; ನಾನು ತಪೋವನವನ್ನು ಬಿಟ್ಟು ಬರುವ ವ್ಯಾಳ್ಯದಲ್ಲಿ ಅವಳು ಕಣ್ಣಿನಲ್ಲಿ ದುಃಖಾಶ್ರುಗಳನ್ನು ತಂದು ಎಷ್ಟು ದಿವಸದ ಮೇಲೆ ಆರ್ಯಪುತ್ರರಿಗೆ ನನ್ನ ಸ್ಮರಣೆ ಆದೀತೆಂದು ಕೇಳಿದಳು.

**ವಿದೂಷಕ**—ಅನ್ನಾಣಾ ನೀ ಏನ ಹೇಳಿದಿ?

**ಅರಸು**—ಅಂಬೋಣ ನಾನು ಈ ಮುದ್ರಿಕೆಯನ್ನು ತೆಗೆದು ಅವಳ ಬೆರಳಿನಲ್ಲಿಡಿಸಿ ಇಷ್ಟು ದಿವಸಗಳಲ್ಲಿ ನಾನು ಕರೆಕಳುಹಿಸುತ್ತೇನೆ; ಏನೂ ಚಿಂತೆ ಮಾಡಬೇಡೆಂತ ಹೇಳಿದೆ. ಆದರೆ

|| **ಪದ.** ||

( ದಾಟಿ—" ಪರರಂದ ಮಾತು ಕೇಳಬ್ಯಾಡೆ ಪ್ರಾಣನಾಯಕೆ " ಎಂಬ ಪದದಂತೆ )

**ನಾನಾಡಿದಂತೆ ಮಾಡಲಿಲ್ಲೊ ಕಾಡುಹೃದಯನೊ ||ಪಲ್ಲ ||**
**ಅಕ್ಕರದೊಳಪ್ಪಿ ಸೆರಗಿಲಿ ಕಣ್ಣೊರಸಿನೋಡಿದೆ |**
**ನಾ ಕರೆಕಳುಹುವೆ ಬ್ಯಾಗನೆಂದು ವಚನವಾಡಿದೆ || ೧ ||**
**ಮೃದುಬೆರಳಿಗೆನ್ನ ಮುದ್ರಿಕೆಯುಂಗುರನಿರಿಸಿದೆ ||**
**ಸುಂದರಿಗಿದರೊಳು ನಾಮವೆನ್ನದಿರುವದರಿಸಿದೆ || ೨ ||**
**ಪ್ರತಿದಿನದೊಳೆಂದು ಪೆಸರಿನಕ್ಷರವೆಣಿಸಹೇಳಿದೆ |**
**ಕಡೆದಿನಕೆ ಬರುವರಾಳುಗಳೆಂದನೃತವಾಡಿದೆ || ೩ ||**

**ವಿದೂಷಕ**—ಆಹಾ! ಈಗ ಬೇಕಾರ ಎಲ್ಲಾ ಹೊಂತ್ಯು.

**ಸಾನುಮತಿ**—ವಾಸ್ತವಿಕ; ಅದಕ್ಕಂತೆ ಈತನಿಗೆ ಲಗ್ನವಾದದ್ದರ ಸಂಶಯ ಹುಟ್ಟಿ ಸಾಧ್ವಿಯಾದ ನನ್ನ ಸಖಿಯನ್ನು ಗ್ರಹಣ ಮಾಡಲಿಲ್ಲ. ಅರಸು ಬಹು ಅಧರ್ಮಭೀರು. ಪಾಪಕ್ಕೆ ಬಹಳ ಹೇಸುವಂಥವನು. ಆದರೂ ಇಂಥ ಪ್ರೀತಿಗೆ ಮುದ್ರಿಕೆಯು ಗುರುತು ಯಾತಕ್ಕೆ ಬೇಕಾಗಿದ್ದೀತು?

**ಅರಸು**—ಇದೆಲ್ಲ ಕಷ್ಟವು ಈ ಮುದ್ರಿಕೆಯಿಂದಲೇ! ಇದಕ್ಕೇ ನಿಂದೆ ಮಾಡತಕ್ಕದ್ದು! ಎಲಾ ಸೂಳೇಮಗಂದ!

**ವಿದೂಷಕ**—( ತನ್ನೊಳಗೆ ) ಯಾ ಇವನ! ಉಂಗರಕ ಬೇವುತಾನಂ! ಹುಚ್ಚಗಿಚ್ಚ ಹಿಡೀತೇನಿವಗ! ( ನಕ್ಕು ) ನಾನೂ ನನ್ನ ಬಡಿಗೀವ್ಯಾಗ ಗುಲ್ಲು ಮಾಡತೇನ. ಸೂಳೀಮಗನ, ನಾ ಹ್ಯಾಂಗ ನೆಟಾಗ ಆದೇನಂ, ನೀಯಾಕ ಡೊಂಕಾಡುಸಕಾ ಅದಿ?

**ಅರಸು**—( ಅತ್ತಕಡೆಗೆ ಲಕ್ಷ್ಯಕೊಡದೆ. )

**ಪದ.**

( ವಾಟಿ—" ಏದುಃಖಮೇರಾ ಹರೋರೇ । ಭೋಲಾನಾಥ ದಿಗಂಬರ " ಎಂಬಹಿಂದು ಸ್ಥಾನೀ ಪದದಂತೆ )

**ಯಾತಕ್ಕಗಲಿದೆಕೈಯಾ ॥ ಮುದ್ರಿಕೆಯೆ ನೀ —**
**ನೆನ್ನ ರಮಣಿಯಾ ॥ ಪಲ್ಲ ॥**
**ಆರಕ್ತ ಹಸ್ತ ಸೌಂದರ್ಯಕ್ಕೆಸೋಲ್ದುನೀ ॥**
**ನೀರೊಳು ಮುಳುಗಿದೆಯಾ॥ ನಾಚಿದಿಯಾ ॥**
**ನೀರಜಮುಖಿಯಾ ॥ ೧ ॥**
**ಕೋಮಲಾಂಗುಲಿಯೊಳ್ ಕಠಿಣತೆಇಲ್ಲೆಂದು ॥**
**ಸಾಮಾನ್ಯಗುಣದೆನ್ನಯಾ ॥ ಈ ಹೃದಯಾ ॥**
**ನೀಮರೆದಿರೆಯಾ ॥ ೨ ॥**
**ನಿನ್ನದೂಷಿಸಿ ಮತ್ತೆಮೂರ್ಖನಾಗಲೆಯಾ ॥ ನಿರ್ಜೀವಿ**
**ನೀನವ್ವಯ್ಯಾ॥ಸಜೀವಿಯಾ॥ ದೆನ್ನನೋಡಿದಿಯಾ ॥ ೩ ॥**

**ವಿದೂಷಕ**–ನೀ ಅಳಕೊಂತ ಕುಂತರ ನಾವಿಕಡೆ ಹಸದ ಸಾಯಬೇಕ ಕಾಣತತಿ?

**ಅರಸು**— (ಅದನ್ನುಕೇಳದಲೆ)ಹೇ ಪ್ರಿಯೆ, ನಿನ್ನನ್ನು ಕಾರಣವಿಲ್ಲದೆ ಪರಿತ್ಯಾಗ ಮಾಡಿದೆನಲ್ಲ! ಆದಾಗ್ಯೂ ಈ ಹೊತ್ತಿನಲ್ಲಿ ಅತಿ ಪಶ್ಚಾತ್ತಾಪದಿಂದ ನನ್ನ ಹೃದಯುವು ಸುಟ್ಟುಹೋಗುತ್ತದೆ. ಒಂದು ಸಾರೆಯಾದರೂ ಈ ಸೇವಕನ ಮೇಲೆ ದಯೆಮಾಡಿ ಪುನಃ ದೃಷ್ಟಿಗೆ ಬೀಳಬಾರದೆ?

**ವಿದೂಷಕ**—ಬಂದಳವ!

( ಇಷ್ಟರಲ್ಲಿ ಚತುರಿಕೆಯೆಂಬ ದಾಸಿಯು ಅರಸನಿಂದ ತೆಗೆಯಲ್ಪಟ್ಟ ಶಕುಂತಲೆಯ ಚಿತ್ರವನ್ನು ತೆಗೆದುಕೊಂಡು ಬರುತ್ತಾಳೆ. )

**ಚತುರಿಕೆ**– ಸ್ವಾಮಿ, ಇಕ್ಕೊಳ್ಳಿ; ಚಿಕ್ಕ ದೊರೆಸಾನಿಯವರ ಚಿತ್ರ. ( ಪಟವನ್ನು ಮುಂದೆ ಚಾಚುತ್ತಾಳೆ. )

**ವಿದೂಷಕ**—ಏನ್ ತಗ್ಯಾಣಾ ತಗದ್ದಿ ನನ್ನ ಒಡ್ಯಾ ಚಿತ್ರಾನಾ! ನೋಡಕೊಂತ ಕುಂಡರಬೇಕನಸತತ್ತ್ಯೋ ಎಪಾ! ಏನ್ ಚತುರಾಯಿಕೆಪ್ಪಾ ನಿಂದು! ಏನಪಾ, ಕಾಜಗಾರ ತಿಳವ ಆsತಿ, ಗೋಣ ಹಿಂದಕ ಹೋಗೇತಿ, ಮಾರಿ ಮುಂದಕ ಹಾದsತಿ; ಇದೇನ್ ಚೋಜಿಗಾ ! ( ಲಕ್ಷ್ಯಗೊಟ್ಟು ನೋಡುತ್ತ ) ಅಲ್ಲೇನೂ ಉಳದಿಲ್ಲ ಬಿಡ, ಬಾಯಿ ಬಿಚ್ಚಿ ಮಾತಾಡೂದ ಒಂದ ಉಳದತಿ.

**ಸಾನುಮತಿ**– ಅಹಹಾ ! ಅರಸನ ಕೌಶಲ್ಯವೆಂಥದು ! ನನ್ನ ಸಖಿಯಳಾದ ಶಕುಂತಲೆಯೆ ಎದುರಿನಲ್ಲಿ ನಿಂತುಕೊಂಡಿದ್ದಾಳೆಂಬುವಂತೆ ಕಾಣಿಸುತ್ತದೆ.

**ಅರಸು**—ಈ ಚಿತ್ರವನ್ನು ನಾನು ತೆಗೆದಿದ್ದೇನೆ. ಇದರಲ್ಲಿ ಏನೇನು ನ್ಯೂನವಾಗಿದೆಯೋ ಅದನ್ನು ಮೇಲೆ ಮೇಲೆ ತಿದ್ದುತ್ತೇನೆ. ಆದರೂ:—

|| **ಪದ.** ||

( ದಾಟಿ—ಮರೆಯಲಾರೆನೆ। ಮಮತೆ। ಮರೆಯಲಾರೆನೆ॥ ಮರೆಯಲಾರೆ ಮದುವೆಯೊಳಗೆ। ನೆರೆದವರೊಳು ಸರಿದು ಬಂದು। ಬೆರಳುಂಗುರದಲಿರಿದು ಮುಸುಕು ಮರೆಯಲಿ ಮಖದಿರುಹಿದವಳ ॥ ಪಲ್ಲ ॥ ಎಂಬ ಪದದಂತೆ )

**ಇಳಿಯುಲಿಲ್ಲವೋ ರೂಪ । ವಿಳಿಯುಲಿಲ್ಲವೊ ||**
**ಇಳಿಯುಲಿಲ್ಲ ನಳಿನಮುಖಿಯ**
**ನಳನಳಿಸುವ ಕಳೆಯು ಕೆಲಸ**
**ದೊಳಗೆ ದಣಿದು ಕಂದಿರೆ ಕಂ- |**
**ಗಳಲಿ ಮೆರುವ ಸ್ನೇಹಭಾವವಿಳಿಯ || ಪಲ್ಲ ||**
**ಮಿರುಪ ಫಣಿಗೆ ಜೋಲ್ದ ಸುರುಳು-**
**ಗುರುಳು ಬರೆದೆ ಮಿಸುನಿ ಬಣ್ಣ**
**ದೆರಡು ಗಲ್ಲದೋಳು ಕಾಣ-**
**ದಿರುವ ಸೂಕ್ಷ್ಮ ರೋಮಭಾವ ವಿಳಿಯ || ೧ ||**

**ಸುಳಿವಳ್ಳಿಯು ಮೈಯೊಳು ನಾ**
**ನೆಳಿಹರೆಯುದ ಹೊಳಪು ತೋರ್ದೆ**
**ತಿಳಿವಸನದೊಳಡಗಿದ ಮೊಲೆ-**
**ಗಳಲಿ ಕಿರಿ ಬೆವರಿನ ಭಾವವಿಳಿಯು ॥ ೨ ॥**
**ನೀತಿ ವಿನಯು ಭೀತಿ ಲಜ್ಜೆ**
**ಪ್ರೀತಿನೇಹವೀಗುಣಗಳ**
**ನಾತು ಶ್ರಮದೊಳಾಂತು ನಿಂದು**
**ಮಾತನಾಡುವಂತೆ ಭಾವವಿಳಿಯು ॥ ೩ ॥**

**ಸಾನುಮತಿ**—ಪಶ್ಚಾತ್ತಾಪದಿಂದ ಈತನ ಸ್ನೇಹವು ಹೆಚ್ಚಾಗಿದೆ. ಹಾಗೂ ಈತನಿಗೆ ತನ್ನ ಗುಣಗಳ ವಿಷಯವಾಗಿ ಅಭಿಮಾನವಿಲ್ಲ. ಆದ್ದರಿಂದ ಹೀಗೆ ನಿಗರ್ವದಿಂದ ಮಾತನಾಡುತ್ತಾನೆ.

**ವಿದೂಷಕ**--( ಚಿತ್ರವನ್ನು ನೋಡುತ್ತ ) ಏನಪಾ, ಮೂರು ಮಂದಿ ಹೆಣ್ಣು ಮಕ್ಕಳು ಒಬ್ಬರಕಿಂತ ಒಬ್ಬರು ಚಲವರ ಕಾಣತಾರು; ಇವರೊಳಗ ಸಕುಂತರಿ ಯಾವಳು ?

**ಸಾನುಮತಿ**—ಅಯ್ಯೋ ಎಂಥಾ ಮೂಢನೀತಾ ! ಲಾವಣ್ಯ ಪರೀಕ್ಷೆ ಇಲ್ಲ ಈತನಿಗೆ.

**ಅರಸು**—ಇವರಲ್ಲಿ ನಿನಗೆ ಶಕುಂತಲೆ ಯಾವಳೆಂದು ತೋರುತ್ತಾಳೆ ?

**ವಿದೂಷಕ**—( ನೆಟ್ಟಗೆ ನೋಡಿ ) ಹೇಳತೇನ ನೊಡವ. ಈ ಚಿಗರ ಮಿಂಚೂ ಮಾವಿನಗಿಡಾ ಅತೆಲ್ಲಾ, ಕಿದರ ಬುಡಕ ದಣದಕ್ಯಾಸಿ ಸೋಲಗೈ ಇಳಿಬಿಟ್ಟುಕೊಂಡ ನಂಬಿ ನಿಂತದಾಳು, ನೆತ್ತೀ ಮ್ಯಾಗಿನ ಕೂದಲಾ ತುಸಾ ತುಸಾ ಉಂಗರಗಟ್ಟೇದಾವು, ತುರಬ ಸೈಲಾಗೇತಿ, ಅದರ ಮ್ಯಾಗಿನ ದುಂಡ ಮಲ್ಲಿಗೀ ಮಾಲಿ ಬಾಡಿ ಹೋಗೇತಿ, ಹಣೀ ಮ್ಯಾಗ ಬೆವತಾಳು, ಗಲ್ಲ ಕೆಪಾಗ ಕಾಣತಾವು, ಕಿವಳ ಸಕುಂತರಿ ಅಲ್ಲ ? ಈಚಿಕಡೆ ನಿಂತವರಿಬ್ಬರೂ ಆಕೀ ಗೆಳತೇರ ಅದಾರು; ಅಬಬ ! ಈಟ ತಿಳ್ಯಾಣಿಲ್ಲೇನ್ರೀ ನಮುಗ !

**ಅರಸು**—ಹನುಮನಾಯಕಾ, ನೀನೊಳ್ಳೇ ನಿಪುಣನಾಗಿದ್ದೀಯೋ. ( ಕಣ್ಣೊರಸಿಕೊಂಡು ) ಚುತುರಿಕೆ, ಹೊತ್ತು ಹೋಗಲಿಕ್ಕೆ ಸಾಧನವಾದಂಥ ಈ ಚಿತ್ರವು ಇನ್ನೂ ಪೂರ್ಣವಾಗಿಲ್ಲ. ಅದರಿಂದ ಚಿತ್ರದ ಸಾಮಗ್ರಿಗಳನ್ನು

ಇಲ್ಲಿ ತೆಗೆದುಕೊಂಡು ಬಾ; ಮೊದಲು ನಾನು ನನ್ನ ಸಖಿಯಳ ಕಣ್ಣಿನಿಂದ ದುಃಖಾಶ್ರುವಿನಂತೆ ಬಣ್ಣದ ನೀರು ಇಳಿಯುತ್ತದೆ. ಅದನ್ನು ತಿದ್ದಬೇಕಾಗಿದೆ ತೀವ್ರ ಹೋಗು.

**ಶ್ಲೋಕ** || **ಕದಪ್ರಗನ್ನಡಿಯೋಳ್ ಗುಡಿಗಣ್ಣಿನಿಂ |**
**ದುದರಿ ಜಾರುವ ಬಣ್ಣದ ಬಿಂದುವೀ ||**
**ಹೃದಯದೋಳ್ ಕರುಣಾರಸಮುಕ್ಕಿಬೀ |**
**ಳ್ವದರದೇ ಪ್ರತಿಬಿಂಬವದಣ್ಣ ಕೇಳ್ || ೧ ||**

**ಚತುರಿಕೆ**—ಹಿಡಿಯಪ್ಪಾ ಹನುಮಪ್ಪಾ ಈ ಚಿತ್ರಪಟವನ್ನು, ನಾನು ಹೋಗುತ್ತೇನೆ.

**ಅರಸು**—ಇಲ್ಲಿ ತಾ ನನ್ನ ಕೈಯಲ್ಲಿ.

( ಚತುರಿಕೆಯು ಅರಸನ ಕೈಯಲ್ಲಿ ಚಿತ್ರವನ್ನು ಕೊಟ್ಟು ಹೋಗುತ್ತಾಳೆ. )

**ಅರಸು**—ಈಗ ಏನು ಚಮತ್ಕಾರವಾಯಿತು ನೋಡಿದೆಯಾ ?

**ವಿದೂಷಕ**—ಏನಪಾ ಅದು?

**ಅರಸು**—ಹೇಳುತ್ತೇನೆ ಕೇಳು

|| **ಪದ** ||

( ದಾಟಿ—ಗುಮಾನಿಥೊ,ಲಾವೇ । ನಾಜಿಯೋಜೀಪರವೇಸ್ ॥ ಕಬಕಿ ವ್ಯೆತಾಡಿ ತುಮ್ ಸೇಕೀ । ಅಜಿ ಅರಜಕರೂಭೂರೆ । ಇತನಿ ಅರಜಮೇರಿಮಾನೂರೇ ॥ ಎಂಬ ಹಿಂದುಸ್ಥಾನೀ ಕುಮರಿಯಂತೆ )

**ಚಿತ್ರದ ರೂಪಕ್ಕೆ | ನಾ ಮರುಳಾದೆನಯ್ಯಾ || ಪಲ್ಲ ||**
**ಅಸಮರೂಪ ಸಂಪನ್ನೆ । ಎಸೆದಿದಿರೊಳೆನ್ನೋಳ್ ಪ್ರಾ-**
**ರ್ಥಿಸುತನಿಂದಿರೆ ಮೋರೆ ನೋಡದೆ || ೧ ||**
**ನದಿಯದಾಂಟಿ ಮುಂದಕ್ಕೆ । ಮದನ ನಟವಿಯೋಳ್ ಬಂದೆ।**
**ಮೃಗಜಲಕಾಶೆ ನೆರೆ ಮಾಡಿದೆ || ೨ ||**
**ಹೆಣ್ಣಿನ ಗೋಳಿಗ್ದೇಸದೆ। ಕಣ್ಣೀರನೊರಿಸದೆ ||**
**ಬಣ್ಣದಶ್ರುಗಳಳಿಸ ಹೋದೆ || ೩ ||**

**ವಿದೂಷಕ**—( ತನ್ನೊಳಗೆ) ಕರೇವಂದರೂ ಹೊಳೀ ದಾಟಿ. ಬಿಸಲುಗುದರಿಗೆ ಆಸೆ ಮಾಡಿದ ನನ್ನ ಒಡ್ಯಾ. (ಅರಸಗೆ) ಮತ್ತೇನರ ಬರೂದsಕೆ ಏನಪಾ ಚಿತ್ತರದಾಗ?

**ಸಾನುಮತಿ**—ಸಖಿಯಳಿಗೆ ಪ್ರೀತ್ಯಾಸ್ಪದವಾದಂಥ ಸ್ಥಾನವನ್ನು ಬರೆಯತಕ್ಕದ್ದಿರಬಹುದು.

**ಅರಸು**—ಅಹುದು.

**|| ಪದ. ||**

( ದಾಟಿ—ಹೇಗೆ ನಿನ್ನ ಬಿಟ್ಟು ಇರಲೊ | ಎಂತು ಕಳುಹಿ ಸೈರಿಸಲಿ || ಎಂಬ ಪದದಂತೆ )

**ತೋರಿಸಬೇಕಯ್ಯಾ ಎನ್ನ | ತರುಣಿಯುಳಿಹ ಸ್ಥಾನ ||ಪಲ್ಲ||**
**ಮಹಾನದೀ ಮಾಲಿನಿಯಾ | ಮಳಲುವೆಟ್ಟದ ಮೇಲೆ**
**ಮೋಹಿಸಿ ಬಂದಿಹ ಹಂಸ | ಮಿಥುನ ಕ್ರೀಡೆಯು ಭಾವ ||೧||**
**ಪಾರ್ವತಿಪಿತನ ಚೆಲ್ವ | ಪಾದದೊಳಿಹ ಪರ್ವತ**
**ಪಾವನತರಗಳು ಮ್ಯಾಲ್ | ಪವಡಿಸಿದಾವುಗಳ ||೨||**
**ಹಲವು ವೃಕ್ಷಗಳು ಮೇಲ್ | ಹಬ್ಬಿರುವ ಬಳ್ಳಿಗಳು |**
**ಎಲರಿನಿಂದೆ ಧೌತವ- | ಲ್ಕಲಗಳ್ತಾರಾಡುವ ಭಾವ ||೩||**
**ನೆರಳೊಳು ಕುಳಿತ ಗಂ- | ಡೆರಳೆಯು ನೇತ್ರವನ್ನು**
**ನೆರೆನೇಹದಿಂ ಕೋಡಿನಿಂ | ತುರಿಚುವ ಹರಿಣಿಯು ||೪||**

**ವಿದೂಷಕ**—( ತನ್ನೊಳಗೆ ) ಹೀಂಗೇನ ? ಮಳ ಮಳ ಉದ್ದ ಗಡ್ಡದ ನುಸಿಗೊಳನ ತಗದಕ್ಯಾಸಿ ಕಾಜಗಾನೆಲ್ಲಾ ತುಂಬಿ ಬಿಡತಾನಂತ ಮಾಡಿದ್ನಿ.

**ಅರಸು**—ಮಿತ್ರಾ ಶಕುಂತಲೆಯ ಆಭರಣಗಳನ್ನು ತೆಗೆಯತಕ್ಕದ್ದಿರುತ್ತದೆ. ಅವನ್ನೆಲ್ಲಾ ನಾನು ಮರತು ಬಿಟ್ಟೆನಲ್ಲೊ.

**ವಿದೂಷಕ**—ಅವೆಂತಾವಪ್ಪಾ ?

**ಸಾನುಮತಿ**-ವನದಲ್ಲಿ ವಾಸ ಮಾಡಿದ್ದಕ್ಕೂ ಅವಳ ಸೌಕುಮಾರ್ಯಕ್ಕೂ ಶೋಭಿಸುವಂಥವೇ ಆಭರಣಗಳಿರಬಹುದು.

**ಅರಸು**—ಹೇಳುತ್ತೇನೆ ಕೇಳು.

**|| ಪದ ||**

( ದಾಟಿ—" ಓರೆ ಓರೆ ನೋಡಿದರೇನು ಫಲ ಎರಳೆ ಲೋಚನೆ " ಎಂಬ ಪದದಂತೆ. )

**ಆಭರಣಗಳಿಡಲಿಲ್ಲ ಸಖಿಯು | ಬಳ್ಳಿಮೆಯ್ಯೊಳು || ಪಲ್ಲ ||**
**ಕರ್ಣದಲ್ಲಿ ಮೆರೆವ ಶಿರಿಷಸುಮದ ಕೇಸರಾ |**
**ಕೆನ್ನೆಯೊಳು ಜೋಲ್ದು ಶೋಭಿಸುವತಿಸುಂದರಾ || ೧ ||**

**ಮೊಲ್ಲೆ ಮೊಗ್ಗೆ ಮಾಲೆಗಳುರದಲ್ಲಿ ಹೊರಳುವಾ |**
**ಸಲ್ಲಲಿತ ಲವಂಗ ಸುಮದ ಗೊಂಡೆ ಜೋಲುವಾ || ೨ ||**
**ಕಮಲತಂತುವೆಣಿದ ಹಲವು ಕರದಕಂಕಣಾ |**
**ಕಚನಿಚಯದಿಕೇತಕಿಎಳೆ | ಕಿಸಲಯುವಕಣಾ || ೩ ||**

**ವಿದೂಷಕ**—ಏನಪಾ, ಈ ನಿನ್ನ ಗೆಳತಿ ಕಮಲದಂಥಾ ಅಂಗೈಲೆ ಮಾರಿ ಯಾಕ ಮುಚಿಗೊಳತಾಳು? (ಲಕ್ಷಗೊಟ್ಟುನೋಡಿ) ಹಾ ಹಾ ತಿಳಿತ! ಈ ಮಂಗ ನನ್ನ ಮಗಂದು ಗುಂಗೀಹುಳಾ ಹೂವಂತಮಾಡಿ ರಸಾ ಉಣ್ಣಾಕ ಬರತತಿ ಕಾಣವ.

**ಅರಸು**—ಹೊಡೆ ಹೊಡೆ ಸೂಳೆಮಗಂದನ್ನ!

**ವಿದೂಷಕ**—ನಾ ಹೊಡೀಲೀ? ಬಂಡಾಟ ಮಾಡವರ ಪಾರಪತ್ತಿ ಮಾಡವರು ನೀವಲ್ರಿ? ಅದನ್ನ ನೀವ ಹೊಡೀಬೇಕರಿ.

**ಅರಸು**—ಎಲೋ ಮಧುಕರಾ, ಪುಷ್ಪಗಳಿಂದ ತುಂಬಿಕೊಂಡಂಥ ಲತಾವೃಕ್ಷಗಳು ನಿನ್ನನ್ನು ಆದರಸತ್ಕಾರಗೊಳಿಸತಕ್ಕದ್ದು. ಹೀಗಿರಲಾಗಿ ನನ್ನ ಪ್ರಾಣಪ್ರೀಯಳ ಮುಖಕ್ಕೆ ಹಾತೊರೆದು ಏನು ಕಾರಣ ಬರುತ್ತಿ? ವ್ಯರ್ಥ ಶ್ರಮತೆಗೆದುಕೊಳ್ಳಬೇಡ ಕಂಡೆಯಾ. ಅತ್ತ ಕಡೆಗೆ ತಿರುಗಿ ನೋಡು.

|| **ಪದ** ||

(ದಾಟೀ—ಶ್ರೀರಾಧಾ ಪ್ಯಾರಿಹೋ | ದೇಡಾರೊ ಚಾಂಸಿ ಹಮಾರಿ ಶ್ರೀರಾಧಾ || ಏಚಾಂಸಿಮೇಮೇರಾಪ್ರಾನ ಬಸತಹೈ | ಸೋ ಚಾಂಸಿಗಯಿ ಚೋರೀರೇ ಎಂಬ ಪದದಂತೆ.)

**ಎನ್ನಯೋ ಸಖಿಯೊ | ಭ್ರಮರಾ ನೀ ಕಾಡಬ್ಯಾಡವೋ ||ಪಲ್ಲ||**
**ಕಮಲವೆನುತ ನೀ | ಭ್ರಮಿಸಿ ಮುಖಕೆ ಸಂ- |**
**ಭ್ರಮದೊಳ್ ಸುತ್ತರಿಯ ಬ್ಯಾಡೊ || ೧ ||**
**ಹಸಿದು ನಿನ್ನನೆ ಈಕ್ಷಿಸುತ ಭ್ರಮರಿ ಮಧು |**
**ರಸವೀಂಟಳವಳ ನೋಡೋ || ೨ ||**
**ಅರಡಿಯನೆ ನೀ | ನರಳಿನತಿಥಿಯೋ**
**ಭೀರುವ ಅಂಜಿಸಲಿ ಬ್ಯಾಡೊ || ೩ ||**

**ಸಾನುಮತಿ**—ಅಯ್ಯೋ! ಈತನು ಕೇವಲ ನಿಜವೆಂದು ತಿಳಿದು ಭ್ರಮರವನ್ನು ನಿವಾರಣಮಾಡುತ್ತಾನೆ.

**ವಿದೂಷಕ**—ಅದ್ಯಾಕ ಹೋದೀತ ಬಿಡ, ಅಂದಾಕಾರಾ ಯಡವಟ್ಟ ಜಾತಿ.

**ಅರಸು**—ಹೀಗೋ, ಹೋಗುವದಿಲ್ಲವೆ? ಹಾಗಾದರೆ ನಾನು ಏನು ಮಾಡುವೆನೆಂದರೆ ಹೇಳುತ್ತೇನೆ ಕೇಳು.

|| **ಪದ.** ||

( ದಾಟಿ—ಬದಲಗಯಿ ನೈನಹೊ। ಭೀನತನಾಹಿ ॥ ಪಲ್ಲ॥ ತುಝಾ ಹೋಯತೋ ತೋಡಿಯೇರೇ । ಪ್ರೀತನ ತೋಡಿಯೋ ಜಾಯ । ಕಾಗದ ಹೋತೋ ಬಾಚೀತೀರೆ। ಕರ ಮನ ಬಾಚೀ ಜಾಯ ॥ ೧ ॥ ಎಂಬಂತೆ. )

**ಸಖಿಯು ಬಿಡೋ ನೀ ಕೇಳೊ। ಶಿಕ್ಷಿಸುವೆನೊ ॥ಪಲ್ಲ॥**
**ನಲ್ಲೆಯ ಕೋಮಲಾಧರಾ। ದಲ್ಲಿ ರೋಲಂಬನೇ ನೀ**
**ಮುಳ್ಳುಗಾಲಿಡಲಿಬ್ಯಾಡೊ। ಒಳ್ಳೆ ಮಾತಿಲಿ ನೀ ॥೧॥**
**ತೊಂಡೆವಣ್ಣೆಂಪಿನಧರಾ। ಕಂಡುರೆನಾರತಿಯೊಳ್**
**ಉಂಡೆನಲ್ಲೋ ಜತನದೊಳ್॥ ದಂಡಿಸುವೆನೆನ್ನಯು ॥೨॥**
**ಇಂದು ಎನ್ನ ಸುಂದರಿಯು। ಚೆಂದುಟಿ ಮುಟ್ಟಿದರೆ**
**ಇಂದೀವರೋದರದೊಳು। ಬಂಧಿಸುವೆನೆನ್ನಯು ॥ ೩ ॥**

**ವಿದೂಷಕ**—ಅಬಬ, ಏನ ಉಗ್ರ ದಂಡಪಾ ಇದು! ಕಮಲದ ಹೊಟ್ಟೀ ಬಂದೀಕಾನ್ಯಾಗ ಹಾಕತೀನ ಅಂದಮ್ಯಾಗ ಅವಳ ನಿಂತಾಳ ಎಂದಾರ? ( ನಕ್ಕು ತನ್ನೊಳಗೆ) ಇವಗಂತೀ ತೀರಾ ಹುಚ್ಚ ಹಿಡೀತ; ನಾನೂ ಇವನ ಸಂಗಾತ ಹುಚ್ಚ ಆದ್ನಿ. (ಪ್ರಕಾಶವಾಗಿ) ಏನಪಾ, ಮೈಮ್ಯಾಗ ಎಚ್ಚರ ಅsತೆ? ಇದ ಚಿತ್ತರದಾಗಿನ ಗೊಂಬಿಕಾಣವ! ನಿನ ಗೆಣತಿ ಅಲ್ಲ.

**ಅರಸು**—ಏನು? ಚಿತ್ರವೆ? ನನ್ನ ಪ್ರಾಣಸಖಿಯುಳಲ್ಲವೆ?

**ಸಾನುಮತಿ**—ನನಗೂ ಕೂಡ ಭ್ರಾಂತಿಯುತ್ಪನ್ನವಾಗುತ್ತದೆ. ಈತನಿಗಾಗುವದೇನಾಶ್ಚರ್ಯ.

**ಅರಸು**—ಗೆಳೆಯ, ಎಂಥ ಘಾತುಕತನ ಮಾಡಿದೆಯೊ!

|| ಪದ. ||

( ದಾಟಿ—ರಂಗಯ್ಯಾ ಬಾರನೆ ಸಖಿಯೇ | ಪಲ್ಲ | ಮಾರಾ | ಕ್ರೂರಾ | ಘೋರ ತಾಪದಿಂದ ತಾರಾಪತಿಗೆ ಶರಣ್ಹೋದೆ || ೧ || ಎಂಬ ಪದದಂತೆ.

ಎಚ್ಚರವ್ಯಾಕೆ ಮಾಡಿದ್ಯೆ | ಎನ್ನನು || ಪಲ್ಲ ||
ಚಿತ್ತರವೆ ಎನ್ನ ಪ್ರತ್ಯಕ್ಷ ಸಖಿಯೆಂದು |
ಅತ್ಯಂತ ಹರುಷದೊಳಿದ್ದೆ || ೧ ||
ಅಕಟ ಸೈರಿಸೆನೆನ್ನ | ಸಖಿಯು ಸಂದರುಶನ
ಸುಖದೊಳು ಸಾಮುಳುಗಿದ್ದೆ || ೨ ||
ಪ್ರಾಣಸಖಿಯುಳಿನ್ನು | ಪುನರಪಿ ಚಿತ್ರದೊಳ್ |
ಕಾಣಿಸುವಂತೆ ಮಾಡಿದೆಲ್ಯೆ || ೩ ||

( ಕಣ್ಣೀರು ಸುರಿಸುತ್ತಾನೆ. )

**ಸಾನುಮತಿ**—ಪೂರ್ವಾಪರ ವಿರೋಧಿಯಾದ ಈ ವಿರಹದುಃಖ ಮಾರ್ಗವು ಅಪೂರ್ವವಾಗಿ ತೋರುತ್ತದೆ.

**ಅರಸು**—ಮಿತ್ರಾ, ಪ್ರಿಯಾ ವಿರಹದ ಈ ಅಖಂಡವಾದ ದುಃಖವನ್ನು ನಾನು ಹ್ಯಾಗೆ ಸೈರಿಸಲಿ! ಒಂದು ಕ್ಷಣಮಾತ್ರವಾದರೂ ವಿಶ್ರಾಂತಿಯಿಲ್ಲ!

|| ಪದ ||

( ದಾಟಿ—ಆಖೀ ಜೋಲಗ ಗಯಿವೆ | ನಾದನ ಮೋರಾರೇ || ಪಲ್ಲ || ಕಿನೇಸೋತನ ಮಾರೀ | ಆಖೀ ಜೋಲಗ ಗಯಿವೆ | ಜಿಯರಾವೇ ಬಾಸ ಗಯಿವೇ | ನಾದನ ಮೋರಾರೇ || ಎಂಬ ಪದದಂತೆ. )

ಕಂಜಾಕ್ಷಿಯುಳಿಲ್ಲೊ | ಕಾಂಬುವದೆಂತೊ || ಪಲ್ಲ ||
ಹಗಲು ರಾತ್ರಿಯಲಿ ನಾ- | ನಗಲ್ದಿರುವ ದುಃಖ||
ಮಿಗಿಲ್ಯಾಗೆ ಸೈರಿಸಲೊ || ಕಾಂಬುವಾ || ೧ ||
ಸುಂದರಾಂಗಿಯು ಕನ | ಕನಸಿನಲ್ಲೀಕ್ಷಿಸುವೆ-
ನೆಂದರೆ ನಿದ್ರೆ ಬಾರದೊ || ಕಾಂಬುವ || ೨ ||
ಚಿತ್ರದೊಳ್ ಚೆಲುವಿಕೆಯ ಚೆನ್ನಾಗಿ ನೋಡುವೆನೆ |
ನೇತ್ರದೊಳ್ ಬಾಷ್ಪಗಳೊ || ಕಾಂಬುವದೆಂತೋ || ೩ ||

**ಸಾನುಮತಿ**—( ತನ್ನೊಳಗೆ ) ಎಲೋ ಭೂಪತಿಯೆ, ಧನ್ಯನೋ ನೀನು! ಹಿಂದಿರುಗಿ ಕಳುಹಿಸಿದಂಥ ಶಕುಂತಲೆಯ ದುಃಖವನ್ನು ಅವಳ ಸಖಿ ಯಳಾದ ನನ್ನೆದುರಿಗೆ ಪೂರ್ಣವಾಗಿ ಪರಿಮಾರ್ಜನ ಮಾಡಿಬಿಟ್ಟಿ.

( ಇಷ್ಟರಲ್ಲಿ ಚತುರಿಕೆಯೆಂಬ ದಾಸಿಯು ಬರುತ್ತಾಳೆ. )

**ಚತುರಿಕೆ**---ಜಯತು ಜಯತು ಭರ್ತಾ !

**ಅರಸು**---ಯಾರು ? ಚತುರಿಕೆ ! ಚಿತ್ರಸಾಮಗ್ರಿಯನ್ನು ತಂದೆಯಾ ?

**ಚತುರಿಕೆ**---ಚಿತ್ರಸಾಮಗ್ರಿಯ ಕರಡಿಗೆಯನ್ನು ಇತ್ತ ಕಡೆಗೆ ತೆಗೆದು ಕೊಂಡು ಬರುತ್ತಿದ್ದೆ.

**ಅರಸು**---ಅಷ್ಟರಲ್ಲೇನಾಯಿತು ?

**ಚತುರಿಕೆ**---ಅಷ್ಟರಲ್ಲಿ ತರಲಿಕೆಯನ್ನು ಕೂಡಿಕೊಂಡು ಬರುತ್ತಿದ್ದ ವಸುಮತಿ ಧೊರೆಸಾನಿಯವರು ಬಂದು ನನ್ನ ಕೈಯಲ್ಲಿಯ ಕರಡಿಗೆಯನ್ನು ನೋಡಿ, ' ತಾವೇ ಆರ್ಯಪುತ್ರರಿಗೆ ಕೊಡುತ್ತೇವೆಂದು ಬಲಾತ್ಕಾರದಿಂದ ಕಸಿದು ಕೊಂಡರು.

**ವಿದೂಷಕ**---ನೀ ಅವಳ ಕೈಯಾಗ ಸಿಗದ ಬಂದದ್ದು ಬಲ ಹೆಚ್ಚಿನ ಮಾತ ಬಿಡ.

**ಚತುರಿಕೆ**---ದೇವಿಯ ಸೆರಗು ಗಿಡಕ್ಕೆ ತಗಲಿಕೊಂಡಿತ್ತು. ಅದನ್ನು ತರಲಿಕೆಯು ಬಿಡಿಸುತ್ತ ನಿಂತಳು. ಅಷ್ಟರಲ್ಲಿ ನಾನು ಬಿಡಿಸಿಕೊಂಡು ಓಡಿ ಬಂದೆ.

**ಅರಸು**---ಮಿತ್ರನೆ, ಕೇಳು. ಇತ್ತ ಕಡೆಗೆ ದೇವಿಯು ಬರುತ್ತಾಳೆ. ತನ್ನ ಬಹುಮಾನವಿಡಬೇಕೆಂದು ಅವಳಿಗೆ ಬಹು ಗರ್ವವುಂಟು. ಈ ಚಿತ್ರ ವನ್ನು ಅವಳು ನೋಡಿದರೆ ಅನರ್ಥ ಕಲಹ ಮಾಡುವಳು. ಕಾರಣ ಇದನ್ನು ತೆಗೆದುಕೊಂಡು ನೀನು ಇಲ್ಲಿಂದ ಹೋಗು. ಚಿತ್ರ ಮಾತ್ರ ಜೋಕೆ.

**ವಿದೂಷಕ**---ಚಿತ್ತುರವೂ ನಾನೂ ಇಬ್ಬರೂ ಜೋಕೀಲೆ ಇರತೇವು. ಚಿಂತೀ ಮಾಡಬ್ಯಾಡ. ನಾ ಮೇಘಡಂಬರೀ ಗೋಪುರದಾಗ ಅಡಗಿಕೊಂಡಿರ ತೇನು. ಈ ಅಂತಪ್ಪುರದ ಅರಿಷ್ಟ ನಿನ್ನ ಬಿಟ್ಟ ಹೋದಮ್ಯಾಗ ನನ್ನ ಕರಿ; ಆ! ( ಎಂದು ತೀವ್ರದಿಂದ ಹೊರಟು ಹೋಗುತ್ತಾನೆ. )

**ಸಾನುಮತಿ**—( ತನ್ನೊಳಗೆ ) ಅನ್ಯ ಸ್ತ್ರೀಯು ಈತನ ಮನಸ್ಸನ್ನು ವ್ಯಾಪಿಸಿರಲಾಗಿಯೂ ಮೊದಲಿನ ಸ್ನೇಹ ತೋರುವದನ್ನು ಈತನು ಬಿಡುವದಿಲ್ಲವಲ್ಲ! ಈತನ ಸ್ನೇಹ ಇವಳಲ್ಲಿ ಸಿಥಿಲವಾಗಿ ಬರೇ ವಿನಯದ ರೂಪವನ್ನು ತಾಳಿದಂತೆ ತೋರುತ್ತದೆ.

( ಇಷ್ಟರಲ್ಲಿ ಪ್ರತೀಹಾರಿಯು ಕೈಯಲ್ಲಿ ಪತ್ರವನ್ನು ಹಿಡಿದುಕೊಂಡು ಬರುತ್ತಾಳೆ. )

**ಪ್ರತೀಹಾರಿ**—ಜಯತು ಜಯತು ದೇವಃ.

**ಅರಸು**—ಹೇ, ವೇತ್ರವತೀ, ದಾರಿಯಲ್ಲಿ ನೀನು ದೇವಿಯನ್ನು ಕಾಣಲಿಲ್ಲವೇ ?

**ಪ್ರತೀಹಾರಿ**—ಸ್ವಾಮಿ, ನಾನು ಕಂಡೆ. ನನ್ನ ಕೈಯಲ್ಲಿ ಪತ್ರವಿದ್ದದ್ದನ್ನು ನೋಡಿ ತಿರುಗಿ ಹೋದರು.

**ಅರಸು**—ಅವಳು ತಿಳಿದವಳಿದ್ದಾಳೆ. ರಾಜಕಾರ್ಯದಲ್ಲಿ ವಿಘ್ನವಾಗಬಾರದೆಂದು ತಿರುಗಿ ಹೋದಳು.

**ಪ್ರತೀಹಾರಿ**—ಸ್ವಾಮಿ, ಅಮಾತ್ಯರು ವಿಜ್ಞಾಪನೆ ಮಾಡಿಕೊಂಡಿದ್ದಾರೆ. ಅದೇನೆಂದರೆ, ಈವೊತ್ತು ದ್ರವ್ಯವೆಣಿಸುವದು ಬಹಳಿದ್ದದರಿಂದ ಅವಕಾಶಾನುರೂಪವಾಗಿ ಪೌರಜನರ ಒಂದೇ ಕಾರ್ಯವನ್ನು ನೋಡಿರುತ್ತೇವೆ. ಅದನ್ನು ಪತ್ರದಲ್ಲಿ ಕಾಣಿಸಿದ್ದೇವೆ, ಮಹಾರಾಯರ ಅವಲೋಕನದಲ್ಲಿ ಬರಬಹುದೆಂದು ಹೇಳಿದ್ದಾರೆ.

**ಅರಸು**—ಪತ್ರಿಕೆಯನ್ನು ನೋಡುವ.

**ಪ್ರತೀಹಾರಿ**—( ಪತ್ರಿಕೆಯನ್ನು ಮುಂದೆ ಚಾಚುತ್ತಾಳೆ. )

**ಅರಸು**—( ಅದನ್ನು ತೆಗೆದುಕೊಂಡು ) ಏನೆಂದು ಬರೆದಿದ್ದಾನೆ ಅಮಾತ್ಯನು ? " ಸಮುದ್ರ ವ್ಯವಹಾರಿಯಾದ ಧನಮಿತ್ರಸೆಟ್ಟಿ ಸಾವಕಾರನು ಹಡಗ ಮುಳುಗಿ ಸಮುದ್ರದಲ್ಲಿ ಮರಣಹೊಂದಿದನು. ಆತನ ಹೊಟ್ಟೆಯಲ್ಲಿ ಸಂತಾನವಿಲ್ಲ, ಆದ್ದರಿಂದ ಆತನ ದ್ರವ್ಯಸಂಚಯವೆಲ್ಲ ರಾಜಭಾಂಡಾರಕ್ಕೆ ಬರತಕ್ಕದ್ದು. ಅರಿಕೆಯಾಗಬೇಕು. ಇತಿ ವಿಜ್ಞಾಪನೆ " ( ದುಃಖದಿಂದ ) ಹೊಟ್ಟೆಯಲ್ಲಿ ಸಂತಾನವಿಲ್ಲದಿರುವದು ಬಹು ಕಷ್ಟ. ಹೇ ವೇತ್ರವತಿಕೆ ಆ

ಸಾವುಕಾರನು ಬಹು ಸಂಪನ್ನನಾಗಿದ್ದನು. ಆತನಿಗೆ ಬಹುಮಂದಿ ಹೆಂಡಿರಿರಬಹುದು. ಅವರಲ್ಲಿ ಯಾವಳಾದರೂ ಗರ್ಭಿಣಿಯಾಗಿರಬಹುದು, ಶೋಧ ಮಾಡಿಸು.

**ಪ್ರತೀಹಾರಿ**—ಸ್ವಾಮಿ, ಸಾಕೇತಪುರದ ಸೆಟ್ಟಿಯ ಮಗಳನ್ನು ಆತನಿಗೆ ಕೊಟ್ಟಿದೆ. ಅವಳ ಬಯಕೇ ಭೋಜನಸಮಾರಂಭವಾಯಿತೆಂದು ಸುದ್ದಿ ಕೇಳುತ್ತೇವೆ.

**ಅರಸು**—ಹಾಗಾದರೆ ಪಿತೃಧನವು ಗರ್ಭವಿದ್ದಕಡೆಗೆ ಹೋದೀತೆಂದು ಅಮಾತ್ಯರಿಗೆ ಶ್ರುತಪಡಿಸು ಹೋಗು.

**ಪ್ರತೀಹಾರಿ**—ಮಹದಾಜ್ಞೆ ( ಹೋಗಲಾರಂಭಿಸುತ್ತಾಳೆ )

**ಅರಸು**—ಸ್ವಲ್ಪ ನಿಲ್ಲು.

**ಪ್ರತೀಹಾರಿ**—ಜೀಯಾ, ಮತ್ತೇನು ?

**ಅರಸು**—ಆ ಸಾವುಕಾರನಿಗೆ ಸಂತತಿ ಇರಲಿ ಅಥವಾ ಇಲ್ಲದಿರಲಿ, ಆತನ ದ್ರವ್ಯವು ರಾಜಭಾಂಡಾರಕ್ಕೆ ಬರಲಾರದೆಂದು ಹೇಳು. ಮತ್ತು—

ಕಂದ || **ದುಷ್ಕರ ಹೊರ್ತನ್ಯರೊಳಾ-**
**ಪ್ತೇಷ್ಟರ್ಮಡಿಯಲವರ ಬಳಿಯೊಳ್ ದುಷ್ಯಂತಂ**
**ಸೃಷ್ಟಿಯೊಳಿಹ ವರೆಗಿಹ ತಾಂ**
**ಕಷ್ಟಂ ಬಡಲಾಗದೆಂದು ಡಂಗುರ ಹೊಡಿಸೈ** || ೧ ||

ಹೀಗೆಂದು ಅಜ್ಞಾಪಿಸಿದ್ದಾರೆಂದು ಹೇಳಿ ಬಾ, ಹೋಗು.

**ಪ್ರತೀಹಾರಿ**—ಅಹುದು ಜೀಯಾ, ಹೇಳುತ್ತೇನೆ. ( ಹೋಗಿ ತಿರುಗಿ ಬರುತ್ತಾನೆ. ) ಮಹಾರಾಜರ ಆಜ್ಞೆ. ಅಮಾತ್ಯರಿಗೆ ಶ್ರುತವಾಗಿ ಯೋಗ್ಯಕಾಲದಲ್ಲಿ ಮೇಘವೃಷ್ಟಿಯಾದಂತೆ ಆನಂದಕರವಾಯಿತೆಂದು ಹೇಳಿದರು.

**ಅರಸು**—( ದೀರ್ಘೋಷ್ಣಶ್ವಾಸಬಿಟ್ಟು ) ಹರಹರಾ! ಸಂತತಿಯು ನಿಂತು ಹೋದದರಿಂದ ವಂಶವು ಈ ಪ್ರಕಾರ ನಿರಾಧಾರಿಯಾಗುವದಲ್ಲ! ಕಟ್ಟಕಡೆಯ ಬೊಡ್ಡೇ ಮನೆಯಂತಿರುವ ದೇಹಾವಸಾನವಾದಮೇಲೆ ಆತನ ಸಂಪತ್ತು ಅನ್ಯರ ಸೇವೆಗೆ ಹೋಗುವದಲ್ಲ! ಹರಹರಾ! ನನ್ನ ಅಂತ್ಯಕಾಲಕ್ಕೂ

ಇದೇ ಅವಸ್ಥೆಯಲ್ಲವೇ! ಅಕಾಲದಲ್ಲಿ ಬಿತ್ತಿದ ಭೂಮಿಯಂತೆ ಪುರುವಂಶವೂ ನಿಷ್ಫಲವಾಗಿ ಹೋಗುವದು!

**ಪ್ರತೀಹಾರಿ**—ಸಾಕು ಸಾಕು; ನೀವು ಇಂಥ ಕೆಟ್ಟ ಮಾತು ಯಾಕೆ ಆಡುವದು?

**ಅರಸು**— ಹೇ ಪ್ರತೀಹಾರಿ, ಮನೆಯನ್ನು ಶೋಧಿಸುತ್ತ ಲಕ್ಷ್ಮಿಯು ಬಂದಿದ್ದಳು. ನನ್ನ ಭಾಗ್ಯವು ಕಾಲಿಗೆರಗಿ ಬೇಡಿಕೊಳ್ಳುತ್ತಿತ್ತು. ಮೂರ್ಖನಾದ ನಾನು ಅವಮಾನವನ್ನು ಮಾಡಿದೆ. ನನಗೆ ಧಿಕ್ಕಾರವಿರಲಿ! ನಾನು ಎಂಥ ಹತಭಾಗ್ಯನೊ?

**ಸಾನುಮತಿ**—( ತನ್ನೊಳಗೆ ) ಈತನು ನನ್ನ ಸಖಿಯುಳಾದ ಶಕುಂತಲೆಯನ್ನು ಮನದಲ್ಲಿ ತಂದು ತನ್ನನ್ನು ಧಿಕ್ಕರಿಸಿಕೊಂಡನು.

**ಅರಸು**—ಹರಹರಾ, ಏನಾಯಿತು?

|| ಭಾಮಿನಿ ಷಟ್ಪದಿ ||

**ಹರಗಿ ಬೀಜಂ ಬಿತ್ತಿ ಕೃಷಿಗನು |**
**ಧರಣಿಯನು ಫಲಗಾಣದಲೆಯುಂ |**
**ತರಿಸಿದಲಾಯ್ತೆನ್ನ ಬಗೆ ಕೇಳ್ ಧರ್ಮಪತ್ನಿಯನು ||**
**ಪುರುಕುಲಕೆ ಭೂಷಣೆಯುಳೆನ್ನಂ-**
**ಕುರವ ಪಾಲಿಪ ಭೂಮಿಯುನ್ನಾ-**
**ದರಿಸಲಿಲ್ಲತಿಭಾಗ್ಯಹೀನನೊಲಾದೆನಕಟಕಟ ||**

**ಸಾನುಮತಿ**—( ತನ್ನೊಳಗೆ ) ನಿನ್ನ ಸಂತತಿಯು ಅವಿಚ್ಛಿನ್ನವಾಗಿದೆ. ಏನೂ ಚಿಂತೆ ಮಾಡಬೇಡ.

**ಚತುರಿಕೆ**—( ತನ್ನೊಳಗೆ ) ಎಂಥ ಪತ್ರವದು! ಆ ಸಾವುಕಾರನ ಸುದ್ದಿ ಕೇಳಿಯೇ ಮಹಾರಾಯರಿಗೆ ಅತಿ ದುಃಖವುಂಟಾಯಿತು. (ಪ್ರತೀಹಾರಿಗೆ) ಈ ವ್ಯಾಳ್ಯದಲ್ಲಿ ಇವರನ್ನು ಸಮಾಧಾನಪಡಿಸಲಿಕ್ಕೆ ಮಾಧವ್ಯನನ್ನಾದರೂ ಮೇಘಡಂಬರಿಯಲ್ಲಿ ಹೋಗಿ ಕರೆದುಕೊಂಡು ಬಾ ಹೋಗು.

**ಪ್ರತೀಹಾರಿ**—ಅಹುದವ್ವಾ. ( ಹೋಗುತ್ತಾಳೆ. )

**ಅರಸು—**

ಭಾ|| ಷ||

**ಅಂತು ಮಾಡಿದನೆಮ್ಮ ಕುಲ ದು|**
**ಷ್ಯಂತನೀತನ ಹಿಂದೆ ನಾವಿ**
**ನ್ನೆಂತು ಕಾಂಬೆವು ಶ್ರುತಿಸದುಕ್ತಿಯ ತರ್ಪಣಾದಿಗಳ||**
**ಇಂತು ಶಂಕೆಯೊಳಿರ್ದು ಪಿತರಾ**
**ಸಂತತಿಗಳಿಲ್ಲೆಂಬ ಕಷ್ಟದಿ**
**ಸಂತತದೊಳಶ್ರುಗಳ ಸುರಿಸಲವನ್ನೆ ಗುಟುಕಿಪರು ||೧||**

( ಮೂರ್ಛೆ ಹೊಂದುತ್ತಾನೆ. )

**ಚತುರಿಕೆ—**( ಗಾಬರಿಗೊಂಡು ) ಹೇ ನಾಥ, ತಮ್ಮಂಥವರು ದು:ಖಕ್ಕೆ ವಶರಾಗುವದುಂಟೆ! ಹೀಗೆ ಮಾಡಬಾರದು. ಸ್ವಾಮಿ, ಎಚ್ಚರಿಯಬೇಕು!

**ಸಾನುಮತಿ—**( ತನ್ನೊಳಗೆ ) ಅಯ್ಯೋ ಈ ರಾಜರ್ಷಿಯು ಪ್ರತ್ಯಕ್ಷ ದೀಪವಿರಲಾಗಿ ವ್ಯವಧಾನದಿಂದ ಅಂಧಕಾರ ದೋಷವನ್ನು ಅನುಭವಿಸುತ್ತಾನೆ. ಈಗಲೇ ಈತನನ್ನು ಕಷ್ಟದಿಂದ ಬಿಡಿಸಲ್ಯಾ? ಬೇಡ. ಮಹೇಂದ್ರನ ತಾಯಿಯಾದ ಅದಿತಿಯು ಶಕುಂತಲೆಯ ಸಮಾಧಾನ ಮಾಡುತ್ತಿರುವಾಗ ಅವಳ ಮುಖದಿಂದ "ದೇವತೆಗಳಿಗೆ ಯಜ್ಞಭಾಗವನ್ನು ಗ್ರಹಣಮಾಡುವ ಇಚ್ಛೆ ಉಂಟಾಗಿದೆ. ಕಾರಣ ಅವರೇ ಧರ್ಮಪತ್ನಿಯಾದ ನಿನ್ನನ್ನು ನಿನ್ನ ಪತಿಯು ಸ್ವೀಕರಿಸುವ ಹಾಗೆ ಯುಕ್ತಿಯನ್ನು ತೆಗೆಯತಕ್ಕವರಿದ್ದಾರೆ." ಎಂದು ಹೇಳಿದ ಮಾತನ್ನು ಕೇಳಿದ್ದೇನೆ. ತಸ್ಮಾತ ಈಗಲೆ ಅವಸರವು ಕೆಲಸದ್ದಲ್ಲ. ಮಾತ್ರ ಶಕುಂತಲೆಗೆ ಈ ಸುದ್ದಿಯನ್ನು ತಿಳುಹಿಸಿ ಅವಳನ್ನು ಸಮಾಧಾನಪಡಿಸುವೆನು. ( ಉಡ್ಡಾಣಮಾಡಿ ಅಂತರೀಕ್ಷ ಮಾರ್ಗದಿಂದ ಹೊರಟು ಹೋಗುತ್ತಾಳೆ. )

( ತೆರೆಯಲ್ಲಿ ಶಬ್ದವಾಗುತ್ತದೆ:---ಬದುಕಿಸು ! ಬದುಕಿಸು !! )

**ಅರಸು**---( ಎಚ್ಚತ್ತು ) ಹೋ ಹೋ! ಮಾಧವ್ಯನ ಆರ್ತಸ್ವರವು ಕೇಳಬರುತ್ತದೆ. ಯಾರವರಲ್ಲಿ ?

**ಚತುರಿಕೆ—**ಸ್ವಾಮಿ, ಚಿತ್ರದ ಪಟವನ್ನು ಕೈಯಲ್ಲಿ ಹಿಡಿದುಕೊಂಡು ಮಾಧವ್ಯನು ಹೋಗುವಾಗ ತರಲಿಕೆಬಿರಲಿಕೆ ಯಾರಾದರೂ ಆತನನ್ನು ಬಡಿಸುತ್ತಿರಬೇಕು ಕಾಣಿಸುತ್ತದೆ.

**ಅರಸು**—ಚತುರಿಕೆ, ನೀನು ಹೋಗಿ ಆಳು ಜನರನ್ನು ಕಾಡುವದು ಒಳ್ಳೇದಲ್ಲವೆಂದು ದೇವಿಗೆ ಹೇಳಿ ಬಾ ಹೋಗು.

( ಚತುರಿಕೆ ಹೋಗುತ್ತಾಳೆ. )

( ಹಿಂದೆ ಪುನಃ ಶಬ್ದವಾಗುತ್ತದೆ. )

**ಅರಸು**—ಪ್ರಾಣ ಸಂಕಟದಲ್ಲಿ ಸಿಕ್ಕಂತೆ ಮಾಧವ್ಯನ ಶಬ್ದವು ಕೇಳ ಬರುತ್ತದೆ. ಯಾರವರು ಅಲ್ಲಿ ?

**ಪ್ರತೀಹಾರಿ**— ( ಶೀಘ್ರದಿಂದ ಬಂದು ), ತಮ್ಮ ಮಿತ್ರನ ಮೇಲೆ ಮಹತ್ಸಂಕಟವು ಪ್ರಾಪ್ತವಾಗಿದೆ ಸ್ವಾಮಿ ; ಆತನನ್ನು ರಕ್ಷಿಸಬೇಕು.

**ಅರಸು**—ನನ್ನ ಮಿತ್ರನಾದ ಮಾಧವ್ಯನಿಗೆ ಯಾರೇನು ಮಾಡುತ್ತಾರೆ?

**ಪ್ರತೀಹಾರಿ**— ಮೇಘಡಂಬರಿಯ ಗೋಪುರದಲ್ಲಿ ಆತನು ಅಡಗಿ ಕೊಂಡಿದ್ದನು ಸ್ವಾಮಿ; ಯಾವದೋ ಅದೃಶ್ಯರೂಪಿಯಾದ ಪಿಶಾಚವು ಆತನನ್ನು ಎಲ್ಲಿಯೋ ತೆಗೆದುಕೊಂಡು ಹೋಗಿದೆ. ಚೀರಾಟ ಮಾತ್ರ ಕೇಳ ಬರುತ್ತದೆ.

**ಅರಸು**—( ಎದ್ದು ) ನನ್ನ ಮನೆಯಲ್ಲಿ ಸಹ ಭೂತಗಳು ಸಂಚರಿಸ ಲಾರಂಭಿಸಿದವೆ? ಇಂಥ ಪಾಪವು ನನ್ನ ರಾಷ್ಟ್ರದಲ್ಲಿ ಯಾರಿಂದಾಯಿತು? ಅಥವಾ ಆಗಿರಬಹುದು.—

ಭಾಮಿನಿ || **ಗಳಿಗಳಿಗೆಯೊಳ್ ಘಾಪನೆಮ್ಮಿಂ**
**ತಿಳಿಯದೆಷ್ಟಾದಪವೊ ರಾಸಿಗ-**
**ಳುಳಿದ ಪೃಥ್ವಿಯ ಜನವಪರಿಮಿತವದರಪಾಪಗಳ** ||
**ಬಳಿಕರಿವದೆಂತಿವನು ಸಜ್ಜನ**
**ವಿಳೆಯೊಳವನಿಹ ಪಾಪಿಯೆಂದಾರ್**
**ತಿಳಿಯ ಬಲ್ಲವರಕಟ ನೆರೆ ಪಾಪಿಷ್ಟನಾನಹೆನು** || ೧ ||

( ತೆರೆಯಲ್ಲಿ—ಎಪ್ಪಾ, ಈ ದೆವ್ವಿನ ಕೈಯಾಗಿಂದ ನನ್ನ ಬಿಡಿಸಿಕೊ ಕಾಣೊ ! ನನ್ನ ಜೀವ ಹೋಗಾಕ ಹತ್ತೇತಿ. )

**ಅರಸು**— ( ಮುಂದಕ್ಕೆ ಧಾವಿಸಿ ) ಎಲೋ ಮಿತ್ರನೆ, ಅಂಜಬೇಡ ಅಂಜಬೇಡ.

(ತೆರೆಯಲ್ಲಿ–ಎಪ್ಪಾ, ಅದ ಹ್ಯಾಂಗ ಅಂಜಬ್ಯಾಡಾ? ಇದಯಾವದೊ ದೆವ್ವ ಕಬ್ಬಿನ ಹಾಂಗ ನನ್ನ ಹಿಂದ ಬಾಗಿಸಿ ಮುರೂತತಿ ಕಾಣೊ! ಅಯ್ಯಯ್ಯೊ, ಸಾವತೇನ್ರೋ ಎಪ್ಪಾ ಬಿಡಿಸಿಕೋಳ್ರೋ! ಬಿಡಿಸಿಕೊಳ್ರಿ.

**ಅರಸು**—(ಅತ್ತಿತ್ತನೋಡಿ) ಎಲೋ, ನನ್ನ ಧನುಷ್ಯವೆಲ್ಲಿದೆ? ಹೇಳು ಬೇಗ, (ಇಷ್ಟರಲ್ಲಿ ಧನುಷ್ಯ ಬಾಣಗಳನ್ನು ಹಿಡಿದುಕೊಂಡು ಯವನಿಕಾ ಎಂಬವಳು ಬರತ್ತಾಳೆ.)

**ಅರಸು**—(ಧನುಷ್ಯವನ್ನು ತೆಗೆದು ಕೊಳ್ಳುತ್ತಾನೆ.)

ತೆರೆಯಲ್ಲಿ—

ಭಾಮಿನಿ || **ಎತ್ತಿನಸು ಪುಲಿವಿಡಿದು ಗೋಣಿನ**
**ನೆತ್ತರವ ಪೀರ್ವಂತೆ ನಿನ್ನಯ**
**ಕುತ್ತಿಗೆಯ ಕಚ್ಚುತ್ತೆ ರಕ್ತವ ಪೀರ್ದಪೆಂನಿನ್ನ |**
**ಹೊತ್ತಿಗಾಪೀಡಿತರ ರಕ್ಷಿಸ**
**ವೊತ್ತಬಿರುದಿನ ಪೌರವಾಧಿಪ**
**ನೆತ್ತಪೋದನು ಬರಲಿ ಕರೆಯುಲೆ ಬಿಡಿಸಿ ಕೊಳವುದಕೆ ||**

**ಅರಸು**—(ಕ್ರೋಧಾವಿಷ್ಟನಾಗಿ) ಅಯ್ಯೋ, ನನ್ನನ್ನೇ ಉದ್ದೇಶಿಸಿ ಮಾತನಾಡುತ್ತಾನೆ, ಎಲೋ ದುಷ್ಟ ರಾಕ್ಷಸನೆ, ಒಂದು ಕ್ಷಣದಲ್ಲಿ ನೀನಿಲ್ಲ ದಂತೆ ಮಾಡುತ್ತೇನೆ. ಚಿಂತೆ ಮಾಡಬೇಡ. (ಪ್ರತೀಹಾರಿಗೆ) ಸೋಪಾನ ಮಾರ್ಗವೆಲ್ಲಿ?

**ಪ್ರತೀಹಾರಿ**—ಹೀಗೆ ಬನ್ನಿ.

(ಎಲ್ಲರೂ ತೀವ್ರದಿಂದ ನಡೆಯುತ್ತಾರೆ.)

**ಅರಸು**—(ಸುತ್ತಲೆ ನೋಡಿ) ಇಲ್ಲಿ ಯಾರೂ ಕಾಣುವದಿಲ್ಲ.

(ತೆರೆಯಲ್ಲಿ—ನನ್ನ ಒಡ್ಯಾ ನೀ ನನಗ ಕಾಣತಿ; ನಾ ನಿನಗ ಕಾಣೂದಿಲ್ಲ? ಬೆಕ್ಕಿನ ಬಾಯಾಗ ಇಲಿ ಸಿಕ್ಕಾಂಗಾಗೇತ್ಯೋ ಎಪ್ಪಾ! ಸಾವುತೇನ್ರೋ ಬಿಡಿಸಿಕೊಳ್ಳಿರೊ!)

**ಅರಸು**—ಎಲೋ, ದುಷ್ಟ ಪಿಶಾಚಿಯೆ, ತಿರಸ್ಕರಣೀವಿದ್ಯೆಯಿಂದ ಗುಪ್ತವಾಗಿರುವೆಯೆಂದು ಗರ್ವತಾಳಿದೆಯಾ? ಚಿಂತೆಯಿಲ್ಲ; ಯದ್ಯಪಿ ನಾನು ನಿನ್ನನ್ನು ನೋಡದೆ ಇದ್ದರೂ ನನ್ನ ಅಸ್ತ್ರವು ನಿನ್ನನ್ನು ನೋಡಿಕೊಂಡೀತು.

ಭಾಮಿನಿ || **ಗರುವ ತಾಳಲಿ ಬೇಡ ನಿನ್ನಯ**
**ತಿರಸ್ಕರಣಿ ವಿದ್ಯದಿ ಪರರಕ**
**ಣ್ಗರಿಯಪಂತಿವನಂ ಪಿಡಿಯಲೆನ್ನಂಬುಗಳು ನಿನ್ನ**
**ಕರಳ ಕತ್ತರಿಸುವವು ಹಂಸವ**
**ಮರಿಯು ಪಾಲ್ನೀರ್ಗೊಡೆರಿಸೆ ತಾಂ**
**ಬರಿಯೆ ದುಗ್ಧವನುಂಬತೆರ ನೋಡೆನ್ನ ವಿಕ್ರಮವ** || ೧ ||

(ಹೀಗೆಂದು ಅಸ್ತ್ರವನ್ನು ಬಿಡುವಷ್ಟರಲ್ಲಿ ವಿದೂಷಕನನ್ನು ಬಿಟ್ಟು ಇಂದ್ರನ ಸಾರಥಿಯಾದ ಮಾತಲಿಯು ಬರುತ್ತಾನೆ.)

**ಮಾತಲಿ**—ಹೇ ದುಷ್ಯಂತ ಪ್ರಭೋ, ನಾನು ವಧ್ಯನಲ್ಲ ಕಂಡೆಯಾ? ನಿನ್ನ ಮಿತ್ರನಾಗಿದ್ದೇನೆ. ಶಸ್ತ್ರವನ್ನು ಬಿಡಬೇಡ.

ಭಾ|| **ತೆಗೆ ತೆಗೆ ನೃಪತಿ ಪೊಡೆಯದಿರ್ ನಾಂ**
**ಪಗೆಯನಲ್ಲಂಬುಗಳ ರಾಕ್ಷಸ**
**ರಿಗೆಯೆ ನಿನ್ನಸ್ತ್ರಗಳೆನುತಲಿಂದ್ರಂ ನಿಯಮಿಸಿರಲು** ||
**ಬಗೆಯದಿರ್ ನಿನ್ನಾಪ್ತನಹೆ ನೀ**
**ಬಗೆಯಸಾಂ ತಿಳುಹುವೆ ಸವಿಸ್ತರ**
**ಬಿಗಿಯದಿರ್ ಬಾಣಗಳ ನಾ ನೋಡಿಂದ್ರ ಸಾರಥಿಯು** || ೧ ||

**ಅರಸು** - (ಬಾಣವನ್ನು ಹಿಂದಕ್ಕೆ ತೆಗೆದುಕೊಂಡು) ಹೋಹೋ! ಮಾತಲಿ! ಮಹೇಂದ್ರ ಸಾರಥಿಯೇ, ಬರಬಹುದು ಬರಬಹುದು.

**ವಿದೂಷಕ**—(ಬಂದು) ಎಲಿ ಇವನ! ನನ್ನ ಹಿಡದಕ್ಯಾಸಿ ಕುತ್ತಿಗೇ ಹಿಚಕತಿದ್ದ. ಅವಗ ಇವ ಬಹುಮಾನ ಮಾಡತಾನು.

**ಮಾತಲಿ**—(ನಕ್ಕು.) ಹೇ ಆಯುಷ್ಮನ್, ಮಹೇಂದ್ರನು ನನ್ನನ್ನು ನಿನ್ನ ಬಳಿಗೆ ಕಳುಹಿದ ಬಗೆ ಹೇಳುತ್ತೇನೆ ಕೇಳು.

**ಅರಸು**—ಕೇಳುತ್ತೇನೆ.

**ಮಾತಲಿ**—ಕಾಲನೇಮಿಯ ಪುತ್ರನಾದ ದುರ್ಜಯನೆಂಬ ದಾನವನನ್ನು ಬಲ್ಲೆಯಷ್ಟೆ?

**ಅರಸು**—ಅಹುದು ನಾನು ಬಲ್ಲೆ; ಹಿಂದಕ್ಕೆ ನಾರದರ ಮುಖದಿಂದ ಕೇಳಿದ್ದೇನೆ.

**ಮಾತಲಿ**—ಆತನು ಸ್ವರ್ಗಲೋಕವನ್ನು ಬಹು ಪೀಡಿಸಲಾರಂಭಿಸಿದ್ದಾನೆ. ತನ್ನ ಹೆಸರಿನಂತೆ ಇದುವರೆಗೆ ಆತನು ಎಲ್ಲರಿಗೂ ದುರ್ಜಯನಾಗಿದ್ದಾನೆ. ಆತನನ್ನು ಪರಾಭವಿಸುವದು ನಿನ್ನ ಭುಜಬಲದಿಂದಲೇ ಆಗ ತಕ್ಕದ್ದಿದೆ.

ಭಾ. || **ಕಡು ಭಯಂಕರನಾ ಅಸುರನಂ**
**ಕೆಡಪುವದು ನಿರ್ಜರಪನಿಂ ಕೇಳ್**
**ಕಡೆಯುಗಾಣದು ನಿಶಿಯು ತಮುವೀ ರವಿಯುಕರದಿಂದ ||**
**ಪೊಡೆಯು ಪಡದೀಹದಕೆ ತಾರೆಗ**
**ಳೊಡೆಯುನೇ ಬೇಕೆಂದು ನಿನ್ನಂ**
**ಕಡುತ್ವರದಿ ಕರೆಕೊಂಡು ಬಾರೆಂದೆನ್ನ ಕಳುಹಿದನೈ ||**

ಆದಕಾರಣ ಶಸ್ತ್ರವನ್ನು ಧಾರಣಮಾಡಿರುವಿಯಷ್ಟೆ! ಹೀಗೆಯೆ ಈ ಇಂದ್ರನ ರಥದಲ್ಲಿ ವಿಜಯ ಪ್ರಸ್ಥಾನವನ್ನು ಮಾಡಬಹುದು ಜೀಯಾ.

**ಅರಸು**—ದೇವೇಂದ್ರನು ಮಹಾಕಾರ್ಯಕ್ಕೆ ಅಮಂತ್ರಣ ಮಾಡಿದ್ದು ನನ್ನ ಮೇಲೆ ಆತನ ಅನುಗ್ರಹವೇ ಸರಿ. ನಾನು ಬಾಹುವದಕ್ಕೆ ಸಿದ್ಧನಾಗಿದ್ದೇನೆ. ಹೇ ಮಾತಲಿ, ನಮ್ಮ ಮಾಧವ್ಯನನ್ನು ಏನು ಕಾರಣ ಹೀಗೆ ಬಾಧೆಪಡಿಸಿದಿ ಎಂಬುವದನ್ನು ಹೇಳಬೇಕು.

**ಮಾತಲಿ**—ಅದರ ಕಾರಣವನ್ನು ಹೇಳುತ್ತೇನೆ ಕೇಳು. ಯಾವದೋ ಒಂದು ಕಾರಣದಿಂದ ನಿನ್ನ ಮನಸ್ಸಿಗೆ ಸಂತಾಪವಾಗಿ ಅತಿ ಖಿನ್ನನಾಗಿ ಕುಳಿತುಕೊಂಡಿದ್ದಿ. ನಿನ್ನ ಮನಸ್ಸಿನ ದುಃಖಸ್ಥಿತಿಯನ್ನು ಹೋಗಿಸಿ ಉತ್ತೇಜನವನ್ನು ಹುಟ್ಟಿಸುವದಕ್ಕಾಗಿ ಈ ಯುಕ್ತಿಯನ್ನು ಪ್ರಯೋಗಿಸಿ ನಿನ್ನ ಮನದಲ್ಲಿ ಕೋಪವನ್ನುಂಟು ಮಾಡಿಸಿದ್ದೇನೆ ಜೀಯಾ.

ಕಂದ|| **ಕಿಚ್ಚುರಿಯುನು ಬೀಸಲು ತಾಂ**
**ಹೆಚ್ಚುವದಹಿಯು ತಡಿಯೆ ತ್ವೇಷದಿ ಕಚ್ಚುವದು.**
**ಕೆಚ್ಚೆದೆಯ ಭಟರ ಮನದೊಳ್**
**ರೊಚ್ಚೇರ್ವಿಸೆ ನಿಜ ಸಾಮರ್ಥ್ಯವ ತೋರ್ದಪರೈ ||**

**ಅರಸು**— ( ಸ್ವಲ್ಪ ಧ್ಯಾನಿಸಿಕೊಂಡು ) ಹೇ ಮಿತ್ರಾ, ಮಾಧವ್ಯಾ, ದೇವೇಂದ್ರನಾಜ್ಞೆಯನ್ನು ಮೀರಲಾಗದು. ಈ ವೃತ್ತಾಂತವನ್ನು ಪ್ರಧಾನನಿಗೆ ಶ್ರುತಪಡಿಸಿ ಹೇಳತಕ್ಕದ್ದೇನಂದರೆ—

ಕಂದ|| **ಎನ್ನಯ ಧನುವಿದು ಸಗ್ಗದೊ**
**ಳನ್ಯವಿಚಾರದೊಳಿಹ ಪರಿಯಂತೆಚ್ಚರದಿಂ**
**ತನ್ನೋರ್ವನ ಮತಿಯಿಂ ಪ್ರಜರ**
**ರನ್ನೀಕ್ಷಿಸಿ ಪರಿಪಾಲನೆ ಗೆಯ್ವುದಮಾತ್ಯಂ** ||

**ವಿದೂಷಕ**—ಬಾಳ ಉತ್ತಮು. ಹೇಳತೇನ ನನ್ನ ಒಡ್ಯಾ ( ಹೊರಟು ಹೋಗುತ್ತಾನೆ. )

**ಮಾತಲಿ**—ಹೇ ರಾಜನ್, ಇನ್ನು ರಥಾರೂಢನಾಗಬಹುದು.

**ಅರಸು**—ಆಗುತ್ತೇನೆ, ( ರಥದಲ್ಲಿ ಕುಳಿತು ಸಂಜ್ಞೆ ಮಾಡುತ್ತಾನೆ. )

( ಇಬ್ಬರೂ ಹೊರಟು ಹೋಗುತ್ತಾರೆ. )

ಆರನೆಯ ಅಂಕವು ಮುಗಿದುದು.

---



# ಏಳನೆಯ ಅಂಕವು.



( ದುಷ್ಯಂತರಾಜನೂ ಮಾತಲಿಯೂ ರಥಾರೂಢರಾಗಿ ಬರುತ್ತಾರೆ. )

**ಅರಸು**—ಹೇ ಮಾತಲೀ, ದೇವೇಂದ್ರನ ಆಜ್ಞೆಯಂತೆ ಆತನ ಕಾರ್ಯವನ್ನು ಯದ್ಯಪಿ ನಾವು ಸಿದ್ಧಿಗೆ ಒಯ್ದಾಗ್ಯೂ ಆತನು ಮಾಡಿದಂಥ ಸನ್ಮಾನದ ಮುಂದೆ ನಮ್ಮ ಸಹಾಯವು ಏನೂ ಅಲ್ಲವೆಂದು ಕಾಣುತ್ತದೆ.

**ಮಾತಲಿ**—( ನಕ್ಕು )ಹೇ ಆಯುಷ್ಮನ್, ಆ ದೇವೇಂದ್ರನಿಗೂ ಇದೇ ಪ್ರಕಾರವೇ ಕಾಣಿಸುತ್ತದೆ. ನೀವಿಬ್ಬರೂ ನಿಮ್ಮ ನಿಮ್ಮ ಕೃತಿಗಳ ವಿಷಯಕ್ಕೆ ಅಸಂತುಷ್ಟರಾಗಿದ್ದೀರಿ.

ಕಂದ || **ನೀ ಮಾಡಿದ ಕೃತಿ ನಿನಗತಿ**
**ಸಾಮಾನ್ಯವೆ ಕಾಣುವದು ನಿಗರ್ವಿಯೆ ಕೇಳ್ ತಾಂ**
**ಸಾಮಾನ್ಯ ಮಾನಮುಂ ಗೈ**
**ದೀಮಾತಿಗೆ ವಜ್ರಿಯತ್ತ ನೆರೆ ಹಳಹಳಿಪಂ ||**

**ಅರಸು**—ಮಾತಲಿ, ಹಾಗೆನ್ನಬೇಡ. ಅಪ್ಪಣೆಕೊಟ್ಟು ನನ್ನನ್ನು ತಿರುಗಿ ಕಳುಹಿಸುವ ವ್ಯಾಳ್ಯದಲ್ಲಿ ಆತನು ಮಾಡಿದಂಥ ಸತ್ಕಾರವು ನನ್ನ ಮನೋರಥಕ್ಕೂ ಹೆಚ್ಚಾಗಿ ಹೋಯಿತು ಬಲ್ಲೆಯಾ ?

ವಾರ್ಧಿಕ || **ದೇವೇಂದ್ರನತಿ ಹರುಷದಿಂದೆದಿರು ಬಂದೆನ್ನ**
**ದೇವಗಣಸಭೆಯಲ್ಲಿ ನೋಡಲರ್ಧಾಸನದಿ**
**ಕೈವಿಡಿದುಕೇಳ್ ಕುಳ್ಳಿಸಿದ ಬಳಿಕ ಹೃಚ್ಛಂದನಾಂಕಿತದ**
**ಮಂಗಳದಾ ||**
**ಪೂವಿನತಿ ಚೆಲ್ವಹಾರಂ ತೆಗೆದು ಪಿಡೆಯೆ ಮೇ**
**ಣಾವೇಳೆಯೊಳ್ ಜಯಂತಂ ನೋಡಲಾತನಾ**
**ಭಾವಮಂ ತಿಳಿದು ನಸುನಗುತಲೆನ್ನಯ ಕೊರಳಿಗ್ಹಾಕಿದ**
**ಪ್ರೀತಿಯಿಂದ ||**

**ಮಾತಲಿ**— ಆಯುಷ್ಮನ್, ದೇವೇಂದ್ರನಿಂದ ತಮಗೆ ದೊರಕಲಿಕ್ಕೆ ಅಯೋಗ್ಯವಾದ ಪದಾರ್ಥವು ಯಾವದುಂಟು ?

ಸುರಪತಿಯ ತ್ರಿದಿವಲೋಕಂ
ಪೊರೆದವರೀರ್ವರೆ ನೀವಸುರರಕಂಟಕದಿಂ ||
ಶರತೀಕ್ಷ್ಣತೆಯಿಂ ನೀನಾ
ನರಕೇಸರಿ ಪೆರಸುಗುರಿನ ಮೊನೆಯಿಂ ಕ್ಷಿತಿಪಾ ||

**ಅರಸು**—ಆದರೂ ಇಲ್ಲಿ ಶತಕ್ರತುವಿನ ಮಹಿಮಾವರ್ಣನೆಯೇ ಯೋಗ್ಯವಾಗಿದೆ.

ಕಂದ || ಭೃತ್ಯರು ಗೈಯೆ ಮಹತ್ವದ
ಕೃತ್ಯಮುಪಕೊಡೆಯನಸುಕೃತ ನಿಜಕಾರಣವಾ- ||
ದಿತ್ಯನ ಸಾರಥ್ಯವನಗ-
ಲ್ದತ್ಯಧಿಕ ತಮುವಪನರುಣತಾಂ ಪೊಡೆದಪನೆ ||

**ಮಾತಲಿ**—ಈ ಮಾತು ನಿನಗೆ ಒಪ್ಪುತ್ತದೆ. ದೊಡ್ಡವರು ತಾವು ಕಾರ್ಯವನ್ನು ಮಾಡಿದ್ದು ಬಾಯಿಂದಾಡಿಕೊಂಬುವದಿಲ್ಲ. ಅವರ ಲಕ್ಷಣವೇ ಇದು. (ಸ್ವಲ್ಪ ರಥವನ್ನು ಮುಂದಕ್ಕೆ ನಡಿಸಿ) ಹೇ ಆಯುಷ್ಯನ್, ನಿನ್ನ ಯಶಸ್ಸಿನ ವೈಭವವು ಸ್ವರ್ಗ ಶಿಖರಕ್ಕೆ ಹೋಗಿ ಮುಟ್ಟಿದ್ದೆ ನೋಡಿದೆಯಾ?

|| ಚಂಪಕಮಾಲಾ ವೃತ್ತ ||

ಸುರಗಣವಿಲ್ಲಿ ನಿನ್ನ ಚರಿತಂ ನೆರೆಚಿಂತನೆಗೈದು ಪದ್ಯಗಳ್ ।
ಪರಿಪರಿ ರಾಗರಾಗಿಣಿಯ ಛಂದದಿ ಪಾಡುವೆನೆಂದು ಮೋದದಿಂ ||
ಸರಸಗಭೀರ ವಾಕ್ಯಗಳಲಿಂ ರಚಿಸಲ್ ಸುರಸುಂದರಾಂಗಿಯರ್ ।
ಬರೆವರು ಕಲ್ಪವೃಕ್ಷದೆಲೆಯೊಳ್ ಮೊಲೆ ಚಿತ್ರಿಸೆ ತಂದ ಬಣ್ಣದಿಂ ||

**ಅರಸು**—ಹೇ ಮಾತಲೀ, ನಿನ್ನಿನ ದಿವಸವೇ ಸ್ವರ್ಗಲೋಕವನ್ನು ಏರಿ ದಾಗ್ಯೂ ದೈತ್ಯರನ್ನು ಹೊಡೆಯುವ ಉತ್ಸುಕತೆಯಲ್ಲಿ ಈ ಪ್ರದೇಶವು ಚೆನ್ನಾಗಿ ಲಕ್ಷವಲ್ಲಿ ಬರಲಿಲ್ಲ. ಕಾರಣ ವಾಯುವಿನಾವ ಮಾರ್ಗದಲ್ಲಿ ನಾವಿಹೆವೆಂಬು ವದನ್ನು ಹೇಳಬಹುದು.

**ಮಾತಲಿ**—ಹೇಳುತ್ತೇನೆ ಕೇಳು.

|| ಚಂಪಕಮಾಲಾ ವೃತ್ತ ||

**ಹರಿಯಡಿಯಿಂ ಪವಿತ್ರತೆಯ ತಾಳ್ದಿದು ಮೂಜಗ ಮೊಕ್ಕು ಪಾಯ್ವುದೆ-**
**ದ್ದೊರೆ ಗಗನ ಪ್ರತಿಷ್ಠೆಯುಳನಂ ಪರಿಸುತ್ತಲೆ ತಾರಕಾಗಣಂ ||**
**ತಿರುಗಿಸುತರ್ಕಚಂದ್ರರುರೆ ಕಾಂತಿಯ ತಾಳ್ದಿಸೆಯುತ್ತಲಾವಗಂ |**
**ಪರಿವಹನೆಂಬ ವಾಯುವಿಹದಿಲ್ಲಿಗೆ ಬಂದಿಹೆವೈ ಧರಾಧಿಪಾ ||**

**ಅರಸು**—ಸೈ ಸೈ! ಹಾಗೆಂತಲೆ ನನ್ನ ಆತ್ಮವು ಸಬಾಹ್ಯಾಂತರದಲ್ಲಿ ಸಂತುಷ್ಟವಾಗಿದೆ. (ರಥಚಕ್ರಗಳನ್ನು ನೋಡಿ) ಈಗ ನಾವು ಮೇಘ ಮಂಡಲದಲ್ಲಿಳಿದಿದ್ದೇವೆ.

**ಮಾತಲಿ**—ಯಾತರ ಮೇಲಿಂದ ಹೇಳಿದೆ?

**ಅರಸು**—ಇಕ್ಕೋ ನೋಡು,

|| ಮಾಲಿನೀ ವೃತ್ತ ||

**ಪೊಳೆಯೆ ಚಪಲ ತೇಜಂ ಕೂಡೆವಾಜಿಂಗಳುಂ ಮಿಂ-**
**ಚಲು ಪೊದರೊಳಗಿಂಬೇಳ್ತಂದಿರಲ್ ಚಾತಕಂಗಳ್ ||**
**ಬಳಗವರಿಸಿ ಬಾಯೊಡ್ಡಲ್ಕೆ ಮೇಘೋದಕಕ್ಕಾಂ |**
**ತಿಳಿಪೆ ಜಲದ ಮಾರ್ಗಂ ಗಾಲಿಗಳ್ ತೊಯ್ಪರಿಂ ಕೇಳ್ ||**

**ಮಾತಲಿ**—ಸೈ ಸೈ. ಇನ್ನೊಂದು ಕ್ಷಣಹೊತ್ತಿನಲ್ಲಿ ನಿನ್ನ ಅಧಿಕಾರ ಭೂಮಿಯಲ್ಲಿ ಬರುವಿ.

**ಅರಸು**—(ಕೆಳಗೆ ನೋಡಿ) ಹೇ ಮಾತಲಿ, ನಾವು ತೀವ್ರದಿಂದ ಕೆಳಗಿಳಿಯುವದರಿಂದ ಮನುಷ್ಯಲೋಕವು ನನ್ನ ದೃಷ್ಟಿಗೆ ಬಹು ಆಶ್ಚರ್ಯಕಾರಕವಾಗಿ ಕಾಣಿಸುತ್ತದೆ.

|| ಚಂಪಕಮಾಲಾ ವೃತ್ತ ||

**ಬದಿಯಲಿ ಶೈಲದಗ್ರಗಳು ಬರ್ಪವು ಸುತ್ತಣಭೂಮಿ ಹಿಂದೆ ಪೋ**
**ಪುದು ತರುಶಾಖೆಗಳ್ ತಳಿರಿನಿಂದಡಗಿರ್ದವು ಬೇರೆ ಕಾಣ್ಬವೀ**
**ನದಿಗಳ ತುಂಡುತುಂಡುಗಳು ಕೂಡುತೆ ವಿಸ್ತೃತಮಾಗೆ ಪಾತ್ರಗಳ್**
**ಎದುರಿಗೆ ಬರ್ಪಳೈ ಭುವನೆಯೆನ್ನನು ಶೀಘ್ರದೊಳಪ್ಪಿ ಕೊಂಬ ವೋಲ್||**

**ಮಾತಲಿ**—ಸೈ ಸೈ, ( ಬಹುಮಾನಪೂರ್ವಕವಾಗಿ ನೋಡಿ ) ಅಹಹ, ಪೃಥ್ವಿಯು ಏನು ಉದಾರ ರಮಣೀಯವಾಗಿ ತೋರುತ್ತದೆ!

**ಅರಸು**—ಹೇ ಮಾತಲೀ, ಅಸ್ತಮಾನಕಾಲದ ಮೇಘಸಮುದಾಯದಂತೆ ಸುವರ್ಣಮಯವಾಗಿ ಕಾಣಿಸುವ ಪರ್ವತವು ಯಾವದಯ್ಯಾ ಇದು? ಇದರ ಒಂದು ತುದಿ ಪೂರ್ವ ಸಮುದ್ರದಲ್ಲಿ ಮತ್ತೊಂದು ಪಶ್ಚಿಮ ಸಮುದ್ರದಲ್ಲಿ ಮುಳಿಗಿವೆ.

**ಮಾತಲಿ**—ಆಯುಷ್ಮನ್, ಇದು ಹೇಮಕೂಟವೆಂಬ ಪರ್ವತವು ಕಂಡೆಯಾ; ಇದರಲ್ಲಿ ಕಿಂಪುರುಷರೆಂಬ ಕುಬೇರನ ಸೇವಕರು ವಾಸಮಾಡುತ್ತಾರೆ. ಇದು ಋಷಿಗಳ ತಪಸ್ಸಿದ್ಧಿಯ ಮಹಾಕ್ಷೇತ್ರವಹುದು.

|| ಪೃಥ್ವೀವೃತ್ತ ||

**ನರಾಧಿಪತಿ ನೋಡಿದೇಸ್ಥಳದಿ ಮುಂಚಿನಾಕಾಲದಿಂ**
**ಮರೀಚಿಯ ಮಗಂ ಸ್ವಯಂಭುವಿನ ಮೊಮ್ಮಗಂ ತಂದೆಮೇಣ್**
**ಸುರಾಸುರರಿಗಾಪ್ರಜಾಪತಿಯು ಪತ್ನಿಯಂ ಕೂಡಿಕೊಂ**
**ಡಿರುತ್ತಿಹ ನಿರಂತರಂ ಚರಿಸುವಂ ತಪಶ್ಚರ್ಯಮಂ ||**

**ಅರಸು**—( ಆದರದಿಂದ ) ಒಹೋ, ಹಾಗಾದರೆ ಇಂಥ ಪುಣ್ಯಪ್ರಾಪ್ತಿಯ ವ್ಯಾಳ್ಯವನ್ನು ಅಂತರಿಸಕೂಡದು. ಋಷಿಗಳಿಗೆ ಪ್ರದಕ್ಷಿಣೆ ಹಾಕಿ ಮುಂದೆ ಹೋಗುವ.

**ಮಾತಲಿ**—ಬಹು ಉತ್ತಮ. ( ರಥವನ್ನು ಭೂಮಿಗೆ ಇಳಿಸುತ್ತಾನೆ. )

**ಅರಸು**—( ಆಶ್ಚರ್ಯದಿಂದ )—

|| ಮಾಲಿನೀ ವೃತ್ತ ||

**ಇಳಿಗಿಳಿದುದು ತೇರಂ ನೋಡಲಿಲ್ಲಾವಗೊ ಭೂ-**
**ತಳದೊಳು ನಡಿಯಲೇಳ್ಕೇಳಿವೇತಕ್ಕೆ ಶಬ್ದಂ**
**ಗಳನರಿದು ನೆಲಂ ಮುಟ್ಟಪ್ಪುದಿಲ್ಲೆಂತುಮಶ್ವಂ**
**ಗಳ ಖುರಪುಟದಿಂ ಪೇಳೇಳದೇತಕ್ಕೆ ಧೂಳಂ ||**

**ಮಾತಲಿ**—ಹೇ ಆಯುಷ್ಮನ್, ನಿನ್ನಲ್ಲಿಯೂ ಶತಕ್ರತುವಿನಲ್ಲಿಯೂ ಇಷ್ಟೇ ಭೇದವುಂಟು.

**ಅರಸು**—ಹೇ ಮಾತಲೀ, ಮಾರೀಚ ಪ್ರಜಾಪತಿಗಳಾಶ್ರಮವೆಲ್ಲಿ ?

**ಮಾತಲಿ**—( ಕೈಯಿಂದ ತೋರಿಸಿ ) ಈತನೇ ನೋಡು ಎದುರಿನಲ್ಲಿ.

ಶಾ. ವಿ. || **ಪುತ್ತುಂಗಳ್ನಿರೆ ಮುಚ್ಚಲರ್ಧತನುವಂ ಸರ್ಪತ್ವಚಂ**
**ಶಿಲ್ಕಿ ಪ್ಪೈ** |
**ಸುತ್ತಿರ್ದಿಂತು ಲತಾಪ್ರತಾನವಲಯಂ ಸಂಪೀಡಿ**
**ಸಲ್ಬೆನ್ನಿನೊಳ್** ||
**ಬತ್ತಿಂಗಳ್ ಪೊಸೆದಿರ್ಪ ದೀರ್ಘಜಟೆಯೊಳ್ ಗೂಡಿಕ್ಕೆ**
**ಮೋಹ್ ಪಕ್ಕಿಗಳ್**
**ಪೊತ್ತಂ ತೋರ್ಪನ ನೋಡುತಿರ್ಪ ನಿರುತಂ**
**ನಿಂತಿರ್ಪನ್ನೈ ಸ್ತಂಭದೋಲ್** ||

**ಅರಸು**—ಹೇ ಕಷ್ಟತಾಪಸನೆ, ನಿನಗೆ ನಮಸ್ಕಾರವಿರಲಿ.

**ಮಾತಲಿ**—( ಅಶ್ವಗಳ ರಶ್ಮಿಗಳನ್ನು ಜಗ್ಗಿ ಹಿಡಿದು ) ಆಯುಷ್ಮಾನ್, ಈಗ್ಗೆ ನಾವು ಮಾರೀಚಮುನಿಗಳಾಶ್ರಮಕ್ಕೆ ಬಂದು ತಲುಪಿದ್ದೇವೆ. ಇದು ನೋಡಿದೆಯಾ, ಅದಿತಿಯಿಂದ ಪರಿವರ್ಧಿತವಾದಂಥ ಮಂದಾರವೃಕ್ಷಗಳನ್ನು.

**ಅರಸು**—ಅಹಹ! ಈ ಸ್ಥಾನವು ಸ್ವರ್ಗಕ್ಕಿಂತಲೂ ಹೆಚ್ಚು ಸುಖಕರ ವಾಗಿದೆ. ಅಹಹ! ಅಮೃತ ಡೋಹದಲ್ಲಿ ಮುಳಗಿದಂತೆ ಅನುಭವವಾಗುತ್ತದೆ.

**ಮಾತಲಿ**—( ರಥವನ್ನು ನಿಲ್ಲಿಸಿ ) ರಾಜನ್, ಕೆಳಗಿಳಿಯಬಹುದು.

**ಅರಸು**—( ಇಳಿದು ) ಹೇ ಮಾತಲೀ, ನೀನೂ ಬರುವೆಯಷ್ಟೆ ?

**ಮಾತಲಿ**—ನಾನೂ ಬರುತ್ತೇನೆ. ( ಕೆಳಗಿಳಿದು ) ಆಯುಷ್ಮಾನ್ ಈ ತಪೋವನ ಭೂಮಿಯನ್ನು ನೋಡಿದೆಯಾ ?

**ಅರಸು**—ನೋಡಿ ಬಹು ಆನಂದಾಶ್ಚರ್ಯವಾಗುತ್ತದೆ,

|| ಚಂಪಕಮಾಲಾವೃತ್ತ ||

**ಎಲರುಣುತಿರ್ದು ಜೀವಿಪನು ಕಲ್ಪತರುಂಗಳರಣ್ಯದೊಳ್ ಪರಿ-**
**ಜ್ಜಲದಿ ಸುವರ್ಣ ಪದ್ಮಮಿರೆ ನೋಡದೆ ಮಾಳ್ಪನು ಸ್ನಾನಸಂಧ್ಯೆಯಂ**
**ತಳೆದಿಹ ಧ್ಯಾನರತ್ನಶಿಲೆಯೊಳ್ಸುರನಾರಿಯರೊಳು ಸಂಯಮಂ**
**ಉಳಿದ ತಪಸ್ವಿಗಳ್ ಬಯಸುವಸ್ಥಳದೋಳಿರೆ ಮಾಣನ್ನೈ ತಪಂ**

**ಮಾತಲಿ**—ದೊಡ್ಡವರ ಮನೋರಥವು ಸಹ ದೊಡ್ಡದಾಗಿರುತ್ತದೆ. (ಮೇಲೆ ನೋಡಿ) ಎಲೋ ವೃದ್ಧಶಾಕಲ್ಯನೆ, ಭಗವಾನ್ ಮಾರೀಚಋಷಿಗಳು ಈ ವ್ಯಾಖ್ಯದಲ್ಲಿ ಏನು ಮಾಡುತ್ತಿದ್ದಾರೆ? (ಕಿವಿಗೊಟ್ಟು) ತಮ್ಮ ಪತ್ನಿಯಾದ ದಾಕ್ಷಾಯಣಿಯು ಪತಿವ್ರತಾ ಪುಣ್ಯಮಹಾತ್ಮೆಯನ್ನು ಹೇಳಬಹುದೆಂದು ಕೇಳಿಕೊಂಡದ್ದರಿಂದ ಅವಳಿಗೂ ಇತರ ಋಷಿಪತ್ನಿಗಳಿಗೂ ಆ ಮಾಹಾತ್ಮ್ಯೆಯನ್ನು ಹೇಳುತ್ತಿದ್ದಾರೆ.

**ಅರಸು**—ಹಾಗಾದರೆ ಸ್ವಲ್ಪ ನಿಂತುಕೊಂಡು ಹೋಗುವ.

**ಮಾತಲಿ**—ಆ ಅಶೋಕವೃಕ್ಷದ ನೆರಳಿನಲ್ಲಿ ಒಂದು ಕ್ಷಣ ಕುಳಿತುಕೊಳ್ಳಬೇಕು. ಅಷ್ಟರಲ್ಲಿ ನೀನು ಬಂದ ವರ್ತಮಾನವನ್ನು ಇಂದ್ರತಾತನಿಗೆ ತಿಳುಹಿಸಿ ಬರುತ್ತೇನೆ.

**ಅರಸು**—ಒಳ್ಳೇದು. (ಅಶೋಕವೃಕ್ಷದ ನೆರಳಿನಲ್ಲಿ ಕುಳಿತುಕೊಳ್ಳುತ್ತಾನೆ.)

**ಮಾತಲಿ**—ಹೋಗಿ ಬರುತ್ತೇನೆ ಹಾಗಾದರೆ. (ಹೊರಟು ಹೋಗುತ್ತಾನೆ.)

**ಅರಸು**—(ಸುಚಿಹ್ನವಾದದ್ದನ್ನು ಕಂಡು) ಶಕುನವೇನು ಕಾರಣವಾಗುತ್ತಿದ್ದೀತಿಲ್ಲ.?)

|| ವೃತ್ತ ಶುದ್ಧಕಾಮುದಿಯಂತೆ ||

**ಸ್ಫುರಣ ವ್ಯರ್ಥಕೇಳ್ ಭುಜವೆ ನಿನ್ನಯ।**
**ಸಿರಿಯು ಬಂದರಂದೊದಿದೆ ಕಾಲಿನಿಂ ||**
**ಬರಿದೆ ಮೇಣ್ಮನೋರಥಗಳೇಕೆ ಪೇರ್ |**
**ಮರಗುಮಾತ್ರ ಮಿಕ್ಕಿಹುದು ಜನ್ಮದೊಳ್ ||**

(ಹಿಂದೆ ಶಬ್ದವಾಗುತ್ತದೆ.) ಎಲೋ ಹಾಗೆ ಕಿಡಿಗೇಡಿತನ ಮಾಡಬಾರದಪ್ಪಯ್ಯಾ! ಎಷ್ಟು ಹಿಡಿಯಬೇಕು ನಿನ್ನ! ಕಡೆಗೆ ತನ್ನ ಜಾತಿ ಸ್ವಭಾವಕ್ಕೇ ಹೋಗುತ್ತಾನೆ.

**ಅರಸು**—( ಕಿವಿಗೊಟ್ಟು ) ಇಲ್ಲಿ ಯಾರು ಕಿಡಿಗೇಡಿತನ ಮಾಡುವವರು? ಅಂಥ ಸ್ಥಳವಿದಲ್ಲ. ಹೀಗಿದ್ದು ಯಾರು ಕೋಪಿಸುತ್ತಿರಬಹುದು? ಆಹಾಹಾ! ತಪಸ್ವಿನಿಗಳಿಂದ ಹಿಡಿಯಲ್ಪಟ್ಟ ಚಪಲನಾದ ಬಾಲಕನು ಯಾವನಯ್ಯಾ ಇವನು?

ಪ್ರಹರ್ಷಿಣಿ || **ಪೇೞಲ್ಬೇಡೆನೆ ಮುನಿಪತ್ನಿಯರ್ಕಳಂ ತಾಂ**
**ಕೇೞಂ ಸಿಂಗನ ಮರಿ ತಾಯಿ ಪಾಲನುಣ್ಣಲ್**
**ಕೇೞಿಂಗೆಂದದರನೆ ಜೋಲ್ವಗೂದಲಂಗಳ್**
**ಕೀೞಲ್ ಜಗ್ಗುವನಿವ ಪುಟ್ಟದಿಟ್ಟಬಾಲಂ** ||

( ಇಷ್ಟರಲ್ಲಿ ಇಬ್ಬರು ತಪಸ್ವಿನಿಯರಿಂದ ಸಹಿತವಾಗಿ ಬಾಲಕನು ಬರುತ್ತಾನೆ. )

**ಬಾಲಕ**—ಬಾಯಿ ತೆಲಿಯಲಿ ಸಿಂಯುನ ಮಗನೆ; ಹಲ್ಲೆತ್ತು ಬಂದವೆ. ನಿನಗೆ ನೋಡುವಾ.

**ಮೊದಲನೆ ತಪಸ್ವಿನಿ**–ಎಲೋ ಕ್ರೂರಾ, ವನದಲ್ಲಿಯ ನಮ್ಮ ಮಕ್ಕಳ ಸರಿಯಾದ ಪಶುಗಳ ಶಿಶುವುಗಳನ್ನು ಇಲ್ಲದಂತೆ ಮಾಡಬೇಕೆಂದು ಮನಸಿನಲ್ಲಿ ಮಾಡಿಕೊಂಡಿದ್ದೀಯಾ? ಇರುತ್ತಿರುತ್ತ ನಿನ್ನ ಹಾವಳಿ ಹೆಚ್ಚಾಯಿತು. ಋಷಿಗಳು ನಿನಗೆ ಸರ್ವದಮನನೆಂಬ ಹೆಸರಿಟ್ಟದ್ದು ಯೋಗ್ಯವಾಯಿತು.

**ಅರಸು**—ಈ ಬಾಲಕನ ಮೇಲೆ ನನ್ನ ಮನಸು ಹೊಟ್ಟೆಯಿಂದ ಹುಟ್ಟಿದ ಮಗುವಿನಂತೆ ಏನು ಕಾರಣ ಮೋಹಗೊಳ್ಳುತ್ತಿದ್ದೀತು? ( ಧ್ಯಾನಿಸಿ ) ನನಗೆ ಮಕ್ಕಳಿಲ್ಲೆಂದು ಹೆರವರ ಮಕ್ಕಳನ್ನು ನೋಡಿ ಲೋಭ ಉಂಟಾಗುತ್ತಿರಬಹುದು.

**ಎರಡನೇ ತಪಸ್ವಿನಿ**— ಬಾಲಕಾ, ಆ ಸಿಂಹಶಿಶುವನ್ನು ಬಿಟ್ಟು ಬಿಡಪ್ಪಯ್ಯ, ನೋಡು ಆ ಸಿಂಹಿಣಿಯ! ನಿನ್ನನ್ನು ಚಿವುರಿಕೊಂಡೀತು.

**ಬಾಲಕ**–( ನಕ್ಕು ) ಹೌದು ಹೌದು ನನಗೆ ಬಾಲ ಬಯ ಬಲುತ್ತದೆ. (ದವಡೆ ಕಚ್ಚಿ ಸಿಂಹಿಣಿಯನ್ನು ನೋಡುತ್ತಾನೆ. )

**ಅರಸು**—ಇವನ್ಯಾವನೋ ವಿಲಕ್ಷಣ ಬಾಲಕನು ಕಾಣುತ್ತಾನೆ.

ಕಂದ || **ಸಿಂಗನ ಶಿಶುವಿನ ಕೂಡಾ |**
**ಡಂಗವಣೆಯು ಬಾಲನೊಳುರೆ ತೇಜದ ಬೀಜಂ ||**
**ಕಂಗೊಳಿಸುತಲಿರ್ಪುದು ಸ್ಫು |**
**ಲಿಂಗವದಿಂಧನವಾಪೇಕ್ಷಿಸವೊಲ್ತ್ರೋರ್ಪ೯ಂ |**

**ಮೊದಲನೇ ತಪಸ್ವಿನಿ**—ಎಲೋ ಬಾಲಕನೆ, ಆ ಸಿಂಹನ ಮರಿಯನ್ನು ಬಿಡು ಕಂಡೆಯಾ, ನಿನಗೆ ಎರಡನೇ ಆಟಿಕೆ ತಂದು ಕೊಡುತ್ತೇನೆ.

**ಬಾಲಕ**—ಕುಲು ಹಂಗಲ ( ಅಂಗೈಯನ್ನು ಪಸರಿಸಿ ಬೇಡುತ್ತಾನೆ. )

**ಅರಸು**—( ಬಾಲಕನ ಹಸ್ತವನ್ನು ನೋಡಿ) ಆಹಾಹಾ ! ಈ ಅರ್ಭಕನ ಕೈಯಲ್ಲಿ ಚಕ್ರವರ್ತಿ ಲಕ್ಷಣಗಳು ಸಹ ತೋರುತ್ತವೆ. ಇವನು ಎಲ್ಲ ಪೃಥ್ವಿಯನ್ನಾಳುವನು.

|| ಪುಷ್ಪಿತಾಗ್ರಾವೃತ್ತ ||

**ಕಿರಿನಗೆಯುಲಿ ಬೇಡಲಿಂತು ಬೇಕಾ**
**ಗಿರುವ ಸುವಸ್ತುವಿನಂ ಪ್ರಭಾತದೊಳ್ಮಿಂ**
**ಬಿರಿವ ಕಮಲದಂತೆ ಪುಟ್ಟ ಕೈ ಕೆಂ**
**ಬೆರಳ್ಗಳನಂತೆರೆದೊಪ್ಪುತಿರ್ಪ ಬಾಲಂ ||**

**ಎರಡನೇ ತಪಸ್ವಿನಿ**—ಎಲೆ ಸುವ್ರತಾ, ಈ ಬಾಲಕನು ಬರೆ ಬಾಯಿ ಮಾತಿನಿಂದೆ ಕೇಳುವವನಲ್ಲ. ನಮ್ಮ ಪರ್ಣಕುಟಿಯಲ್ಲಿ ಹೋಗಿ ಮಾರ್ಕಂಡೇಯ ಋಷಿಕುಮಾರನ ಬಣ್ಣದ ನವಿಲನ್ನು ತಂದು ಕೊಡು ಈತನಿಗೆ.

**ಮೊದಲನೇ ತಪಸ್ವಿನಿ**—ಒಳ್ಳೇದು ( ಹೋಗುತ್ತಾಳೆ. )

**ಬಾಲಕ**—ತಂದು ಕುಲುವನಕಾ ನಾ ಸಿಂಯನ ಮಲೀ ಸಂಗಾತೇ ಆಲೇನು. ( ತಾಪಸಿಯನ್ನು ನೋಡಿ ನಗುತ್ತಾನೆ. )

**ಅರಸು**—ಈ ದುಷ್ಟ ಕೇಳಿಯ ಹುಡುಗನನ್ನು ನೋಡಿ ನನ್ನ ಮನಸು ಎತ್ತಿಕೊಳ್ಳಬೇಕೆಂದೆನಿಸುತ್ತದೆ.

ಭಾಮಿನಿ || **ತೋರಲೆಳೆಯುಳಿ ದಂತಪಂಕ್ತಿಯು**
**ಕಾರಣಿಲ್ಲದೆ ನಗುವ ನುಡಿಗಳು**
**ಬಾರದಲೆ ತೊದಲಾಡಿ ಸವಿಯುಣಿಸುವ ಕಿವಿಗೆ ಮುದ್ದು||**
**ನೋರೆ ಮೇಲ್ಮಾಡುತಲಿ ಕರಕೊಂ**
**ಡೇರು ಮಾಳಿಗೆಯೆಂದು ಕಣ್ಣೀರ್**
**ತಾರದಳುವರ್ಭಕನ ಮೈಮುಣ್ತಾಳ್ವರೇಂಕೃತರೋ ||**

**ತಾಪಸಿ**—ಮಾತು ಕೇಳುವದಿಲ್ಲವೆ ಹೇಳಿದ್ದು? (ಹಿಂದಿರುಗಿ) ಅಲ್ಲಿ ಯಾರು ಕುಳಿತುಕೊಂಡವರು? ಯಾವನೋ ಋಷಿಕುಮಾರನು ಕಾಣು ತ್ತಾನೆ. (ಅರಸನಿಗೆ) ಎಲೋ, ಭದ್ರಮುಖನೆ, ಸ್ವಲ್ಪ ದಯಮಾಡಿ ಇತ್ತ ಬಂದು, ಈ ಬಾಲಕನು ಗಟ್ಟಿಯಾಗಿ ಸಿಂಹನ ಮರಿಯನ್ನು ಹಿಡಿದಿದ್ದಾನೆ, ಬಿಡಿಸಪ್ಪಯ್ಯ.

**ಅರಸು**—(ಬಾಲಕನ ಹತ್ತರ ಹೋಗಿ ಮುಗುಳು ನಗೆಯಿಂದ) ಎಲೋ ಮಹರ್ಷಿಪುತ್ರನೆ, ಈ ವೃತ್ತಿಯು ನಿನಗೆ ಯೋಗ್ಯವಲ್ಲಯ್ಯಾ.

|| ವೃತ್ತ, ಕಾಮದೆಯಂತೆ ||

**ಕಂದ ಕೇಳಿದಾಶ್ರಮಕೆ ದೋಷವೈ**
**ತಂದೆ ತಾಳ್ದ ಸಂಯಮ ಸುವೃತ್ತಿಯು ||**
**ನ್ನಿಂದು ಬಿಟ್ಟು ಈ ಪರಿಯ ಮಾಳ್ಪರೇ**
**ಚಂದನಕ್ಕೆ ಸುತ್ತಿರುವ ಸರ್ಪದೋಲ್ ||**

**ತಾಪಸಿ**—ಎಲೋ ಭದ್ರಮುಖಾ, ಇವನು ಋಷಿಕುಮಾರನಲ್ಲ.

**ಅರಸು**—ಅದನ್ನು ಈತನ ಆಕಾರ ವರ್ತನಗಳ ಮೇಲಿಂದ ನಾನು ತಿಳಿದೆ. ಆದರೂ ಇಂಥ ಸ್ಥಾನದಲ್ಲಿ ಇವನಿರುವನೆಂದು ಹೀಗೆ ತರ್ಕವಾಯಿತು. (ಮನಸಿನೊಳಿದ್ದಂತೆ ಆ ಬಾಲಕನನ್ನು ಎತ್ತಿಕೊಂಡು ಸ್ಪರ್ಶ ಸುಖಪಟ್ಟು).

ಸಾಕೀ ಎಂಬ ಮಹಾರಾಷ್ಟ್ರ ವೃತ್ತದಂತೆ

**ನೇತ್ರಂಗಳು ಸಂತೋಷಿಸಿದವಿವನ ರೂಪವ ನೋಡಲು ಎನ್ನಾ ||**
**ಗಾತ್ರಂ ಸುಖಮಯಮಾಯ್ತು ಕ್ಷಣದೋಳೆತ್ತಿಕೊಳಲು ಬಾಲಕನಾ|**
**ಪಾತ್ರಮಿಹುದು ಕುಲಮಾವುದೊ ಕೀರ್ತಿಗೆ ಜನನಿಜನಕರಾರಿಹರೋ|**
**ಪುತ್ರನ ನೋಡುತಲಂತಃಕರುಣದೊಳೆಷ್ಟು ಸಮಾಧಾನಿಪರೋ ||**

**ತಾಪಸಿ**—( ಇಬ್ಬರನ್ನೂ ನೋಡಿ ) ಏನಾಶ್ಚರ್ಯವಿದು !

**ಅರಸು**—ಅದು, ಯಾವಾಶ್ಚರ್ಯವಮ್ಮಾ ?

**ತಾಪಸಿ**—ಈ ಬಾಲಕನಂತೆ ರೂಪವು ಕಾಣಿಸಿತು. ಇಷ್ಟಕ್ಕೆ ಆಶ್ಚರ್ಯವಾಯಿತಂತಲ್ಲ. ತಾವು ಅಪರಿಚಿತರಾಗಿದ್ದು ಇಂಥ ಚಂಡಿ ಹುಡುಗನು ತಮ್ಮ ಮಾತನ್ನು ಕೇಳಿದನು !

**ಅರಸು**— ( ಬಾಲನನ್ನು ಲಾಲಿಸುತ್ತ ) ಅಮ್ಮಾ, ಈತನು ಋಷಿ ಕುಮಾರನಲ್ಲದಿದ್ದರೆ ಯಾವವಂಶದಲ್ಲಿ ಈತನು ಅಂಕುರಿಸಿದವನು?

**ತಾಪಸಿ**—ಪುರುವಂಶದಲ್ಲಿ.

**ಅರಸು**—( ತನ್ನೊಳಗೆ ) ಈತನ ವಂಶವೂ ನನ್ನ ವಂಶವೂ ಒಂದೆಯೊ? ಅದಕ್ಕಂತೇ ನನ್ನಾ ಇವನಾ ಮುಖಚರ್ಯೆಗಳು ಕೂಡುತ್ತವೆಂದು ಈ ತಾಪಸಿಯು ನುಡಿದಳು. ಪುರುವಂಶದ ಅರಸರಿಗೆ ಕಟ್ಟಕಡೆಗೆ ವನವಾಸಕ್ಕೆ ಬರುವದು ಕುಲವ್ರತವಾಗಿದೆ.

ಕಂದ || **ಅವನಿಯ ರಕ್ಷೆಗೆ ಮೊದಲೊಳ್**
**ಭವನದಿ ಸುಖವನುಭವಿಸುತಲಿ ಮುಂದೆ ಸನ್ಯಾ ||**
**ಸವಗ್ರಹಿಸಿ ವನದಿ ತರುಮೂ-**
**ಲವೆ ಮನೆಮಾಡಿರುವರು ಪೌರವರ್ಕೈ ತಪಕೆ ||**

( ತಾಪಸಿಗೆ ) ಏನಮ್ಮಾ, ಸ್ವಾಭಾವಿಕ ರೀತಿಯಿಂದ ನೋಡಲಾಗಿ ಈ ಸ್ಥಳವು ಮನುಷ್ಯರಿರತಕ್ಕದ್ದಲ್ಲ. ಹೀಗಿದ್ದು ಈ ಬಾಲಕನು ಇಲ್ಲಿ ಹ್ಯಾಗೆ ಬಂದನು?

**ತಾಪಸಿ**—ಎಲೋ ಭದ್ರಮುಖನೇ, ನೀನೆಂಬುವದು ನಿಜ. ಅಪ್ಸರೆಯ ಸಂಬಂಧದಿಂದ ಈ ಬಾಲಕನ ಜನನಿಯು ಈ ಮಾರೀಚ ಮುನಿಯ ತಪೋವನದಲ್ಲಿ ಬಂದು ಪ್ರಸವ ಹೊಂದಿದಳು.

**ಅರಸು**—( ತನ್ನೊಳಗೆ ) ಆಶೆ ಹೆಚ್ಚಾಗಲಿಕ್ಕೆ ಇದೊಂದು ಕಾರಣ ವಾಯಿತು. ( ತಾಪಸಿಗೆ ) ಈತನ ಜನನಿ ಯಾವ ರಾಜರ್ಷಿಯ ಪತ್ನಿಯು?

**ತಾಪಸಿ**—ಅಯ್ಯಾ, ಧರ್ಮಪತ್ನಿಯನ್ನು ತ್ಯಾಗ ಮಾಡುವಂಥಾತನ ಹೆಸರುಗೊಳ್ಳಬಾರದು. ಆತನ ನಾಮವೇನೆಂಬದು ನಮ್ಮನ್ನು ಕೇಳಬೇಡ.

**ಅರಸು**—( ತನ್ನೊಳಗೆ ) ಈ ಮಾತುಗಳೆಲ್ಲಾ ನನಗೇ ಹೊಂದುತ್ತವೆ. ಏನಾಶ್ಚರ್ಯವಿದು! ಈ ಬಾಲಕನ ಮಾತೆಯ ಹೆಸರು ಕೇಳುವೆನೇ ಪರಸ್ತ್ರೀಯರ ನಾಮವನ್ನು ಕೇಳುವದು ಯೋಗ್ಯವಲ್ಲ.

**ತಾಪಸಿ**—( ಹೋದಂಥವಳು ಬಂದು ) ಎಲೋ ಸರ್ವದಮನ, ಈ ಶಕುಂತಲಾವಣ್ಯವನ್ನು * ನೋಡಿದೆಯಾ?

**ಬಾಲಕ**—ಅಮ್ಮಯ್ಯಾ, ಎಲ್ಲಿದ್ದಾಳೆ ನಮ್ಮಮ್ಮಯ್ಯ?

**ತಾಪಸಿಯರು**—( ನಕ್ಕು ) ನಾಮ ಸದೃಶದಿಂದ ಈತನು ತನ್ನ ತಾಯಿ ಬಂದಳೆಂದು ತಿಳಿದನು.

**ಎರಡನೆಯ ತಾಪಸಿ**—ಬಾಳಾ, ಈ ಮೃತ್ತಿಕೆಯ ನವಿಲಿನ ಸೌಂದರ್ಯವನ್ನು ನೋಡೆಂದೆನು. ನಿನ್ನ ಮಾತೆ ಇಲ್ಲಿ ಬಂದಿಲ್ಲ.

**ಅರಸು**—(ತನ್ನೊಳಗೆ) ಈತನ ಮಾತೆಯ ನಾಮವು ಶಕುಂತಲೆಯೋ? ಅಂತೂ ಎಲ್ಲಾ ಸಂಗತಿಗಳೂ ಹೊಂದುತ್ತವೆ. ಆದರೇನು? ಒಂದೇ ಹೆಸರಿನ ಮನುಷ್ಯರು ಪೃಥ್ವಿಯಲ್ಲೀನಿರುವದಿಲ್ಲವೋ? ಮಾತ್ರ ಈ ನಾಮಶ್ರವಣ ಪ್ರಸಂಗದಿಂದ ಮೃಗಜಲಕ್ಕೆ ಆತುರಿಸಿದಂತೆ ನಾನು ಬರಿದೆ ವಿಷಾದ ಹೊಂದುತ್ತೇನೆ.

**ಬಾಲಕ**—ಅಕ್ಕಯ್ಯ, ತಾಲೆ! ತಾಲೆ! ನೋಲು ಒಲ್ಲೇ ಸಂನಾಗಿದೆ ( ಕೈಚಾಚುತ್ತಾನೆ. )

**ಮೊದಲನೆಯ ತಾಪಸಿ**—( ಆತನ ಕೈನೋಡಿ ಉದ್ವೇಗದಿಂದ ) ಅಮ್ಮಾ ಈತನ ಕೈಯಲ್ಲಿಯ ತಾಯಿತವೆಲ್ಲಿ ಹೋಯಿತೆ?

**ಅರಸು**—ಅಮ್ಮಾ ಗಾಬರಿಯಾಗಬಾರದು. ಈ ಸಿಂಹನ ಮರಿಯನ್ನು ಈತನೆಳೆಯುವ ವ್ಯಾಳ್ಯದಲ್ಲಿ ಬಿಚ್ಚಿ ಇಲ್ಲಿ ಬಿದ್ದಿದೆ. ( ಎಂದು ಅದನ್ನು ತೆಗೆದುಕೊಳ್ಳಲು ಹೋಗುತ್ತಾನೆ. )

**ತಾಪಸಿಯರು**—ಹಾ ಹಾ! ಮುಟ್ಟಕೂಡದು ಮುಟ್ಟಕೂಡದು! ಅವ್ವಯ್ಯಾ! ಈತನು ಕೈಯಲ್ಲಿ ತೆಗೆದು ಕೊಂಡನು! ( ಆಶ್ಚರ್ಯದಿಂದ ಹೃದಯದಲ್ಲಿ ಕೈ ಇಟ್ಟುಕೊಳ್ಳುತ್ತಾರೆ. )

---

* ಶಕುಂತ = ಪಕ್ಷಿ; ಲಾವಣ್ಯ = ಸೌಂದರ್ಯ. ಆದ್ದರಿಂದ ಶಕುಂತ-ಲಾವಣ್ಯ = ಪಕ್ಷಿಯ ಸೌಂದರ್ಯ.

**ಅರಸು**—ಯಾಕೆ ಮುಟ್ಟಕೂಡದೆಂದಿರಮ್ಮಾ ?

**ಮೊದಲನೆಯ ತಾಪಸಿ**–ಕೇಳಬಹುದು ಸ್ವಾಮೀ, ಇದು ಅಪರಾಜಿತಾ ಎಂಬ ಯಂತ್ರವು. ಈತನ ಜಾತಕರ್ಮದ ಕಾಲಕ್ಕೆ ಭಗವಾನ್ ಮಾರೀಚ ಋಷಿಗಳು ಇದನ್ನು ಕಟ್ಟಿದ್ದರು. ಒಂದು ವ್ಯಾಳ್ಯ ಇದು ಈತನ ಕೈಯಿಂದ ಬಿಚ್ಚಿಬಿದ್ದರೆ ಈತನಾಗಲಿ ಈತನ ತಾಯಿತಂದೆಗಳಾಗಲಿ ಎತ್ತಬಹುದು. ಅನ್ಯರ್‍ಯಾರೂ ಎತ್ತಲಾಗದು.

**ಅರಸು**— ಎತ್ತಿದರೇನಾಗುವದು ?

**ಮೊದಲನೇ ತಾಪಸಿ**—ಅನ್ಯರ್‍ಯಾರಾದರೂ ಎತ್ತಿದರೆ ಇದು ತತ್ ಕ್ಷಣವೆ ಸರ್ಪವಾಗಿ ಕಚ್ಚುವದು.

**ಅರಸು**—ಈ ಮಾತು ನಿಮಗೆ ಪ್ರತ್ಯಂತರಕ್ಕೆ ಎಂದಾದರೂ ಬಂದಿಹದೊ ?

**ತಾಪಸಿ**—ಎಷ್ಟೋಸಾರೆ.

**ಅರಸು**—( ಹರುಷದಿಂದ ತನ್ನೊಳಗೆ ) ನನ್ನ ಮನೋರಥ ಪೂರ್ಣವಾಯಿತು. ಈ ಆನಂದಕ್ಕೆ ಪಾರಾವಾರವಿಲ್ಲ. ( ಬಾಲಕನನ್ನು ಅಪ್ಪಿಕೊಳ್ಳುತ್ತಾನೆ. )

**ಎರಡನೇ ತಾಪಸಿ**—ಎಲೆ ಸುವ್ರತೆ, ನಡೆ; ನಾವು ಈ ವರ್ತಮಾನವನ್ನು ಶಕುಂತಲೆಗೆ ಹೋಗಿ ಹೇಳುವ. ( ಇಬ್ಬರೂ ತಾಪಸಿಯರು ಹೊರಟು ಹೋಗುತ್ತಾರೆ. )

**ಬಾಲಕ**–ಬಿಲು ಬಿಲು ನನ್ನ, ನಮ್ಮ ಮಾತೇ ಹತ್ತಲ ಹೋಗುತ್ತೇನೆ.

**ಅರಸು**—ಎಲೋ ಪುತ್ರಕಾ, ನನ್ನನ್ನು ಸಂಗಡ ತೆಗೆದುಕೊಂಡು ನಿನ್ನ ಮಾತೆಯ ಹತ್ತರ ಹೋಗು.

**ಬಾಲಕ**—ನೀನು ನನಗೆ ಪುತ್ರಾ ಎಂತ ಯಾಕ ಕಲೀತಿ ? ನೀ ನಮ್ಮಪ್ಪನೆ ? ನಮ್ಮಪ್ಪ ದುಸ್ಯಂತಲಾಜ.

**ಅರಸು**—( ಸ್ವಲ್ಪ ನಕ್ಕು ) ಈ ವಿವಾದವೇ ನೈಜವನ್ನು ತೋರುತ್ತದೆ. ( ಇಷ್ಟರಲ್ಲಿ ಶಕುಂತಲೆ ಬರುತ್ತಾಳೆ. ಕೇಶಗಳನ್ನು ಒಂದೇ ಗಂಟಿನಲ್ಲಿ ಕಟ್ಟಿದ್ದಾಳೆ. )

**ಶಕುಂತಲೆ**—(ಧ್ಯಾನಿಸಿಕೊಂಡು) ಸರ್ವದಮನನ ತಾಯಿತನನ್ನು ಪರಜನರು ಮುಟ್ಟಿದ ಕ್ಷಣವೆ ಸರ್ಪವಾಗತಕ್ಕದ್ದು. ಅಂಥದು ಸಹ ತನ್ನ ಗುಣವನ್ನು ಬಿಟ್ಟು ಬಿಟ್ಟಿತು. ಇನ್ಯಾತರ ಆಶೆ ಸುಡುತ್ತದೆ? ಅಥವಾ ಸಾನುಮತಿಯು ಹೇಳಿದಂತೆ ಯಾಕಿರಬಾರದು? (ಮುಂದೆ ನಡೆಯುತ್ತಾಳೆ.)

**ಅರಸು**— (ಶಕುಂತಲೆಯನ್ನು ನೋಡಿ) ಆಹಾಹಾ! ಇವಳೇ ಶಕುಂತಲೆ ಕಾಣುತ್ತಾಳೆ. ಏನಾಗಿ ಹೋಗಿದೆ ಇವಳ ಅವಸ್ಥೆ!

ವೃತ್ತ || **ಮಲಿನ ವಸ್ತ್ರಗಳಂ ಧರಿಸಿರ್ದು ಕೂ-**
**ದಲಗಳೊಂದೆಯೆ ಗಂಟಲಿ ಕಟ್ಟಿ ವ್ಯೈ**
**ಬಲು ಕೃಶಂಗೊಳೆ ತಾಂ ಪಲಕಾಲದಿಂ |**
**ಕಳೆದಳೆನ್ನಗಲಂ ವ್ರತದಂತೆವೊಲ್ ||**

ಇದೇ ಅರ್ಥದ ಪದ.

(ದಾಟಿ—ಮಾತಾಡದಾ ಬಗೆ ಏನು ಏನು | ನಿನ್ನ ಪ್ರೀತಿಗೊಲಿದ ಪ್ರಾಣನಾಥ ನೊಡನೆ || ಎಂಬ ಪದದಂತೆ.)

**ಏನಾದಳೈ ಮೃದುವಾಣೀ ಜಾಣೀ || ಎನ್ನ ||**
**ಹೀನ ನಡತೆಗಹಿವೇಣೀ ರಾಣೀ || ಪಲ್ಲ ||**
**ಅತಿ ನಿರ್ದಯ ನಾನು | ನೂಂಕಿದ |**
**ಪತಿವ್ರತೆಯುಳು ತಾನು | ನಿರ್ಮಲ ||**
**ಮತಿಯಾಚರಣದೊಳೊರಗಿ || ಸೊರಗಿ || ೧ ||**
**ಮಲಿನ ವಸನವುಟ್ಟು | ಜಡೆಗೂ |**
**ದಲ ಪರಿವೆಯ ಬಿಟ್ಟು | ಮನದೊಳು |**
**ತಳಮಳಿಸುತಲಿ ಕುಲೀನೇ ದೀನೇ || ೨ ||**
**ನೇಮನಿಷ್ಠೆಗೂಡಿ ಶ್ರಮದೊಳು |**
**ಕೋಮಲ ಮುಖ ಬಾಡಿ | ತಾಳದೆ**
**ಕಾಮನ ಬಾಧೆಗೆ ನೊಂದು ಬೆಂದು || ೩ ||**
**ನಿಷ್ಠುರ ಹೃದಯನ್ನ | ನಂಬಿದೆ**
**ಕಷ್ಟಬಡುವರಿನ್ನ ಎನ್ನದ-**
**ರು ಷ್ಟವೆನುತಲುಸರಿಟ್ಟು ಕೆಟ್ಟ || ೪ ||**

**ಪಲಕಾಲದೊಳಳುತಾ | ಆಯುವಿ**
**ನಳತೆಯ ಮಾಡುತ್ತಾ | ಬಳಲುತ**
**ಗಳಿಗೆ ಯುಗದವೊಲ್ ತಿಳಿದು ಕಳಿದು || ೫ ||**

**ಶಕುಂತಲೆ**— ( ಪಶ್ಚಾತ್ತಾಪದಿಂದ ನಿಸ್ತೇಜನಾದಂಥ ಅರಸನನ್ನು ನೋಡಿ ) ಈತನು ಆರ್ಯಪುತ್ರನಂತೆ ಕಾಣಿಸುವದಿಲ್ಲ. ಅಲ್ಲಿನ್ನ ಬೇಕೆ? ನನ್ನ ಪುತ್ರನ ಕೈಯಲ್ಲಿಯ ತಾಯಿತವನ್ನು ಅನ್ಯರ್ಯಾರು ಮುಟ್ಟುವವರು?

**ಬಾಲಕ**—( ತಾಯಿಯ ಹತ್ತರ ಹೋಗಿ ) ಅಮ್ಮಯ್ಯಾ, ಈತನು ದಾಲೆ? ನನ್ನನ್ನು ಪುತ್ರಾ ಪುತ್ರಾ ಅಂತ ಅಪ್ಪುತ್ತಾನೆ.

**ಅರಸು**—ಹೇ ಪ್ರಿಯೆ, ನಿನ್ನ ಕೂಡ ಎಷ್ಟು ಕ್ರೂರತನ ಮಾಡಿದೆ. ಅದು ಕಡೆಗೆ ಈ ವೊತ್ತಿಗೆ ಅತಿ ಪ್ರೀತಿಯಲ್ಲಿ ಪರಿಣಾಮಗೂಡಿತಲ್ಲಾ! ಹೇ ಸಹನ ಶೀಲೆ, ಇನ್ನು ನೀನೇ ದಯಮಾಡಿ ನನ್ನನ್ನು ಕ್ಷಮಿಸಬೇಕೇ ಹೊರ್ತು ಬೇರೆ ಉಪಾಯ ಉಳಿಯಲಿಲ್ಲ. ನಾನು ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ. ನನ್ನಿಂದ ಬಹಳಪರಾಧವಾಯಿತು.

**ಶಕುಂತಲೆ**—( ತನ್ನೊಳಗೆ ) ಹೃದಯವೆ, ಧೈರ್ಯತಾಳು, ಧೈರ್ಯ ತಾಳು, ನಿನ್ನ ಅದೃಷ್ಟವು ಮಾತ್ಸರ್ಯವನ್ನು ಬಿಟ್ಟು ನಿನ್ನ ಮೇಲೆ ದಯೆ ದೋರಿದೆ. ಈತನು ಆರ್ಯಪುತ್ರನೇ ಹೌದು.

**ಅರಸು**—ಹೇ ಪ್ರೀಯೆ, ಈವೊತ್ತಿನಾನಂದ ವೆಂಥಾದು!
ಕಾಮದಾವೃತ್ತ ||.

**ಅಂದು ಮೋಹವೆಂಬುವ ತಮಸ್ಸಿನೋಳ್ |**
**ಸುಂದರಾಂಗಿ ವಿಸ್ಮೃತಿಯ ಗೊಂಡೆಕೇಳ್ ||**
**ಇಂದು ನಿನ್ನ ಕಾಂಬೆನುಪರಾಗದಿಂ |**
**ದಿಂದು ಬಂದು ರೋಹಿಣಿಯ ಕಾಂಬವೊಲ್ ||**

**ಶಕುಂತಲೆ**—ಜಯತು ಜಯತು ಆರ್ಯಪುತ್ರಃ ( ಅರ್ಧೋಕ್ತಿ ಯನ್ನಾಡಿ ಕಂಠ ಸದ್ಗದಿತಳಾಗುತ್ತಾಳೆ. )

**ಅರಸು**—ಹೇ ಪ್ರಿಯೆ,

ಕಾಮದಾ ವೃತ್ತದಂತೆ||

ಬಿಗಿದ ಕಂಠದಿಂ ಜಯತು ಶಬ್ದಮಂ ।
ಸುಗುಣರನ್ನೆನೀ ನುಡಿಯದಿರ್ದರುಂ ||
ಚಿಗುರ್ದುರ್ಟಿಂಗೆ ವೀಳ್ಯವನು ಕಾಣದಾ ।
ಮೊಗವನೋಡಿ ನಾಂ ವಿಜಯನಪ್ಪೆ ಕೇಳ್ ||

ಬಾಲಕ—ಅಮ್ಮಯ್ಯಾ, ಆಲ್ರೆ ಈತ ?

ಶಕುಂತಲೆ--ವತ್ಸಾ, ನಿನ್ನ ದೈವಕ್ಕೆ ಕೇಳು. (ಕಣ್ಣೀರು ಸುರಿಸುತ್ತಾಳೆ)

ಅರಸು—( ಶಕುಂತಲೆಯ ಕಾಲಿಗೆರಗಿ )

|| ಪದ ||

ದಾಟಿ--' ನಾನಿನ್ನಾಧೀನಳಾದ ಬಳಿಕಾ ' ಎಂಬ ಪದದಂತೆ.

ನಾ ನಿನ್ನ ಪಾದಕೆರಗುವೆ ಪ್ರೌಢೆ || ಪಲ್ಲ ||
ಮಾನವತಿಯೆ ಸುಸಹನ ಶೀಲೆ ।
ಸಾನುರಾಗದಿಂದೆನ್ನಪರಾಧಗ ।
ಳೇನು ನೋಡದಲೆ ನೀ ಕ್ಷಮಿಸೆ || ಅನುಪಲ್ಲ ||
ಅಂದು ಮುನಿಗಳಾ ಗೂಡ ನಡೆಯುತ |
ಸುಂದರಿ ನೀ ಬಂದಿರೆ ಮನೆಗೆ ||
ಅಂದು ನಾವು ಕೂಡಿದ ಬಗೆ ಸ್ಮರಣೆಗೆ ।
ಬಂದುದಿಲ್ಲ ನಿನ್ನಡಿಯಾಣೆ || ೧ ||
ನೀರೆ ನೀ ಪರನಾರಿಯೆನುತಲಿ |
ದೂರಿದೆನಾನಾಸಮಯದಲಿ ।
ದೂರಿನಿಂದೆ ನೋಡಿದೆ ಯೆನ್ನನು ಕ-
ಣ್ಣೀರುತಂದು ನಾನದ ಮರೆಯೆ || ೨ ||
ಆರೋ ಏನೋ ಮಾಡಿದರೆ ಪ್ರಿಯೆ ।
ಬಾರಲಿಲ್ಲವೆ ಸ್ಮೃತಿ ವ್ಯಾಳ್ಯದಲಿ ||
ಘೋರ ಬಡಿಸಿದೆ ನಿನ್ನನು ಬಹುಪರಿ ।
ನಾರೀನಾ ಸೆರಗೊಡ್ಡುವೆ ಮರೆಯೋ || ೩ ||

ಮಂದಮತಿಯು ನಾಮಂದ ಭಾಗ್ಯನೆ ।
ಅಂಧನ ಕೊರಳೊಳು ಮಾಲೆಯನು ||
ತಂದು ಹಾಕಲಹಿಯೆಂದಂಜುತಲೊಗೆ |
ದಂದದಿಂದೆ ನಿನ್ನನು ಜರಿದೆ

( ಹೀಗೆಂದು ಕಾಲಿಗೆರಗುತ್ತಾನೆ. )

**ಶಕುಂತಲೆ—**ಹೇ ಪ್ರಾಣಪತೇ, ಇದು ಯೋಗ್ಯವಲ್ಲ. ಇದರಿಂದ ನಾನು ಪಾಪಿಷ್ಟಳಾಗುವೆನು ಬಲ್ಲಿರಾ. ಏಳಿ ಏಳಿ ಬೇಗ ಏಳಿ.

( ಅರಸು ಏಳುತ್ತಾನೆ )

|| ಪದ ||

( ದಾಟಿ—ಮೇಲಿನ ಪದದಂತೆ )

ನಿನ್ನೊಳೇನುಂಟು ದೋಷವು ನಾಥಾ
ಖಿನ್ನನಾಗದಿರು ಪ್ರಾಣೇಶಾ ||
ಮುನ್ನಿನ ಜನುಮದೊಳ್ಮಾಡಿದ ದುಷ್ಕೃತಿ
ಯನ್ನೆ ಭೋಗಿಸಿದೆ ದೀನೇಶಾ || ಅನುಪಲ್ಲ ||

ನೀತಿಸಾಗರಾ ಕೇಳೊ ನಮ್ಮಯ
ಪ್ರೀತಿಗೆ ಮರವಾದವುದುಂಟೆ
ಯಾತರಿಂದಲೀ ಮಾತಾಯಿತೋ ಬಿಡು
ಯಾತಕಿನ್ನು ಹಳಹಳಿ ರಮಣಾ || ೧ ||

ಧನ್ಯವಾಯಿತೀಜನ್ಮ ರಾಯನೆ ।
ನಿನ್ನನು ಕೂಡಿ ನಾ ಬಳಲಿದರೂ ||
ನಿನ್ನ ಕೀರ್ತಿಯೊಳ್ ಲಾಂಛನವಾಯಿತು |
ಎನ್ನ ಪೂರ್ವಪಾಪವು ಕಾಂತಾ || ೨ ||

ಮೇದಿನೀಶನೇ ನಿನ್ನ ಸ್ಮರಣೆಯೋ ।
ಳೀದಾಸಿಯು ಬಂದಿಹಳಿದಕೆ ||
ಆದಕಾರಣಾವುದು ಪೇಳ್ವುದು ಇ |
ನ್ನಾದ ಮಾತು ಮರೆವುದು ಜೀಯಾ || ೩ ||

**ಅರಸು**—ಪ್ರಿಯೇ, ನಿನ್ನ ಸ್ಮರಣೆ ಹೇಗಾಯಿತೆಂಬುವದು ನನ್ನ ಹೃದಯದೊಳಗಿನ ವಿಷಾದಶಲ್ಯವು ಹೋದನಂತರ ಹೇಳುತ್ತೇನೆ.

**॥ ಪದ ॥**

( ದಾಟಿ—ಬೆಳಗಾಗ ಬಂತು ಬಿಡೆನ್ನ । ನಾಳೆ ತಡೆಯದೆ ಬರುವೆನೋ ಕೇಳೋ ಮೋಹನ್ನಾ ॥ ಎಂಬ ಪದದಂತೆ. )

**ಕಣ್ಣೀರನೊರಿಸುವೆನಿಂದು ॥ ನೋಡಿ**
**ಧನ್ಯನಾಗುವೆನೆ ನಾ ಸಖಿಯ ಮುಖೇಂದು ॥ ಪಲ್ಲ ॥**
**ಇಂದುಮುಖಿಯೆ ಕೇಳಂದು ॥ ಬಾಷ್ಪ-**
**ದಿಂದೆ ಮೈದೊಳೆದೆ ನೀ ಬಳಿಯೊಳು ನಿಂದು ॥**
**ತಂದುದಿಲ್ಲದು ಲಕ್ಷ್ಯಗೆಂದು । ಹಿಂದಿ-**
**ನಿಂದೆ ಬಾಧಿಪ ತಾಪಗಳೆಯ ಬೇಕೆಂದು ॥ ೧ ॥**

**ತನುವೇನಾದುದೆ ನಿನ್ನ । ಮನ-**
**ದನುತಾಪದಿಂ ಮುಕ್ತನಾಗುವೆ ನಿನ್ನಾ ॥**
**ಕನಸೆಂದು ತಿಳಿಯೆ ಇದನ್ನಾ । ನಿನ್ನ-**
**ಕೊನೆಗಣ್ಣ ನೋಟಕ್ಕೆ ಕಾಣದ ಮುನ್ನ ॥ ೨ ॥**

**ಹಲವು ಕಾಲದಿ ನಿನ್ನ ಮೇಲೆ । ಸ್ಮೃತಿ-**
**ಗಳೆದು ನಿರ್ದಯನಾದೆ ಕೇಳೆ ಸುಶೀಲೆ ॥**
**ಕಳವಳಿಸಿದೆ ಮನದಲ್ಲೆ । ನಿನ್ನ-**
**ಕೆಳದುಟಿ ರಸವನಾ ಸವಿಯದೆ ಮೊದಲೆ ॥ ೩ ॥**

**ಶಕುಂತಲೆ**— ( ಅಷ್ಟರಲ್ಲಿ ಬೆರಳಿನಲ್ಲಿ ಉಂಗುರವನ್ನು ಕಂಡು) ಪ್ರಾಣನಾಥ, ಇದೇ ಮುದ್ರಿಕೆಯಲ್ಲವೇ ಅದು?

**ಅರಸು**—ಹೌದು ಪ್ರಾಣಸಖಿ, ಇದು ಸಿಕ್ಕದರಿಂದಲೇ ನಿನ್ನ ನೆನಪಾಯಿತು.

**ಶಕುಂತಲೆ**—ಈ ಮುದ್ರಿಕೆಯು ಬಹಳ ಕೆಟ್ಟ ಕೆಲಸ ಮಾಡಿತು. ಯಾವ ವ್ಯಾಳ್ಯಕ್ಕೆ ಪ್ರಾಣನಾಥನಿಗೆ ವಿವಾಹದ ಸ್ಮರಣೆಯಾಗತಕ್ಕದ್ದೋ ಅದೇ ವ್ಯಾಳ್ಯಕ್ಕಿಲ್ಲದ ಹಾಗಾಯಿತು.

**ಅರಸು**—ಇರಲಿ, ಆ ಮಾತು ಇನ್ನು ತೆಗೆಯಬೇಡ. ವಸಂತ ಕಾಲಕ್ಕೆ ಹ್ಯಾಗೆ ಕುಸುಮಗಳ ಗುರುತವೋ ಹಾಗೆ ನಮ್ಮ ದರ್ಶನದ ಗುರುತಕ್ಕೆ ಪುನಃ ಈ ಉಂಗುರವು ನಿನ್ನ ಕೈಯಲ್ಲಿರಲಿ ತೆಗೆದುಕೊ. ( ಉಂಗುರವನ್ನು ತೆಗೆದು ಕೊಡುತ್ತಾನೆ. )

**ಶಕುಂತಲೆ**—ಅಯ್ಯೋ, ನಾನು ಒಲ್ಲೆ. ಇದರಲ್ಲಿ ಇನ್ನು ಮೇಲೆ ನಾನು ವಿಶ್ವಾಸವಿಡಲಾರೆ. ಇದು ಪ್ರಾಣನಾಥರ ಕೈಯಲ್ಲಿಯೇ ಇರಲಿ.

( ಇಷ್ಟರಲ್ಲಿ ಇಂದ್ರಸಾರಥಿಯಾದ ಮಾತಲಿಯು ಬರುತ್ತಾನೆ. )

**ಮಾತಲಿ**—ಸುದೈವದಿಂದ ಧರ್ಮಪತ್ನಿಯ ದರ್ಶನವಾಯಿತು. ಪುತ್ರನ ಮುಖವನ್ನು ನೋಡಿ ಹೇ ಭೂಪತೇ, ನಿನಗೆ ಸರ್ವದಾ ಸೌಖ್ಯವಾಗಲಿ.

**ಅರಸು**—ನನ್ನ ಮನೋರಥವಲ್ಲಿಗೆ ಉತ್ತಮ ಫಲಗಳು ಬಂದವು. ಮಾತಲೀ, ಇಂದ್ರನಿಗೆ ಈ ವರ್ತಮಾನವು ತಿಳಿದಿದ್ದಿತೇ?

**ಮಾತಲಿ**—( ನಕ್ಕು ) ದೇವರಿಗೆ ಪರೋಕ್ಷವ್ಯಾವದಾದರೂ ಉಂಟೇ? ಆಯುಷ್ಮಂತಾ, ಭಗವಾನ್ ಮಾರೀಚಋಷಿಗಳು ನಿನ್ನ ದರ್ಶನದ ಉದ್ದಿಶ್ಯ ದಾರಿ ನೋಡುತ್ತಿದ್ದಾರೆ.

**ಅರಸು**—ಪ್ರಿಯೆ ಶಕುಂತಲೆ, ಬಾಲಕನನ್ನು ಎತ್ತಿಕೊ, ನಡೆ. ಭಗವಾನ್ ಮಾರೀಚಋಷಿಗಳ ದರ್ಶನವನ್ನು ನಿನ್ನಿಂದಸಹಿತನಾಗಿ ತೆಗೆದು ಕೊಳ್ಳತಕ್ಕದ್ದು.

**ಶಕುಂತಲೆ**—ಹಿರಿಯರ ಬಳಿಯಲ್ಲಿ ನಿಮ್ಮಗೂಡ ಬರುವದಕ್ಕೆ ನಾಚಿಕೆ ಬರುತ್ತದೆ.

**ಅರಸು**—ಅಭ್ಯುದಯ ಕಾಲಕ್ಕೆ ಹೀಗೇ ಮಾಡತಕ್ಕದ್ದು, ನಡೆ.

( ಎಲ್ಲರೂ ನಡೆಯಲಾರಂಭಿಸುತ್ತಾರೆ. )

( ಅಷ್ಟರಲ್ಲಿ ಮಾರೀಚಋಷಿಗಳು ಬಂದು ಆಸನದ ಮೇಲೆ ಕುಳಿತು ಕೊಳ್ಳುತ್ತಾರೆ. ಆತನ ಪತ್ನಿಯಾದ ಪ್ರದಿತಿಯು ಬಳಿಯಲ್ಲಿ ಕುಳಿತು ಕೊಳ್ಳುತ್ತಾಳೆ. )

**ಮಾರೀಚ**—( ಅರಸನನ್ನು ನೋಡಿ ಅದಿತಿಗೆ ಹೇಳುತ್ತಾನೆ ) ಹೇ ದಾಕ್ಷಾಯಣೀ—

ವೃ|| ಇವನೇ ನಿನ್ನಯ ಪುತ್ರನಾಹವದಿ ತಾಂ ಸೇನಾಧಿಪತ್ವಂ ತಳೆ।
ರ್ದವನೀನಾಥನು ಸಾಕರಕ್ಷಕನಿವಂ ದುಷ್ಯಂತ
ರಾಜೇಂದ್ರ ನೆಂ ||
ಬವನಿಂದ್ರಾಯುಧ ವಜ್ರವಾಭರಣದಂತಾಯ್ತಿನ್ನ ದಕ್ಕಿಲ್ಲ ಕಾ-
ರ್ಯರ್ದವೆ ಕೇಳೀತನ ಬಿಲ್ಲಿವಾಯ್ತು ಸುರಲೋಕಾ
ಧಾರಭೂತಂ ಸತೀ ||

**ಅದಿತಿ**—ಈತನ ಆಕೃತಿಯೇ ಸಂಭಾವನೀಯವಾಗಿ ತೋರುತ್ತದೆ.

**ಮಾತಲಿ**—ಹೇ ಆಯುಷ್ಮಂತಾ, ರಾಜಾ, ಸಕಲ ದೇವತೆಗಳ ತಾಯಿ ತಂದೆಗಳಾದವರು ನಿನ್ನನ್ನು ಪುತ್ರಪ್ರೀತಿಯಿಂದ ನೋಡುತ್ತಾರೆ. ಇವರ ಬಳಿಯಲ್ಲಿ ಬರಬಹುದು. ಇವರೆಂಥವರೆಂದರೆ—

ಚಾಮರವೃತ್ತ ||

ಆ ಮರೀಚಿದಕ್ಷರಿಂದೆ ಪುಟ್ಟಿದರ್ವಿಧಾತನೋ।
ಳೀ ಮಹಾತ್ಮರೋಳು ಒಂದೆ ಪೀಳ್ಗಿಕೇಳ್ ಪರಾತ್ಪರಂ ||
ವಾಮನಾವತಾರಗೆಜ್ಞ ದೀಶನಾತ್ರಿಲೋಕದಾ ।
ಸ್ವಾಮಿಗಿನ್ನು ಷಡ್ದ್ವಿರೂಪನಾದಿನಂಗೆ ಕಾರಣರ್ ||

**ಅರಸು**—ಅಂಥವರು ಇವರೇನೋ ?

**ಮಾತಲಿ**—ಹೌದು ಜೀಯಾ, ಅವರೇ ಇವರು.

**ಅರಸು**— (ಸಮೀಪಕ್ಕೆ ಹೋಗಿ) ಇಂದ್ರನ ಸೇವಕನಾದಂಥ ದುಷ್ಯಂತನು ಉಭಯತರಿಗೆ ವಂದನೆ ಮಾಡುತ್ತಾನೆ.

**ಮಾರೀಚ**—ವತ್ಸಾ, ಚಿರಂಜೀವಿಯಾಗಿ ಪೃಥ್ವಿಯನ್ನು ಪಾಲಿಸಪ್ಪಾ !

**ಅದಿತಿ**—ವತ್ಸಾ, ರಣದಲ್ಲಿ ನಿನಗೆ ಯಶಸ್ಸು ಬರಲಿ. ಶತ್ರುಗಳಿಲ್ಲದ ಹಾಗಾಗಲಿ !

**ಶಕುಂತಲೆ**—ಬಾಲಕನಿಂದೆ ಸಹಿತಳಾಗಿ ಉಭಯತರಿಗೆ ನಾನು ಪಾದವಂದನೆ ಮಾಡುತ್ತೇನೆ.

**ಮಾರೀಚ**—ವತ್ಸೆ, ಅಖಂಡ ಸೌಭಾಗ್ಯವತಿಯಾಗು !

ಕಂದ || ಪತಿಯಾ ಖಂಡಲ ನಂತಿರೆ
ಸುತನು ಜಯಂತನ ಪ್ರತಿಮೆಯೊಲಿರೆ ವೋಣೆನ್ಯಾ
ಕಿತರಾಶಿಷಗಳು ಇಂದ್ರನ
ಸತಿ ಪೌಲೋಮಿಯೊಲಾಗಿರು ನೀ ನೃಪಗೆ ||

**ಅದಿತಿ**—ವತ್ಸೆ, ಪತಿಯು ನಿನ್ನ ಮೇಲೆ ಪ್ರೀತಿ ಮಾಡಲಿ ನಿನ್ನ ಪುತ್ರನು ದೀರ್ಘಾಯುಷಿಯಾಗಿ ಉಭಯಕುಲಕ್ಕೂ ಆನಂದದಾಯಕನಾಗಲಿ ಕುಳಿತು ಕೊಳ್ಳಿ.

**ಮಾರೀಚ**—( ಬೆರಳಿನಿಂದೆ ಮೂವರನ್ನು ತೋರುತ್ತ )

ಸ್ವಾಗತಾ || **ಈ ಶಕುಂತೆಲೆಯು ಸಾಧ್ವಿಯು ಪುತ್ರಂ |**
**ತಾ ಶುಭೋದಯನು ನೀ ಗುಣ ಪೂರ್ಣಂ ||**
**ಈಸು ಮೂವರೊಳು ಕೂಡಿದವೈ ಪೃ |**
**ಥ್ವೀಶ ಭಕ್ತಿಧನ ಸದ್ವಿಧಿಗಳ್ ಕೇಳ್ ||**

**ಅರಸು**—ಭಗವನ್, ಮೊದಲೇ ಮನೋರಥ ಸಿದ್ಧಿಯಾಗಿದೆ. ಆಮೇಲೆ ದರ್ಶನವಾಯಿತು. ತಸ್ಮಾತ್ ಸ್ವಾಮಿಗಳ ಗ್ರಹವು ಅಪೂರ್ವವಾಗಿರುತ್ತದೆ.

ಪ್ರಷ್ಪಿತಾಗ್ರಾ || **ಜನಿಸುವದು ಸುಮಂ ಫಲಕ್ಕೆ ಪೂರ್ವಂ**
**ಘನ ಮೊದಲೊಳ್ ತದವಂತರ ಪಯಂ ಕಾ**
**ರಣ ಕೃತಿಕ್ರಮಮಪ್ಪುತಿರ್ದು ಮುಂಗಂ**
**ಡೆನುಸಲೆ ಸಂಪದಮುಂ ಪ್ರಸಾದವಾ ಮೇಲ್ ||**

**ಮಾತಲಿ**—ಸೃಷ್ಟಿಕರ್ತನ ಪ್ರಸಾದದ ಮಹಾತ್ಮ್ಯವೇ ಹಾಗಿರುವದು.

**ಅರಸು**—ಭಗವಾನ್, ತಮ್ಮ ಆಜ್ಞಾಧಾರಿಣಿಯಾದ ಶಕುಂತಲೆಯನ್ನು ನಾನು ಗಾಂಧರ್ವವಿವಾಹದಿಂದ ಪಾಣಿಗ್ರಹಣ ಮಾಡಿದೆ. ಆದರೂ ಕೆಲವುಕಾಲ ಹೋದಬಳಿಕ ಅವಳ ಬಂಧುಜನರು ನನ್ನ ಮಂದಿರಕ್ಕೆ ತೆಗೆದು ಕೊಂಡು ಬಂದ ವ್ಯಾಳದಲ್ಲಿ ನನ್ನ ಸ್ಮೃತಿಯು ನಷ್ಟವಾಗಿ ಇವಳನ್ನು ನಿರ್ಭರ್ತ್ಸನೆಮಾಡಿ ಸಗೋತ್ರರಾದ ಕಣ್ವಮುನಿಗಳಿಗೆ ನಾನು ಮಹಾಪರಾಧಿಯಾದೆನು. ಆಮೇಲೆ ಯಾವಾಗ್ಗೆ ನನ್ನ ದೃಷ್ಟಿಗೆ ಈ ಮುದ್ರಿಕೆಯು ಬಿತ್ತೋ ಆಗ್ಗೆ ಇವಳ ಕೂಡ ವಿವಾಹ ಹೊಂದಿರುವದು ಯಾವತ್ತೂ ಸ್ಮರಣೆಗೆ ಬಂತು. ಇದರಿಂದ ನನಗೆ ಬಹು ಆಶ್ಚರ್ಯವಾಗುತ್ತದೆ.

|| ಯೂಥಿಕಾವೃತ್ತ ||

**ಆನೆ ಪೋಗಲದು ಕಂಡಿರೆ ಶಂಕೆಯಿಂ |**
**ದಾನೆಲಂ ತಳೆದ ಹೆಜ್ಜೆಗಳೋರ್ವನು ||**
**ತಾನಿರೀಕ್ಷಿಸುತೆ ನಿಶ್ಚಯಿಪಂತೆವೋ |**
**ಲಾನು ಕೆಟ್ಟೆನು ಮನಸ್ಸಿನ ದೋಷದಿಂ ||**

**ಮಾರೀಚ**— ವತ್ಸಾ, ನೀನು ಅಪರಾಧವನ್ನು ಮಾಡಿದಿಯೆಂದು ಮನಸ್ಸಿನಲ್ಲಿ ಸಹ ತರಬೇಡ ಕಂಡೆಯಾ. ಅದರ ಕಾರಣವು ಬೇರೆ ಆಗಿರುತ್ತದೆ ಹೇಳುತ್ತೇನೆ ಕೇಳು.

**ಅರಸು**—ಸ್ವಾಮಿ, ಕೇಳುತ್ತೇನೆ.

**ಮಾರೀಚ**—ಯಾವಾಗ್ಗೆ ಅಪ್ಸರಸ್ ತೀರ್ಥದಿಂದ ದುಃಖಗ್ರಸ್ತಳಾದ ಶಕುಂತಲೆಯನ್ನು ತೆಗೆದುಕೊಂಡು ಮೇನಕೆ ದಾಕ್ಷಾಯಣಿಯ ಬಳಿಗೆ ಬಂದಳೋ ಆಗ್ಗೆ ನಾನು ಅಂತಜ್ಞಾನ ದೃಷ್ಟಿಯಿಂದ ನೋಡಲಾಗಿ ನೀನು ದೂರ್ವಾಸ ಋಷಿಗಳ ಶಾಪಮೂಲಕವಾಗಿ ಧರ್ಮಪತ್ನಿಯನ್ನು ತ್ಯಾಗ ಮಾಡಿದೆಯೆಂದು ನಾನು ತಿಳಿದೆನು. ಶಾಪವು ಅಂಗುಲೀಯಕ ದರ್ಶನಾವಧಿ ಯಾಗಿಯೇ ಇತ್ತು. ಕಾರಣ ನೀವು ಉಂಗುರವನ್ನು ನೋಡಿದ ಕ್ಷಣವೆ ನಿವೃತ್ತಿಯಾಯಿತು.

**ಅರಸು**—( ಶ್ವಾಸವಿಟ್ಟು ) ಈವೊತ್ತು ನಾನು ಲೋಕಾಪವಾದದಿಂದ ಮುಕ್ತನಾದೆನು.

**ಶಕುಂತಲೆ**— ( ತನ್ನೊಳಗೆ ) ಅಯ್ಯೋ ದೈವವೆ, ಆರ್ಯಪುತ್ರನು ನನ್ನನ್ನು ನಿಷ್ಕಾರಣದಿಂದ ಪರಿತ್ಯಾಗ ಮಾಡಿದನೆಂದು ನಾನು ತಿಳಿದೆ. ಶಾಪ ದಿಂದ ಹೀಗಾಯಿತೆಂಬುವದು ನಾನರಿಯೆ. ಶಾಪವಾದಾಗ್ಗೆ ನಾನು ವಿರಹ ಗ್ರಸ್ತಳಾಗಿ ತಿಳಿಯದೆ ಹೋದೆ ಕಾಣುತ್ತದೆ. ಅದಕ್ಕಂತೆಯೆ ನನ್ನ ಸಖಿಯರು ಆರ್ಯಪುತ್ರನು ಗುರುತು ಹಿಡಿಯದಿದ್ದ ಪಕ್ಷದಲ್ಲಿ ಮುದ್ರಿಕೆಯನ್ನು ತೋರಿ ಸೆಂದು ಹೇಳಿದ್ದರು, ಇದಕ್ಕೆ ಸಂಶಯವಿಲ್ಲ.

**ಮಾರೀಚ**—ವತ್ಸೆ, ಆದ ಮಾತು ಆಗಿಹೋಯಿತು. ಬಿಡು, ನಿನ್ನ ಪತಿಯ ದರ್ಶನವಾಯಿತು. ಇನ್ನುಮೇಲೆ ಹಿಂದಿನ ವೃತ್ತಾಂತವನ್ನು ನೆನೆದು ಪತಿಯ ಮೇಲೆ ಕೊಪಿಸಬೇಡ ಕಂಡೆಯಾ, ಕೇಳು.—

|| ಮ. ವಿ. ವೃತ್ತ ||

**ಮುನಿಶಾಪಕ್ಕೆ ತೊಡಂಗಿ ವಿಸ್ಮರಿಸಿ ನಿನ್ನಂ ತ್ಯಾಜ್ಯ ಗೈದಿರ್ದನೀ ।**
**ತನ ಮೇಲಿನ್ನು ದನಿತ್ವ ನಿನ್ನ ದಿವನಾದಂ ದೋಷದಿಂ ಮುಕ್ತ ಕೇಳ್ ||**
**ಮನದೊಳ್ ಕೋಪವು ಬೇಡ ತೋರದಿರೆ ಬಿಂಬಂ ಮಣ್ಣು ಗೊಂಡಾಗಲಾಂ**
**ಘನವಾಗಿರ್ಪುದೆ ರನ್ನಗನ್ನಡಿಗದೇ ಸ್ವಚ್ಛತ್ವಮುಂ ತಾಳ್ದವೋಲ್ ||**

**ಅರಸು**—ಭಗವನ್ ತಾವೆಂಬುವದು ವಾಸ್ತವಿಕವಾಗಿದೆ.

**ಮಾರೀಚ**—ಈ ಶಕುಂತಲೆಯ ಹೊಟ್ಟೆಯಿಂದ ಹುಟ್ಟಿದಂಥ ನಿನ್ನ ಪುತ್ರನ ಜಾತಕರ್ಮಾದಿಗಳನ್ನು ಶಾಸ್ತ್ರೋಕ್ತ ಮಾಡಿದ್ದೇನೆ. ಇದು ನಿನ್ನ ಮನಸ್ಸಿಗೆ ಬರುತ್ತದಷ್ಟೆ ?

**ಅರಸು**--ಭಗವನ್ ಇವನೇ ನನ್ನ ಕುಲಕ್ಕೆ ಆಧಾರನಾಗಿದ್ದಾನೆ.

( ಬಾಲಕನ ಬೆನ್ನ ಮೇಲೆ ಕೈ ಎಳೆಯುತ್ತಾನೆ. )

**ಮಾರೀಚ**—ಹಾಗೂ ಈತನು ಚಕ್ರವರ್ತಿಯಾಗತಕ್ಕವನಿದ್ದಾನೆಂದು ತಿಳಿ. ಈತನು ಮುಂದೇನು ಮಾಡುವನೆಂದರೆ—

ಭಾಮಿನಿ || **ಇವನ ರಥ ಜಡಧಿಯನೆ ದಾಂಟುವ |**
**ದಿವಸು ಸಪ್ತದ್ವೀಪಗಳ ಜಯಿ- |**
**ಸುವನಿವನ ಸರಿ ರಥಿಕರಿಳೆಯೊಳಗಿಲ್ಲದಾಗುವರು ||**
**ಇವನು ಸರ್ವರ ದಮನಗೈಯಲೆ |**
**ನುವೆವು ಸರ್ವದಮನ ನೆನುತ ಮುಂ-**
**ದಿವನು ಪ್ರಜರಸು ಭರಣಗೈಯಲು ಭರತನೆನಿಸುವನು ||**

**ಅರಸು**—ಭಗವನ್, ತಾವೇ ಈತನ ಜನ್ಮಸಂಸ್ಕಾರವನ್ನು ಮಾಡಿದ್ದೀರಿ ಆಂದಮೇಲೆ ಇವೆಲ್ಲ ಮಾತುಗಳು ಘಟಿಸುವವೆಂದು ನಮಗೆ ನಿಃಸಂಶಯ ವಾಗಿ ತೋರುತ್ತದೆ.

**ಅದಿತಿ**—ಭಗವನ್, ಮಗಳ ಮನೋರಥಗಳು ಸಂಪೂರ್ಣವಾದ ವೃತ್ತಾಂತವನ್ನು ಸವಿಸ್ತರವಾಗಿ ಕಣ್ವಋಷಿಗಳಿಗೆ ತಿಳುಹಿಸಬೇಕು. ಮಮತೆ ಯಿಂದ ಪೂರಿತಳಾದ ಅವಳತಾಯಿ ಮೇನಕೆಯಂತೂ ಇಲ್ಲಿಯೇ ಇದ್ದಾಳೆ.

**ಶಕುಂತಲೆ**—ನನ್ನ ಮನಸಿನೊಳಗಿನ ಮಾತನ್ನೇ ದೇವಿಯಾಡಿದಳು.

**ಮಾರೀಚ**—ತಪಸ್ಸಾಮರ್ಥ್ಯದಿಂದ ಕಣ್ವಋಷಿಗಳಿಗೆ ಎಲ್ಲವೂ ಅವ ಗತವಾಗಿದೆ.

**ಅರಸು**—ಹಾಗೆಂತಲೇ ಅವರು ನನ್ನಮೇಲೆ ಕೋಪಿಷ್ಟರಾಗಲಿಲ್ಲೆಂದು ಕಾಣುತ್ತದೆ.

**ಮಾರೀಚ**--ಆದರೂ ಆನಂದ ವಾರ್ತೆಯನ್ನು ನಾವು ತಿಳುಹಿಸುವದು ಯೋಗ್ಯವಾಗಿದೆ. ಯಾರವರು ಅಲ್ಲಿ?

(ಇಬ್ಬರು ಶಿಷ್ಯರು ಬರುತ್ತಾರೆ.)

**ಶಿಷ್ಯ**—ಭಗವನ್ ಏನು ಆಜ್ಞೆ?

**ಮಾರೀಚ**—ಎಲೋ ಗಾಲವಾ, ಈಗಿಂದೀಗಲೇ ಆಕಾಶ ಮಾರ್ಗದಿಂದ ಹೋಗಿ ಆ ಕಣ್ವಋಷಿಗಳಿಗೆ, "ಶಕುಂತಲೆಯ ಶಾಪವು ನಿವೃತ್ತಿಯಾಗಿ ದುಷ್ಯಂತರಾಜನು ಅವಳನ್ನು ಪುತ್ರಸಹಿತ ಸ್ವೀಕಾರ ಮಾಡಿದನೆಂಬಾನಂದ ವಾರ್ತೆಯನ್ನು ಬೇಗ ತಿಳುಹಿಸಿ ಬಾ" ಹೋಗು.

**ಶಿಷ್ಯ**—ಭಗವನ್, ಆಜ್ಞೇಪ್ರಕಾರ ಮಾಡುತ್ತೇನೆ.

**ಮಾರೀಚ**—ವತ್ಸಾ, ನೀನು ನಿನ್ನ ಪತ್ನಿಯನ್ನೂ ಪುತ್ರನನ್ನೂ ಕೂಡಿಕೊಂಡು ಇಂದ್ರನ ರಥದಲ್ಲಿ ಆರೂಢನಾಗಿ ನಿನ್ನ ರಾಜಧಾನಿಗೆ ಸುಖದಿಂದ ಹೊರಟುಹೋಗು.

**ಅರಸು**—ಭಗವನ್, ಮಹದಾಜ್ಞೆ.

**ಮಾರೀಚ**—ಇನ್ನೊಂದು ಹೇಳುತ್ತೇನೆ ಕೇಳು.

(ಎನಲು)

ಭಾಮಿನಿ ॥ **ಧರೆಗೆ ಮಳೆಗರಿಸಲಿ ಬಿಡೌಜನು ।**
**ನಿರುತದೊಳ್ ಯಾಗದಲಿ ನೀನಾ-**
**ಸುರರ ಸಂತುಷ್ಟಿಸುತಲಿರು ಕೇಳ್ ಭೂಪಕುಲತಿಲಕಾ॥**
**ಎರಡು ಲೋಕವನಿಬ್ಬರೊಂದಾ ।**
**ಗಿರುತ ಪೊರೆವದು ಸ್ನೇಹದಿಂದೀ**
**ತೆರದಿ ಶತಯುಗ ತಿರುತಿರುಗಿ ಬರುವಲ್ಲಿ ಪರಿಯಂತ ॥**

**ಅರಸು**— ಭಗವನ್, ಲೋಕ ಕಲ್ಯಾಣಾರ್ಥವಾಗಿ ಯಥಾನುಶಕ್ತಿ ಪ್ರಯತ್ನಮಾಡೇನು. ಅದಕ್ಕೆ ನ್ಯೂನವಾಗಲಿಕ್ಕಿಲ್ಲ.

**ಮಾರೀಚ**—ವತ್ಸಾ, ಇನ್ನೇನು ನಿನಗೆ ಪ್ರಿಯವಾದದ್ದು? ಬೇಡಿಕೊ.

**ಅರಸು**— ಭಗವನ್ ಇದಕ್ಕೂ ಹೆಚ್ಚಿನದೇನು ಬೇಡತಕ್ಕದ್ದಿದೆ. ಆದರೂ ಸ್ವಾಮಿಗಳು ಕೊಡುವಿರೆಂದ ಪಕ್ಷದಲ್ಲಿ ನಾನು ಹೀಗೆ ಬೇಡಿಕೊಳ್ಳುತ್ತೇನೆ.

ಭಾಮಿನಿ | ಅರಸರೆಲ್ಲರು ಜನರ ಹಿತಕನು
ಸರಿಸಿ ನಡೆಯಲಿ ಎಲ್ಲ ಧರೆಯು ಜ
ನರು ಸರಸ್ವತಿವಾಣಿ ದೇವತೆಯನ್ನೆ ಮನ್ನಿಸಲಿ |
ಕರುಣದಿಂ ಪರಮಾತ್ಮ ವಿಶ್ವಂ
ಭರನೆನಗೆ ಮುನ್ನಂತ ಕಾಲದಿ
ಎರಡನೆಯ ಜನುಮವನೆ ತೋರದೆ ಕೊಡಲಿ
ಮುಕ್ತಿಯನು ||

ಏಳನೆಯ ಅಂಕವು ಮುಗಿದುದು.

ಇತಿ ಶ್ರೀಮನ್ಮಹಾ ಕವಿ ಕಾಲಿದಾಸ ವಿರಚಿತ ಮಭಿಜ್ಞಾನ ಶಕುಂತಲ ನಾಮ ನಾಟಕಂ ಸಮಾಪ್ತಂ.

---

## ಕನ್ನಡ ಭಾಷಾಂತರಂ ಸಂಪೂರ್ಣಂ.

—: ಮಿತಿ :—

ನೂರಾನಾಲ್ಕದರಷ್ಟರಿಂ ಗುಣಿಸು ತೊಂಬತ್ತೈದನಂ ವರ್ಗ ಗೈ-
ತೋರಾಲಬ್ಧಗಳಲ್ಲಿಯಂತರವನಂ ಶುಕ್ಲಾಬ್ದಕಾ ಪೌಷದೋಳ್ *
ತಾರಾಧೀಶನ ಮಾರ್ಗಮಂ ಕ್ಷುಧಿತ ಶೈವನೋರ್ಳ್ಪರಂದಿಂದಿರಾ†
ವಾರ+ಕ್ಕೀಕೃತಿ ಪೂರ್ಣವಾಯ್ತು ಜಗದಾಧಾರೇಚ್ಛೆಯಿಂ
ಶೇಷನಿಂ ||

## ಮುಗಿದುದು.

---

* ಶಾ. ಶ. ೧೭೯೧ನೇ ಶುಕ್ಲ ಸಂವತ್ಸರ ಪುಷ್ಯಮಾಸ.

† ಬಹುಳ ಚತುರ್ಥಿ (ಸಂಕಷ್ಟಿ) + ಶುಕ್ರವಾರ.

*

ಶ್ರೀವಿದ್ಯಾರಣ್ಯ ಗ್ರಂಥ ಪ್ರಕಾಶನ ಸಮಿತಿ ಬೆಳಗಾವಿ.

## ಆಶ್ರಯದಾತರು.



## ದೇಶಭಕ್ತ ದೊಡ್ಡಮೋಟೆ ಅಂದಾನಪ್ಪನವರು

## ಜಕ್ಕಲಿ.

ವೀರಭಾರತ ಮುದ್ರಣಾಲಯ ಬೆಳಗಾವಿ.

ಶ್ರೀವಿದ್ಯಾರಣ್ಯ ಗ್ರಂಥ ಪ್ರಕಾಶನ ಸಮಿತಿ ಬೆಳಗಾವಿ.

## ಆಶ್ರಯದಾತರು.



ಶ್ರೀ. ದೇಸಾಯಿ ಮಲ್ಹಾರರಾಯರು
ಹಳೇಹುಬ್ಬಳ್ಳಿ.

ಕೃಷ್ಣ, ಮುದ್ರಣಾಲಯ ಬೆಳಗಾವಿ.

ಶ್ರೀವಿದ್ಯಾರಣ್ಯ ಗ್ರಂಥಪ್ರಕಾಶನ ಸಮಿತಿ ಬೆಳಗಾವಿ.

## ಪೋಷಕರು.



## ಡಾ. ಸಪನೂರ ಹನುಮಂತರಾಯರು

ಬೆಳಗಾವಿ.

ಕೃಷ್ಣ, ಮುದ್ರಣಾಲಯ ಬೆಳಗಾವಿ

ಶ್ರೀವಿದ್ಯಾರಣ್ಯ ಗ್ರಂಥ ಪ್ರಕಾಶನ ಸಮಿತಿ ಬೆಳಗಾವಿ.

## ಪೋಷಕರು.



## ಶ್ರೀ. ಬೆಟಗೇರಿ ಭೀಮರಾಯರು

ಬೆಳಗಾವಿ.

ವೀರಭಾರತ ಮುದ್ರಣಾಲಯ ಬೆಳಗಾವಿ.

# ಶ್ರೀ ವಿದ್ಯಾರಣ್ಯ ಗ್ರಂಥಮಾಲೆಯ

## ಆಶ್ರಯದಾತರು.



ದೇ. ಭ. ದೊಡ್ಡಮೇಟಿ ಅಂದಾನಪ್ಪನವರು, ಜಕ್ಕಲಿ. ೧೦೧ ರೂ.

ಶ್ರೀ. ದೇಸಾಯಿ ಮಲ್ಹಾರರಾಯರು, ಹಳೇಹುಬ್ಬಳ್ಳಿ. ೧೦೧ ,,

## ಪೋಷಕರು.

ಡಾ. ಸವಣೂರ ಹನುಮಂತರಾಯರು,

ಎಲ್. ಎಮ್. ಎಂಡ ಎಸ್. ಬೆಳಗಾವಿ. ೨೫ ,,

ಶ್ರೀ. ಬೆಟಗೇರಿ ಭೀಮರಾಯರು, ಬೆಳಗಾವಿ. ೨೫ ,,

## ಸಹಾಯಕರು.

ರಾ. ಬ. ಅಂಗಡಿ ಷಣ್ಮುಖಪ್ಪನವರು, ಎಲೆಲ್. ಬಿ.

ಎಮ್. ಎಲ್. ಸಿ. ಬೆಳಗಾವಿ. ೫ ,,

ದೆ. ಭ. ಪಾಟೀಲ ಕಲ್ಲನಗೌಡರು, ಎಲೆಲ್. ಬಿ.

ವಕೀಲರು, ಬೆಳಗಾವಿ. ೫ ,,

ಶ್ರೀ. ವಾಲಿ ಮಲ್ಲೇಶಪ್ಪನವರು, ಎಮ್. ಎ.

ಚೀಫ ಆಫೀಸರ, ಡಿ. ಎಲ್. ಬಿ. ಬೆಳಗಾವಿ. ೫ ,,

ಡಾ. ನಂದೀಮಠ ಶಿವಲಿಂಗಯ್ಯನವರು,

ಎಮ್. ಎ. ಪಿ. ಎಚ್. ಡಿ. (ಲಂಡನ್) ಬೆಳಗಾವಿ. ೫ ,,

ಶ್ರೀ. ನಿರಡಿ ಬಸವಂತಪ್ಪನವರು, ಬಿ. ಎ.

ಚಿಟಣೀಸರು ಕಲೇಕ್ಟರ ಕಚೇರಿ ಬೆಳಗಾವಿ. ೫ ,,

ಶ್ರೀ. ದೇಸಾಯಿ ಶಿವಲಿಂಗಪ್ರಭುಗಳು (ರುದ್ರಾಪೂರ)

ಬೆಳಗಾವಿ. ೫ ,,

ಶ್ರೀ. ಬೆಳವೀ ವೆಂಕಟರಾಯರು, ಎಲೆಲ್. ಬಿ.

ವಕೀಲರು, ಬೆಳಗಾವಿ. ೫ ,,

| | |
|---|---|
| ಶ್ರೀ. ಕಿತ್ತೂರ ವಿರೂಪಾಕ್ಷಪ್ಪನವರು, ಎಲ್‌ಎಲ್, ಬಿ. | ರೂ. |
| ವಕೀಲರು, ಬೆಳಗಾವಿ. | ೫ ,, |
| ಡಾ. ಪೋತದಾರ ಗೋವಿಂದರಾಯರು, | |
| ಎಲ್. ಸಿ. ಪಿ. ಎಸ್. ಬೆಳಗಾವಿ. | ೫ ,, |
| ಶ್ರೀ. ಮಾಸೂರ ನರಸಿಂಹರಾಯರು, ಬೆಳಗಾವಿ. | ೫ ,, |
| ಶ್ರೀ. ಕಲಘಟಗಿ ವೆಂಕಟರಾಯರು, ಬೆಳಗಾವಿ. | ೫ ,, |
| ಶ್ರೀ. ಕಟ್ಟಿ ಕೃಷ್ಣಾಚಾರ್ಯರು, ಸೆಕ್ರೆಟರಿ, | |
| ಡಿ. ಸೆ. ಕೊ. ಬ್ಯಾಂಕ. ಬೆಳಗಾವಿ | ೫ ,, |
| ಶ್ರೀ. ಕುಲಕರ್ಣಿ ಭೀಮರಾಯರು, | |
| ಪ್ರಾಸಿಕ್ಯೂಟರ, ಬೆಳಗಾವಿ. | ೫ ,, |
| ಶ್ರೀ ಕಟ್ಟಿ ಹನುಮಂತಾಚಾರ್ಯರು, ಹಲಸಿ. | ೫ ,, |
| ಶ್ರೀ. ಜೋಶಿ ನಾರಾಯಣರಾಯರು, | |
| ಕಾರಕೂನರು ಜಜ್ಜ ಕೋರ್ಟ, ಬೆಳಗಾವಿ. | ೫ ,, |
| ಶ್ರೀ. ಪಾಟೀಲ ಶಿವನಗೌಡರು, ಗೆಜಪತಿ. | ೫ ,, |
| ಶ್ರೀ. ಗುರ್ಲಹೊಸೂರ ಅಂಬಕ್ಕನವರು, ಮುಖ್ಯ | |
| ಶಿಕ್ಷಕಿಯರು ಕ. ಹೆ. ಮು. ಶಾ. ನಂ. ೧ ಬೆಳಗಾವಿ. | ೫ ,, |

# ಪರಿಶಿಷ್ಟ.

೧೮೭೦ನೇ ಇಸ್ವಿಯಲ್ಲಿ ಮುಂಬಯಿಯ ಎಜ್ಯುಕೇಶನ್ ಸೊಸಾಯಿಟೀ ಪ್ರೆಸ್ಸಿನಲ್ಲಿ ಮುದ್ರಿತವಾದ ಮೊದಲನೆಯ ಆವೃತ್ತಿಯಲ್ಲಿ ಈ ಕೆಳಗೆ ಕೊಟ್ಟ ಪದ್ಯಗಳು ಹೆಚ್ಚಿಗೆ ದೊರೆಯುತ್ತವೆ.

೧ ನೇ ಅಂಕದಲ್ಲಿ '' ದಂಡು ಕಂಡು ಬಿದರ್ದಾಶ್ರಮದೊಳ್ '' ಎಂಬ ಪದಕ್ಕಿಂತ ಮೊದಲು,

|| ಮದಿರಾವೃತ್ತ ||

**ತುಂಗ ಮೃಗಂಗಳ ಸಂಗಡ ಸಂಗರ ಸಂಗತಿಂಗೆ ತುರಗಂಗಳಿಗಾವೇ-|**
**ಶಂಗೊಡೆ ಜತ್ತಿನೊಳೊತ್ತರಿಸುತ್ತಿರೆ ಕತ್ತಲೆತ್ತಲುರೆ ಮುತ್ತಿತು ಕೆಂಧೂ ||**
**ಳೀಂಗತಿ ಜಿಟ್ಟಿಗಳಿಟ್ಟಿಹ ಪಟ್ಟಿನೊಳೊಟ್ಟ ಬಟ್ಟೆಗಳು ಕೆಟ್ಟಿಪವೀ ವೃ-|**
**ಕ್ಷಾಂಗಗಳಿಂಗೆ ತೊಡಂಗಿಹಪಂ ಹುಡಿಯೌಂಗಿ ತಿಂಗಡಿಪುದ್ಯೈ ಗಡಬನ್ನಿ || ೧ ||**

೨ನೇ ಅಂಕದಲ್ಲಿ '' ನನ್ನ ಸುತ್ತ ಒಳ್ಳೇ ಪೇಕಲಾಟ ಬಂತು '' ಎಂಬ ಅರಸಿನ ಮಾತಿನ ನಂತರ,

|| ದ್ರುತವಿಲಂಬಿತ ||

**ಎದುರಿನೋಳಿರೆ ಪರ್ವತ ನೀಗದೆ | ನದಿಯು ದಾರಿಯನಿಕ್ಕಡಿ ಮಾಳ್ಪುದೊಂ ||**
**ದವರ ಓಲ್ಮನಸಾಗಿದೆ ಎನ್ನದೀ | ಗೊದಗೆ ಬೇರಿಹ ಕಾರ್ಯಗಳೇನಿದು || ೧ ||**

೩ನೇ ಅಂಕದಲ್ಲಿ '' ಕೇಳತಕ್ಕದ್ದೇ ಕೇಳಿದೆ '' ಎಂಬ ಅರಸನ ಮಾತಿನ ತರುವಾಯ.

|| ಶಾರ್ದೂಲ ವಿಕ್ರೀಡಿತ ||

**ರಾಹಂ ತೋರ್ಪನು ಮೇಘಮುಂಬಿರೆ ಮುಗಿಲ್ ಮಧ್ಯಾಹ್ನದೋಳ್ಭಾಸ್ಕರಂ ||**
**ದೇಹಂ ಶಾಂತಿಸುತಿರ್ಪ ಸಂಜೆಯುಲಿ ತಾಂ ಪರ್ಜನ್ಯದಿಂದಾ ತೆರಂ ||**
**ಈ ಹೂಬಾಣನು ಬಾಧೆಯಂ ಬಡಿಸುವಂ ತಾನೇ ದಯಂ ತಾಳ್ದನೈ ||**
**ಹಾ ಎನ್ನಯ ತಾಪನೊಂದಿತು ಕಣಾ ಕೇಳ್ತಕ್ಕದೇ ಕೇಳಿದೆ ||೧||**

# ಜಂತನಾಶಕ ಪುಡಿ.




ರಾತ್ರಿ ಊಟದ ತರುವಾಯ ಸಕ್ಕರೆಯೊಡನೆ ೧ ವರ್ಷದಿಂದ ೧೨ ವರ್ಷದ ಹುಡುಗರಿಗೆ ೧ ಚೀಟು, ದೊಡ್ಡವರಿಗೆ ೨ ಚೀಟು ಕೊಡಬೇಕು. ಗರ್ಭಿಣಿ ಸ್ತ್ರೀಯರಿಗೆ ಕೊಡಬಾರದು. ಔಡ್ಲ ಎಣ್ಣೆಯನ್ನು ತೆಗೆದುಕೊಳ್ಳುವ ಕಾರಣ ವಿಲ್ಲ.

# ರ್‍ಯಾಪಿಡ್ ಕ್ಯುಅರ.




ಈ ಅತ್ಯಮೌಲ್ಯ ಔಷಧವು ಅತ್ಯುತ್ತಮ ಮತ್ತು ಬಹು ಬೆಲೆಯುಳ್ಳ ಔಷಧಗಳನ್ನು ಕೂಡಿಸಿ ತಯಾರಿಸಲ್ಪಟ್ಟಿದೆ. ಒಂದೇ ಚೀಟು ಯಾವದೇ ತರದ ತಲೆ ಶೂಲಿ ಇರಲಿ, ತತ್ಕಾಲಕ್ಕೆ ಗುಣ ಕೊಡುವದು. ನೆಗಡಿಗೆ ಮುಂಜಾನೆ ೧ ಚೀಟು, ಸಾಯಂ ಕಾಲಕ್ಕೆ ೧ ಚೀಟು, ಕೊಟ್ಟರೆ ೧೨ ತಾಸುಗಳಲ್ಲಿ ವಾಸಿಯಾಗುವದು. ಬಹಳ ನೆಗಡಿ ಇದ್ದರೆ ನಾಸಿಯಂತೆ ಮೂಗಿನಲ್ಲಿ ಏರಿಸಬೇಕು. ಮುಂಜಾನೆ ಒಂದು, ಮಧ್ಯಾಹ್ನಕ್ಕೆ ಒಂದು, ಸಾಯಂಕಾಲಕ್ಕೆ ಒಂದು, ಹೀಗೆ ೨ ದಿವಸಗಳ ವರೆಗೆ ಕೊಟ್ಟರೆ ಯಾವದೇ ತರದ ಥಂಡಿಜ್ವರ, ಒಣಜ್ವರ ಇರಲಿ ವಾಸಿಯಾಗುವದು. ೧೦ ಅಥವಾ ೧೨ ಚೀಟು ತಕ್ಕೊಂಡರೆ ಸ್ತ್ರೀಯರ ಬಿಳೀ ಶೆರಗು ವಾಸಿಯಾಗುವದು. ಕೆಮ್ಮು ದಮ್ಮು ಇವುಗಳಿಗೆ ೬ ಅಥವಾ ೮ ಚೀಟು ಕೊಟ್ಟರೆ ಸಾಕು.

೬ ಚೀಟಿನಲ್ಲಿ ಇನ್‌ಫ್ಲು ಯಂಝಾ ನಿಲ್ಲುವದು. ತಟತಟ ಹೊಡೆಯುವ ಹಲ್ಲುನೋವನ್ನು ೨ ಚೀಟುಗಳು ಸಂಪೂರ್ಣ ವಾಸಿಮಾಡುವವು. ನಡ ನೋವು, ಪಕ್ಕಶೂಲಿ, ವಾಯು, ಸಂಧಿವಾತ, ಸೂತಕ ಕ್ರಮ, ನ್ಯೂಮೋನಿಯಾ ಇವುಗಳನ್ನು ತಕ್ಷಣವೇ ನಿಲ್ಲಿಸುವದು.

### ತಕ್ಕೊಳ್ಳುವ ಕ್ರಮ.

ಔಷಧದ ಪುಡಿಗಳನ್ನು ಬಾಯಿಯಲ್ಲಿ ಹಾಕಿಕೊಂಡು ಮೇಲೆ ಬಿಸಿ ನೀರು ಅಥವಾ ಬಿಸಿ ಚಹಾ ಕಾಫಿ ಕುಡಿಯಬೇಕು.

ಚೇಳು ಕಡತಕ್ಕಾದರೂ ಹೊಟ್ಟೆಯೊಳಗೆ ಮೇಲೆ ಹೇಳಿದ ಪ್ರಕಾರ ತಕ್ಕೊಂಡಲ್ಲಿ ಕೂಡಲೆ ನೋವು ನಿಲ್ಲುವದು.

ದೊಡ್ಡವರಿಗೆ ಸರ್ತಿಗೆ ೧ ಚೀಟು ಅಥವಾ ೮-೧೦ ಗುಂಜಿ.

ಅಶಕ್ತರು ಅರ್ಧ ಪುಡಿ ತಕ್ಕೊಳ್ಳಬೇಕು.

ಸಣ್ಣವರಿಗೆ ( ೫-೧೦ ವರ್ಷ ) ¾ ಚೀಟು ಅಥವಾ ೪-೫ ಗುಂಜಿ.

ಮಕ್ಕಳಿಗೆ ( ೨-೫ ವರ್ಷ ) ½ ಚೀಟು ಅಥವಾ ೩ ಗುಂಜಿ.

ಕೂಸುಗಳಿಗೆ ¼ ಚೀಟು ಅಥವಾ ೧-೧॥ ಗುಂಜಿ.

ಒಂದೇಸವನೆ ೪ ನಾರೆ ಈ ಔಷಧ ಉಪಯೋಗ ಮಾಡಿದ ನಂತರ ನಮ್ಮ ಜುಲಾಬಿನ ಗುಳಿಗೆ ಜುಲಾಬಿಗಾಗಿ ತಕ್ಕೊಳ್ಳಬೇಕು.

**ಝೇಂಡಾ ಕೆಮಿಕಲ ವರ್ಕ್ಸ,**
ಅರಳಿಕಟ್ಟಿ ಕಂಪೌಂಡ, **ಬೆಳಗಾವಿ.**

---

# ಅರುಣೋದಯ.

ಉಜ್ವಲ ರಾಷ್ಟ್ರೀಯ ವಾರಪತ್ರಿಕೆಯು.

ಸಂಪಾದಕರು:--**ಪಂಡಿತ ವೆಂಕಟರಾಯರು, ಎಲೆಲ್. ಬಿ.**

ಈ ಪತ್ರಿಕೆಯಲ್ಲಿ ವಿವಿಧ ವಿಷಯಗಳ ಮೇಲೆ ನುರಿತ ಲೇಖಕರ ವಿಚಾರ ಪರಿಪ್ಲುತವಾದ ಲೇಖಗಳೂ, ಕರ್ನಾಟಕ, ಹಾಗೂ ದೇಶ ವಿದೇಶಗಳ ಸುದ್ದಿಸಂಗತಿಗಳೂ ಬರುವವು. ಅಲ್ಲದೆ ಸಣ್ಣ ಸಣ್ಣ ಕತೆಗಳೂ ಸ್ಫೂರ್ತಿದಾಯಿಕ ಕವಿತೆಗಳೂ ವಿಶ್ವವೈಚಿತ್ರ್ಯವೂ ಪ್ರತಿವಾರ ತಪ್ಪದೇ ಬಂದೇ ಬರುವವು. ವ್ಯಾಪಾರಸ್ಥರೂ ಕಾರಖಾನದಾರರೂ ತಮ್ಮ ಪ್ರಕಟನೆಗಳನ್ನು ಕೊಟ್ಟು ಲಾಭ ಪಡೆಯಬೇಕು. ಅಲ್ಲಲ್ಲಿ ಸುದ್ದಿಗಾರರೂ ಎಜಂಟರೂ ಬೇಕು. ಹೆಚ್ಚಿನ ಸಂಗತಿಗಾಗಿ ತಿಳಕೊಳ್ಳಬೇಕು.

**ಆಡಳಿತೆಗಾರರು, ಅರುಣೋದಯ ಬೆಳಗಾವಿ.**

---

# ಸಂಯುಕ್ತ ಕರ್ನಾಟಕ.

ಸಂಪಾದಕರು:—**ಮೋಹರೆ ಹನುಮಂತರಾಯರು.**

ಉಜ್ವಲ ರಾಷ್ಟ್ರೀಯ ದೈನಿಕ ಹಾಗೂ ಸಾಪ್ತಾಹಿಕ ಪತ್ರಿಕೆ. ಕರ್ನಾಟಕ, ಹಿಂದುಸ್ತಾನ ಹಾಗೂ ಪರದೇಶಗಳ ಸುದ್ದಿಗಳನ್ನು ಸಕಾಲದಲ್ಲಿ ಪೂರೈಸುವ ಪತ್ರಿಕೆ ಎಂದರೆ ಇದೊಂದೇ. ಬ್ರಿಟಿಶ್ ಕರ್ನಾಟಕದಲ್ಲಿ ಅಸೋಸಿಯೆಟೆಡ್ ಪ್ರೆಸ್ಸದ ತಂತಿಯ ಸಮಾಚಾರಗಳನ್ನು ಪ್ರಕಟಿಸುವ ಪತ್ರಿಕೆಯೆಂದರೂ ಸಂಯುಕ್ತಕರ್ನಾಟಕ ಒಂದೇ ಇರುವದು. ಬೇಗನೆ ಚಂದಾದಾರರಾಗಿರಿ. ಜಾಹಿರಾತುದಾರರು ಜಾಹೀರಾತುಗಳನ್ನು ಕೊಟ್ಟು ಲಾಭಹೊಂದಬೇಕು.

**ಚಂದಾವಿವರ.**

| ದೈನಿಕ ಸ್ಥಳಿಕರಿಗೆ | | ಪರಸ್ಥಳದವರಿಗೆ |
|---|---|---|
| ತಿಂಗಳಿಗೆ | ೦-೧೩-೦ | ೧- ೪-೦ |
| ಮೂರು ತಿಂಗಳಿಗೆ | ೨- ೬-೦ | ೩-೧೧-೦ |
| ಆರು ,, | ೪-೧೪-೦ | ೭- ೫-೦ |
| ವರ್ಷಕ್ಕೆ | ೯-೧೨-೦ | ೧೪-೧೦-೦ |
| ಸಾಪ್ತಾಹಿಕ | ೨- ೪-೦ | ೩- ೦-೦ |

ವ್ಯವಸ್ಥಾಪಕ,

**ಸಂಯುಕ್ತಕರ್ನಾಟಕ, ಬೆಳಗಾವಿ.**

